

# ಹೊಸತು




ಜುಲೈ ೨೦೦೧
ಬೆಲೆ : ರೂ. ೧೦

ನೆಮ್ಮದಿಯ ನಾಳೆ ನಮ್ಮದು

# ನಿಸರ್ಗ ಕಲಾನಿಪುಣ ಎಂ. ಜೆ. ಶುದ್ಧೋದನ



**ಎಂ.** ಜೆ. ಶುದ್ಧೋದನ ಅವರು (ಜನನ : ೨ನೇ ಫೆಬ್ರವರಿ ೧೯೧೪) ಮೈಸೂರಿನ ಪ್ರತಿಷ್ಠಿತ ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್ ಅಭ್ಯಾಸ ಮಾಡಿದ್ದಾರೆ. ೧೯೩೮ರ ವೇಳೆಗೆ ಮದರಾಸಿನ ಕಲಾಶಾಲೆಯಲ್ಲಿ ಉನ್ನತ ಶ್ರೇಣಿಯಲ್ಲಿ ತೇರ್ಗಡೆಯಾಗಿ ಡಿಪ್ಲೊಮಾ ಪಡೆದರು. ನಂತರ ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ಡ್ರಾಫ್ಟ್ಸ್‌ಮನ್ ಆಗಿ ೧೯೪೦ರಿಂದ ೪೪ರವರೆಗೆ ಸೇವೆ ಸಲ್ಲಿಸಿದರು. ಚನ್ನಪಟ್ಟಣದ ಔದ್ಯಮಿಕ ಶಾಲೆಯಲ್ಲಿ ೧೯೪೪ರಿಂದ ೧೯೫೫ರವರೆಗೆ ಕಲಾವಿದರಾಗಿ ಹಾಗೂ ಅಧೀಕ್ಷಕರಾಗಿ ಸೇವೆ ಸಲ್ಲಿಸಿದರು.

ತಾವು ವ್ಯಾಸಂಗ ಮಾಡಿದ ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲೇ ೧೯೫೫ರಿಂದ ೧೯೬೯ರವರೆಗೆ ನಿರಂತರವಾಗಿ ವೈಸ್ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿದರು.

೧೯೩೯ರಿಂದ ಇದುವರೆಗೂ ಅರ್ಥಪೂರ್ಣವಾದ ಇಪ್ಪತ್ತು ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ಏರ್ಪಡಿಸಿ ಅಪರೂಪವಾದ ಕಲಾಕೃತಿಗಳಿಂದ ಕಲಾಪ್ರಿಯರನ್ನು ರಂಜಿಸಿದ್ದಾರೆ.

ಶುದ್ಧೋದನರವರು ನಿಸರ್ಗ ತನ್ಮಯತಾ ಸೌಂದರ್ಯದತ್ತ ತಮ್ಮ ಚಿತ್ರಕಲಾ ಒಲವನ್ನು ಮೂಡಿಸಿಕೊಂಡರು. ಜಲವರ್ಣದಲ್ಲೂ ಪರಿಣತಿಯಿದ್ದರೂ ತೈಲವರ್ಣದತ್ತ ಹೆಚ್ಚು ಆಕರ್ಷಿತರಾಗಿರುವ ಇವರ ಪ್ರತಿ ಚಿತ್ರದಲ್ಲೂ ಅರ್ಥಪೂರ್ಣವಾದ ಸಂದೇಶ ತುಂಬಿಕೊಂಡಿದೆ.

೧೯೩೬ ರಿಂದ ೧೯೪೩ರವರೆಗೆ ಮೈಸೂರಿನ ದಸರಾ ವಸ್ತುಪ್ರದರ್ಶನದಲ್ಲಿ ಇವರ ಚಿತ್ರಕಲೆಗೆ ಮೂರು ಚಿನ್ನದ ಪದಕಗಳು ಹಾಗೂ ಏಳು ರಜತ ಪದಕಗಳು ದೊರಕಿವೆ. ಅಲ್ಲದೆ ಕಲ್ಕತ್ತಾ ಮತ್ತು ಕೊಡೈಕೆನಾಲ್ ಚಿತ್ರಕಲಾ ಪ್ರದರ್ಶನಗಳಲ್ಲಿ ಮೆಚ್ಚಿಗೆಯ ಅರ್ಹತಾಪತ್ರಗಳನ್ನು ಪಡೆದಿದ್ದಾರೆ.

ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ (೧೯೭೧), ಎಂ.ಟಿ.ವಿ. ಆಚಾರ್ಯ ಪ್ರಶಸ್ತಿ (೧೯೯೪), ರಾಮ್‌ಸನ್ಸ್ ಕಲಾಪ್ರತಿಷ್ಠಾನದ ೧೯೯೬ರ ಶಿಲ್ಪಶ್ರೀ ಪ್ರಶಸ್ತಿ, ೧೯೯೭ರ ರಾಜ್ಯೋತ್ಸವ ಪ್ರಶಸ್ತಿ ಪಡೆದಿರುವ, ನಮ್ಮೊಡನಿರುವ ಹಳೆಯ ತಲೆಮಾರಿನ ಖ್ಯಾತ ಕಲಾವಿದರಾಗಿ ಎಂ. ಜೆ. ಶುದ್ಧೋದನ ಅವರು ಎಂಬತ್ತೇಳು ವಸಂತಗಳನ್ನು ಪೂರೈಸಿಯೂ ನಿರಂತರವಾಗಿ ನಿಸರ್ಗ ಕಲಾನಿಪುಣರಾಗಿ ಚಿತ್ರ ರಚನೆಯಲ್ಲಿ ಮಗ್ನರಾಗಿರುವುದು ಹೆಮ್ಮೆ ಪಡುವ ವಿಷಯ.

ಬೆಂಗಳೂರಿನ ವಿಧಾನಸೌಧ ಹಾಗೂ ರಾಜಭವನದ ಕಲಾಕಾರ್ಯಗಳಿಗೆ ಇವರದೇ ನಿರ್ದೇಶನ. ಇವರು ರಚಿಸಿರುವ ಪೂರ್ಣ ಪ್ರಮಾಣದ ಮಹಾತ್ಮ ಗಾಂಧಿಯವರ ಭಾವ ಚಿತ್ರವನ್ನು ಅಸೆಂಬ್ಲಿ ಹಾಲಿನಲ್ಲಿ ಡಾ|| ರಾಧಾಕೃಷ್ಣನ್ ೧೯೬೫ರಲ್ಲಿ ಅನಾವರಣಗೊಳಿಸಿದ್ದರು.

ನವದೆಹಲಿಯ ಅಖಿಲ ಭಾರತ ಚಿತ್ರಕಲಾ ಮತ್ತು ಕೈಗಾರಿಕಾ ಸೊಸೈಟಿಯವರು ದೀರ್ಘಕಾಲ ಕಲಾಪರಿಣತಿ ಪಡೆದವರಿಗೆ ಕೊಡುವ ''ಕಲಾಪರಿಣತಿ'' ಪ್ರಶಸ್ತಿ (೧೯೯೯) ಮತ್ತು ೧೯೯೯ರ ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪಡೆದಿರುವುದು ಇವರ ಹೆಗ್ಗಳಿಕೆ.

- *ಪಿ. ಎಂ. ರಾಜನ್, ಎಂ. ಎ.*
*ಕಲಾವಿಮರ್ಶಕ*

*೨೫೦, ತ್ಯಾಗಮಾರ್ಗ, ಸಿದ್ಧಾರ್ಥ ನಗರ*
*೧ನೇ ಹಂತ, ಮೈಸೂರು-೫೭೦ ೦೧೧*









# ಹೊಸತು

## ಒಳಗೇನಿದೆ.....




ಚಿತ್ರಗಳು : ಪಿ. ಮಹಮ್ಮದ್, ಸತೀಶ್ ಯಲ್ಲಾಪುರ
ವಸಂತ ಹೊಸಬೆಟ್ಟು, ಹರಿಣಿ, ಜಿ. ಎಂ. ಬೊಮ್ನಳ್ಳಿ, ರವಿಕುಮಾರ್ ಅಜ್ಜೀಪುರ
ಮುಖಪುಟದಲ್ಲಿ : ಎ. ಎನ್. ಮೂರ್ತಿರಾವ್
ವರ್ಣಚಿತ್ರ : ಕೆ. ಪಿ. ಸ್ವಾಮಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


**ಕು**ಡಿತದ ಮತ್ತು ಗಾಂಜಾದ ಅಮಲಿನಲ್ಲಿ ನೇಪಾಳದ ರಾಜ-ರಾಣಿ ಮತ್ತು ಪರಿವಾರದವರನ್ನು ನೇಪಾಳದ ರಾಜಧಾನಿಯ ಅರಮನೆಯಲ್ಲಿ ದೀಪೇಂದ್ರನೇ ಗುಂಡಿಟ್ಟು ಕೊಂದನೆಂದು ಈಗಿನ ರಾಜನು ನೇಮಿಸಿದ್ದ ಅಧಿಕೃತ ಸಮಿತಿ ತಿಳಿಸಿದೆ. ಅರಮನೆಗಳಲ್ಲಿ ಏನೆಲ್ಲ ನಡೆಯುತ್ತಿರುತ್ತದೆ, ಕಂಠಪೂರ್ತಿ ಕುಡಿದು ಪ್ರಭುವಿನ ಕುಟುಂಬದವರು ಹೇಗೆ ತೂರಾಡುತ್ತಿರುತ್ತಾರೆ, ಕತ್ತಿ ಮಸೆತ ಹೇಗೆ ಸಾಗುತ್ತಿರುತ್ತದೆ, ಪ್ರೇಮ ಪ್ರಸಂಗಗಳು ಎಷ್ಟು ಘೋರವಾಗಿ ಪರಿಣಾಮ ಬೀರುತ್ತವೆ, ಮುಂತಾದುವೆಲ್ಲಾ ಇಂದು ಜನರ ಕಣ್ಣ ಮುಂದೆ ಬಂದಿದೆ. ಪುಸ್ತಕ, ಚಿತ್ರಪಟ, ನಾಟಕಗಳಲ್ಲಿ ರಂಗುರಂಗಾಗಿ ಚಿತ್ರಿತವಾಗುವ ಘಟನೆಗಳು ನಿಜಜೀವನದಲ್ಲಿ ನಡೆದಾಗ ಅದನ್ನು ನಂಬದವರೂ ಇರುತ್ತಾರೆ. ದೀಪೇಂದ್ರ ನಿರಪರಾಧಿಯೆಂದು ಭಾವಿಸುವವರು ಹಿಮಾಲಯದ 'ಹಿಂದು' ರಾಜ್ಯದಲ್ಲೂ ಇದ್ದಾರೆ. ಅವರ ಪ್ರಜ್ಞೆಯನ್ನು ಎರಡು-ಮೂರು ಶತಮಾನಗಳಿಂದ ಬೆಳೆಸಿರುವುದೇ ಹಾಗೆ. ಜಯಚಾಮರಾಜ ಒಡೆಯರ್ ಸತ್ತಾಗ ನಮ್ಮ ವಾಟಾಳ ನಾಗರಾಜರು ತೊಣಚಿ ಹತ್ತಿದವರಂತೆ ನಡೆದುಕೊಳ್ಳಲಿಲ್ಲವೇ, ಹಾಗೆ. ಈ ಕುಡುಕ ಕೊಲೆಗಾರ ದೀಪೇಂದ್ರನು ಜ್ಞಾನವಿಲ್ಲದೆ ಬಿದ್ದಿದ್ದಾಗ ಒಂದು ದಿನದ ಮಟ್ಟಿಗೆ ತಾನೂ ರಾಜನಾಗಿದ್ದನೆಂದರೆ ಇದೆಂಥಾ ರಾಜಪ್ರಭುತ್ವವೆಂದು ಹೇಸಿಗೆಯುಂಟಾಗುವುದು ಸಹಜ. ಬದುಕಿದರೆ ಕಾರಾಗೃಹಕ್ಕೆ ದೂಡಲ್ಪಡಬೇಕಾದವನು ಅನಭಿಷಕ್ತ ದೊರೆ; ಅವನಿಗೆ ಆ ದೇಶದ ಚುನಾಯಿತ ಪ್ರತಿನಿಧಿಗಳು ಅಧೀನರು ! ಮಸೀದಿಯನ್ನು ಕೆಡವಿ ಭಾರತದಲ್ಲಿ ಕೇಂದ್ರ ಮಂತ್ರಿಗಳಾಗಿ ವಿಜೃಂಭಿಸುವಂತೆ ಕಾಠ್ಮಂಡುವಿನಲ್ಲೂ ಅರಮನೆಯ ಹತ್ಯೆಗಳಿಗೆ ಕಾರಣನಾದವನು ದೊರೆಯಾಗಬಹುದು. ರಾಜಮನೆತನಗಳ ಪ್ರಭುತ್ವವೆನ್ನುವುದು ಎಷ್ಟು ಹೊಲಸು ಮತ್ತು ಕಳಪೆಯದು ಎಂಬುದಕ್ಕೆ ಇದೊಂದು ನೂತನ ನಿದರ್ಶನ. ಅಂತಹ ಪ್ರಭುತ್ವವು 'ಹಿಂದು ಪ್ರಭುತ್ವ' ಎಂಬ ಕಾರಣಕ್ಕಾಗಿ ಭಾರತವು ಕಣ್ಣೀರು ಸುರಿಸಬೇಕು, ಈ 'ಹಿಂದು ಪ್ರಭುತ್ವ'ವನ್ನು ನಾಶಮಾಡಲು ಪಾಕಿಸ್ತಾನದ ಗೂಢಚಾರ ಸಂಸ್ಥೆ ಮುಂದಾಗಿದೆ, ಎಂದು ಕೆಲವು 'ಅಪ್ಪಟ ಭಾರತೀಯರು' ಕೊರಗಿದ್ದಾರೆ. ಕುಡಿತ-ಕೊಲೆ, ಇವನ್ನು ನಿಚ್ಚಳ ಲಕ್ಷಣಗಳನ್ನಾಗುಳ್ಳ ರಾಜಪ್ರಭುತ್ವ ನಾಶವಾದರೆ ಮರುಕವೇಕೆಂದು ಅರ್ಥವಾಗುವುದಿಲ್ಲ.

ದೀಪೇಂದ್ರನೇ ಎಲ್ಲಾ ಮಾಡಿದ್ದೆಂಬ ತೀರ್ಮಾನ ಪ್ರಶ್ನಾತೀತವಲ್ಲ. ಅರಮನೆಯ ಭದ್ರತಾ ಪಡೆ, ಸೇವಕರು, ಮುಂತಾದವರು ಯಾರೂ ಮಧ್ಯಪ್ರವೇಶ ಮಾಡಲಿಲ್ಲವೇಕೆ ? ಅವರಾರಿಗೂ ಪೆಟ್ಟು ಏಕೆ ಬೀಳಲಿಲ್ಲ ? ಕುಡಿತದ ಅಮಲಿನಲ್ಲಿದ್ದ ಧೀರ ರಾಜಕುಮಾರ ಅಷ್ಟೊಂದು ಜನರನ್ನು ಗುರಿಯಿಟ್ಟು ಹೊಡೆಯುತ್ತಿದ್ದಾಗ ಮಿಕ್ಕವರೆಲ್ಲಾ ಬಾಯಿಯಲ್ಲಿ ಮುದ್ದೆ ತುರುಕಿಕೊಂಡಿದ್ದರೆ ? — ಈ ಪ್ರಶ್ನೆಗಳಿಗಿಂತ ನಮಗೆ ಮುಖ್ಯವಾದ್ದು ಭಾರತ-ನೇಪಾಳ ಸಂಬಂಧಗಳಿಗೆ ಸಂಬಂಧಿಸಿದ್ದು. ಅಲ್ಲಿಯ ಜನ ಮತ್ತು ಜನಪ್ರತಿನಿಧಿಗಳು ನಮಗೆ ರಾಜಮನೆತನದವರಿಗಿಂತ ಹೆಚ್ಚು ಮುಖ್ಯರು. ಈಗಿನ ದೊರೆ ಜ್ಞಾನೇಂದ್ರನನ್ನು ತಣಿಸುವುದು ನಮ್ಮ ಉದ್ದೇಶವಾಗಕೂಡದು. ಅಂತೆಯೇ, ನೇಪಾಳವು ತನ್ನ ನೆರೆರಾಜ್ಯಗಳೊಡನೆ ಮೈತ್ರಿ ಸಂಬಂಧಗಳನ್ನು ಹೇಗೆ ಬೆಳೆಸಿಕೊಳ್ಳುತ್ತದೆಂಬುದು ನಮ್ಮ ಅಪೇಕ್ಷೆಯಂತೆ ಇರಬೇಕಾಗಿಲ್ಲ. ಯಾವುದೇ ಸಾರ್ವಭೌಮ ರಾಷ್ಟ್ರಕ್ಕೆ ತಗುವ ಮನ್ನಣೆ ನಮ್ಮಿಂದ ನೇಪಾಳಕ್ಕೆ ಸಿಗಬೇಕು. ನೇಪಾಳದಲ್ಲಿರುವ ಅಮೆರಿಕಾದ ರಾಯಭಾರಿ ಯಥಾಪ್ರಕಾರ ದೊಡ್ಡಣ್ಣನ ಠಕ್ಕನ್ನು ಮೆರೆಯುತ್ತಿರುವಾಗ ಭಾರತ ಹ್ಲೂಂಗುಟ್ಟುವ ದಾಸನಾಗಬಾರದು. ನೇಪಾಳದ ಸೈನ್ಯಾಧಿಕಾರಿಗಳ ಕುತಂತ್ರಗಳೇನಾದರೂ ಇದ್ದರೆ ಅವನ್ನು ರಾಜಕೀಯವಾಗಿ ಎದುರಿಸಬೇಕಾದವರು ಆ ದೇಶದ ಜನ; ಭಾರತದ ಕೇಂದ್ರ ಸರ್ಕಾರವಲ್ಲ.

* * *

**ಪ**ರಿಸರ ದಿನವನ್ನು ಹಲವು ರೀತಿಗಳಲ್ಲಿ ಆಚರಿಸಲಾಗಿದೆ. ಕಳೆದ ವರ್ಷ ನೆಟ್ಟಿದ್ದ ಸಸಿಗಳ ಪೈಕಿ ಇಷ್ಟು ಉಳಿದಿವೆ, ಅವನ್ನು ನೋಡಬನ್ನಿ ಎಂದವರು ಕಡಿಮೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಈ ದಿನವನ್ನು ಅಸಹ್ಯವಾದ ರೀತಿಯಲ್ಲಿ ಆಚರಿಸಲಾಯಿತು. ಸಮಾರಂಭಕ್ಕೆ ನಾಲ್ಕು ಜಾತಿಯ ಸ್ವಾಮಿಗಳು, ಮುಖ್ಯಮಂತ್ರಿಗಳೂ ಸೇರಿದಂತೆ ಹತ್ತು ಮಂದಿ ಮಂತ್ರಿಗಳು ಮತ್ತು ಒಬ್ಬ ಉಪಕುಲಪತಿ. ಹೆಸರಿಗಾದರೂ ಒಬ್ಬ ಪರಿಸರ ವಿಜ್ಞಾನಿ ಇರಲಿಲ್ಲ. ವಿಶ್ವವಿದ್ಯಾನಿಲಯವನ್ನು ಬರಡು ಮಾಡುತ್ತಿರುವ ವಿಧಾನಗಳಲ್ಲಿ ಇದೂ ಒಂದು. ಅಥವಾ ಈ ವಿಶಿಷ್ಟ ಆಯ್ಕೆಯೂ ಅರ್ಥವತ್ತಾದ್ದೇ ಇರಬೇಕು: ಏಕೆಂದರೆ, ಸಾಂಸ್ಕೃತಿಕ-ಸಾಮಾಜಿಕ ಪರಿಸರದ ಮಾಲಿನ್ಯಕ್ಕೆ ಸಾಕಷ್ಟು ಕಾರಣರೆಂದು ಈ ಸ್ವಾಮಿಗಳನ್ನೂ ಕಾಂಗ್ರೆಸ್ ಮಂತ್ರಿಗಳನ್ನೂ ಬರಮಾಡಿಕೊಂಡಿದ್ದಿರಬೇಕು. ಉಪಕುಲಪತಿಗಳಿಗೆ ಎರಡನೆಯ ಅವಧಿಯ ತರಾತುರಿಯೂ ಇರಬಹುದು.




ಸಂಪುಟ-೨ ಸಂಚಿಕೆ - ೧೨ ಜುಲೈ ೨೦೦೧

ಪ್ರಧಾನ ಸಂಪಾದಕ

ಜಿ. ರಾಮಕೃಷ್ಣ

ಸಂಪಾದಕ ಮಂಡಲಿ

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

ವ್ಯವಸ್ಥಾಪಕರು

ಎಸ್. ಸುರೇಂದ್ರ
ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಫಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

ಹೊಸತು ಕಚೇರಿಯ ವಿಳಾಸ




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in

## ಶರಣಾಗತಿಯ ಶತಮಾನ

ನಾವಿಂದು ಹೊಸ ಶತಮಾನದ ಹೊಸ್ತಿಲಲ್ಲಿ ನಿಂತಿದ್ದೇವೆ. ಕೆಲವರಿಗೆ ಹೊಸ್ತಿಲಲ್ಲಿ ತಳಿರು ತೋರಣಗಳ ಸಂಭ್ರಮದ ಸ್ವಾಗತ ಕಾಣಿಸುತ್ತಿದ್ದರೆ, ಅಸಂಖ್ಯಾತ ಜನಸಮುದಾಯಕ್ಕೆ ನವವಸಾಹತುಶಾಹಿ ಬುಸುಗುಡುತ್ತಿದೆ. ಹೂವು ಅರಳುತ್ತದೆಯೆಂದು ಹೇಳುತ್ತಿರುವಲ್ಲಿ ಹಾವು ಹೆಡೆಯೆತ್ತುತ್ತಿದೆ. 'ಮುತ್ತೈದೆ ಸ್ವಾಗತ' ನೀಡಬೇಕಾದ ಹೊಸ್ತಿಲು, ಹುತ್ತವಾಗಿ ಬೆಳೆದು ಬಡವರನ್ನು ಬೆದರಿಸುತ್ತಿದೆ; ಬೆವರಿನ ಬೇರುಗಳಿಗೆ ಬೆಂಕಿಬಿದ್ದು ಬಂಡವಾಳದ ಬಿಂಕಕ್ಕೆ ಹೊಸ ವಯ್ಯಾರ ಒದಗಿಬಂದಿದೆ.

ಹೊಸ್ತಿಲು ದಾಟಿ ಹೊಸ ಶತಮಾನಕ್ಕೆ ಕಾಲಿಡಲು ಬಂದ ಕೋಟ್ಯಾಂತರ ಬೆವರಿನ ಜನ, ತವರಿನ ನೆನಪಲ್ಲಿ ತಿರುಗಿ ನೋಡುವಂತಾಗಿದೆ.

ತೊಟ್ಟಿಲ ಹೊತ್ಕೊಂಡು ತವರ್ಬಣ್ಣ ಉಟ್ಕೊಂಡು
ಅಪ್ಪ ಕೊಟ್ಟೆಮ್ಮೆ ಹೊಡಕಂಡು
ತೌರೂರ ತಿಟ್ಹತ್ತಿ ತಿರುಗಿ ನೋಡ್ಯಾಳೊ !

ಎಂಬ ಜನಪದ ಗೀತೆ ಈ ಸಂದರ್ಭದಲ್ಲಿ ನೆನಪಾಗುತ್ತದೆ. ಇಪ್ಪತ್ತನೇ ಶತಮಾನದ ತವರಿನ ಹೆಣ್ಣು ಹೊಸ ಶತಮಾನದ ಮುಂದೆ ನಿಂತಾಗ ಉಕ್ಕಿಬರುವ ನೆನಪುಗಳು ಒಂದಲ್ಲ ಎರಡಲ್ಲ, ನೂರಾರು. ಹಾಗಾದರೆ ಇಪ್ಪತ್ತನೆಯ ಶತಮಾನ 'ತವರಿನ ಮನೆ'ಯೆ ? ಇಪ್ಪತ್ತೊಂದನೆಯ ಶತಮಾನ 'ಗಂಡನ ಮನೆ'ಯೆ ? ಹೊಸ ಕನಸುಗಳನ್ನು ಹುಟ್ಟಿಸಿರುವ ಇಪ್ಪತ್ತೊಂದನೆಯ ಶತಮಾನ ಒಂದರ್ಥದಲ್ಲಿ ಬಡಹೆಣ್ಣಿನ 'ಗಂಡನ ಮನೆ.' ಹೊಸ ಕನಸುಗಳು ಭ್ರಮೆಗಳಾಗಿ ಗಂಡನ ಷಂಡತನ ಬಯಲಾಗುವ ಎಲ್ಲ ಲಕ್ಷಣಗಳಿರುವಾಗ - ನಿಜ- ಹೊಸ ಶತಮಾನ, ಬಡವರ ಪಾಲಿಗೆ ಬಂಜೆಭೂಮಿಯಾಗಿ ಕಾಣಿಸತೊಡಗಿದೆ.

ಒಂದು ಮಾತಿನಲ್ಲಿ ಹೇಳಬೇಕೆಂದರೆ, ಇಪ್ಪತ್ತೊಂದನೆಯ ಶತಮಾನ ತವರಿನ ತಿಟ್ಟನ್ನು - ಅಂದರೆ ಗುಡ್ಡವನ್ನು - ಹತ್ತುವ ಶತಮಾನ; ಇಪ್ಪತ್ತೊಂದನೆಯ ಶತಮಾನ ತಿಟ್ಟನ್ನು ಇಳಿಯುವ ಶತಮಾನ. ಇಳಿಯುವ ಶತಮಾನವನ್ನೇ ಹತ್ತುವ ಶತಮಾನವೆನ್ನುತ್ತಿರುವುದು ಇಂದಿನ ವಿಪರ್ಯಾಸ !

ಹಾಗೆ ನೋಡಿದರೆ, ಇಪ್ಪತ್ತನೆಯ ಶತಮಾನವು ಹೊಸ ಆಶೋತ್ತರ ಹಾಗೂ ಹೋರಾಟಗಳ ಪರಿಸರವನ್ನು ರೂಪಿಸಿತ್ತು. ಬ್ರಿಟಿಷ್ ವಸಾಹತುಶಾಹಿ ವಿರೋಧದ ಹೋರಾಟ, ಅಸ್ಪೃಶ್ಯತೆಯ ವಿರುದ್ಧದ ಸಂಘರ್ಷ, ಸಮಾನತೆಯ ಆಂದೋಲನ, ಸ್ತ್ರೀಪರ ಸುಧಾರಣಾವಾದಿ ಕ್ರಿಯೆ - ಹೀಗೆ ಚಲನಶೀಲತೆಗೆ ಒತ್ತಾಸೆಯಾದ ನೆಲೆಗಳು ಜಾಗೃತಗೊಂಡಿದ್ದವು; ಸಾಂಪ್ರದಾಯಿಕ ಜಡನೆಲೆಗಳು ಬೆದರಿ ಬಸವಳಿಯತೊಡಗಿದ್ದವು. ಬ್ರಿಟಿಷರ ವಿರುದ್ಧದ ಹೋರಾಟ ನಡೆಯತೊಡಗಿದಾಗ ರಾಷ್ಟ್ರೀಯತೆಯ ಜೊತೆಗೆ ಉಪರಾಷ್ಟ್ರೀಯತೆಯ ಪರಿಕಲ್ಪನೆಯೂ ಪ್ರಬಲವಾಗಿ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಗಳು ರಾಷ್ಟ್ರೀಯತೆಯ ಉತ್ಕರ್ಷದಲ್ಲಿ ಬತ್ತಿಹೋಗದಂತೆ ಎಚ್ಚರ ವಹಿಸಲಾಗಿತ್ತು. ಸ್ವಾತಂತ್ರ್ಯಪೂರ್ವದ ಸಂದರ್ಭದಲ್ಲಿ ರಾಜಕೀಯ ಸರ್ವಾಧಿಕಾರವನ್ನು ಗಾಂಧೀಜಿಯವರ ನೇತೃತ್ವದಲ್ಲಿ ವಿರೋಧಿಸಿದರೆ, ಸಾಮಾಜಿಕ ಸರ್ವಾಧಿಕಾರವನ್ನು ಅಂಬೇಡ್ಕರ್ ನೇತೃತ್ವದಲ್ಲಿ ಪ್ರತಿಭಟಿಸಲಾಯಿತು. ದೇಶದೊಳಗಿನ ಆರ್ಥಿಕ ಸರ್ವಾಧಿಕಾರವನ್ನು ಸಮತಾವಾದಿಗಳು ವಿರೋಧಿಸಿದರು. ಹೀಗೆ ಸ್ವಾತಂತ್ರ್ಯಪೂರ್ವ ಸನ್ನಿವೇಶದಲ್ಲಿ ಮೂರು ಆಯಾಮಗಳಲ್ಲಿ ವ್ಯಕ್ತವಾದ 'ವಿರೋಧ' ಕೇವಲ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ವರೂಪವನ್ನಷ್ಟೇ ಪಡೆಯದೆ ಸಾಂಸ್ಕೃತಿಕ ಪರಿಣಾಮವನ್ನೂ ಬೀರಿದ್ದರಿಂದ ಹೊಸ ಪರಿಭಾಷೆ ರೂಪುಗೊಂಡಿತು. ಹೊಸ ಹೊಸ ಅಭಿವ್ಯಕ್ತಿಗಳು ಕಾಣಿಸಿಕೊಂಡವು. ಅಷ್ಟೇ ಅಲ್ಲ, ಕೈಗಾರಿಕೀಕರಣದ ಫಲವಾಗಿ ಕುಲಮೂಲ ಉತ್ಪಾದನೆಯ ಸಂಪ್ರದಾಯವನ್ನು ಮುರಿಯಲಾಯಿತು. ಸಾಮೂಹಿಕ ಉತ್ಪಾದನಾ ವ್ಯವಸ್ಥೆ ರೂಪುಗೊಂಡಿದ್ದರ ಫಲವಾಗಿ, ಸಾಮಾಜಿಕ ಅಂತರ ಕಡಿಮೆಯಾಗತೊಡಗಿತು. ಯಾರು ಅಸ್ಪೃಶ್ಯ, ಯಾರು ಹಿಂದುಳಿದ ವರ್ಗ ಎಂದೆಲ್ಲ ನೋಡದೆ ಒಟ್ಟಿಗೆ ಒಂದು ಸೂರಿನಡಿ, ಉತ್ಪಾದನಾ ಕ್ರಿಯೆಯಲ್ಲಿ ಭಾಗವಹಿಸಬೇಕಾಗಿ ಬಂದದ್ದು ಒಂದು ಹೊಸ ಅಧ್ಯಾಯವೇ ಸರಿ. ಆದರೆ ಇಲ್ಲಿ ಬಲವಾಗುತ್ತ ಬಂದ ಬಂಡವಾಳಶಾಹಿಯು ಊಳಿಗಮಾನ್ಯ ಪ್ರಭುಗಳ ಪ್ರವೃತ್ತಿಯನ್ನು ಮುಂದುವರೆಸುತ್ತ ಬಂದು ಅಸಮಾನತೆಯ ಹಾಸಿಗೆಯಲ್ಲಿ ಭೋಗ ಭರತ ಚಕ್ರಿಯಾಗಿ, ಬಿಡುವಿನಲ್ಲಿ ಯೋಗ ಪಠಣ ಮಾಡಿದ್ದು ಈಗ ಇತಿಹಾಸ. ಸ್ವಾತಂತ್ರ್ಯಾನಂತರವೂ ಇದೇ ಪ್ರವೃತ್ತಿ ಮುಂದುವರೆದು ಅಭಿವೃದ್ಧಿಯ ತೀವ್ರತೆಗೆ ಧಕ್ಕೆ ತಂದದ್ದಲ್ಲದೆ ಪ್ರಜಾಪ್ರಭುತ್ವವನ್ನು ಓಟಿನ ರಾಜಕೀಯಕ್ಕೆ ಸೀಮಿತಗೊಳಿಸಿದ್ದು ಶತಮಾನದ ಸಂಕಟವೇ ಸರಿ. ಈ ಸಂಕಟದ ನಡುವೆಯೂ ಸಂಘರ್ಷ, ಸಾಮರಸ್ಯ, ಸಂಭ್ರಮಗಳನ್ನು ಸಮತೋಲಗೊಳಿಸುವ ವಿವೇಕವೊಂದು ಇಪ್ಪತ್ತನೆಯ ಶತಮಾನದ ಅಂತರಂಗದಲ್ಲಿ ಅರುಳುತ್ತಲೇ ಇತ್ತು. ಹೀಗಾಗಿ ಇಪ್ಪತ್ತನೆಯ ಶತಮಾನದಲ್ಲಿ ಭೂ ಸುಧಾರಣೆ, ಲಿಂಗ ಸಮಾನತೆ, ಮೀಸಲಾತಿ, ಬ್ಯಾಂಕ್ ರಾಷ್ಟ್ರೀಕರಣ, - ಮುಂತಾದ ಪ್ರಗತಿಪರ ಕ್ರಿಯೆಗಳು ಕೇವಲ ಹೋರಾಟದ ಅಂಶಗಳಾಗದೆ ಆಡಳಿತದ ನೀತಿಯಾಗಿ ರೂಪಾಂತರಗೊಂಡದ್ದು ಒಂದು ವಿಶೇಷ. ಇದು ಸಾಮಾಜಿಕ - ಆರ್ಥಿಕ ಜಡ ಸಾಂಪ್ರದಾಯಿಕ ನೆಲೆಗಳ ನಿರಾಕರಣೆಯಿಂದ ಸಾಧ್ಯವಾಗತೊಡಗಿತ್ತು.

ಸಾಂಸ್ಕೃತಿಕ ಕ್ಷೇತ್ರವೂ ಇದಕ್ಕೆ ಹೊರತಾಗಿರಲಿಲ್ಲ. ಹೊಸ ವಸ್ತು - ವಿನ್ಯಾಸಗಳ ಮೂಲಕ ಸಮಕಾಲೀನತೆಯನ್ನೇ ಸಂವೇದನೆಯಾಗಿಸಿಕೊಂಡ ಸೃಜನಶೀಲ ಸಂಭವಗಳು ಇಪ್ಪತ್ತನೆಯ ಶತಮಾನದ ಬಹುಮುಖ್ಯ ಭಾಗವಾಗಿವೆ. ಹಿಂದಿನ ಹತ್ತಾರು ಶತಮಾನಗಳನ್ನು ಹೊಸ ಅರ್ಥ ಪರಂಪರೆಯಲ್ಲಿ ಕಾಣುವ ವಿಶಿಷ್ಟ ನೋಟಗಳು, ನಿರಂತರ ಹುಡುಕಾಟಗಳು, ಸಾಹಿತ್ಯಾದಿ ಕಲೆಗಳ ಕ್ಷೇತ್ರದಲ್ಲಿ ಚಿಂತನಶೀಲ ವಾಗ್ವಾದಗಳನ್ನು ಹುಟ್ಟುಹಾಕಿದವು; ಜನಪರತೆಗೆ ಮೌಲ್ಯದ ಮಹತ್ವ ದೊರಕಿಸಿಕೊಟ್ಟವು. ದಂತಗೋಪುರಕ್ಕೆ ಲಗ್ಗೆ ಹಾಕಿದ ಸ್ಫೋಟಗುಣದ ಚಿಂತನೆಗಳು ಗುಡಿ ಗೋಪುರಗಳಾಚೆಯ ಅಪ್ಪಟ ಮನುಷ್ಯನಿಗಾಗಿ ಅನ್ವೇಷಣೆ ನಡೆಸಿದವು. ಸ್ಫೋಟಗುಣದ ಜೊತೆಗೆ ಸಂತಗುಣವೂ ಸೇರಿ ಎಲ್ಲ ರೀತಿಯ ವೈಪರೀತ್ಯಗಳನ್ನು ಹದಕ್ಕೆ ತರುವ ಒಳಹೋರಾಟವು ರೂಪುಗೊಂಡು ಸಮತೋಲನವನ್ನು ಸಾಧಿಸುವ ಒತ್ತಡವಾದದ್ದು ಇಡೀ ಶತಮಾನದ ಒಂದು ವಿಶಿಷ್ಟತೆ. ಆದರೆ ಇಪ್ಪತ್ತನೆಯ ಶತಮಾನದ ಕೊನೆಯ ದಶಕ ಇಪ್ಪತ್ತೊಂದನೆಯ ಶತಮಾನಕ್ಕೆ ಪೀಠಿಕೆ ಹಾಕತೊಡಗಿದಾಗ ಮುಂದಿನ ಪಠ್ಯರಚನೆಯೇ ಬದಲಾಗತೊಡಗಿತು.

# ಸಂಪಾದಕೀಯ

ಸ್ವಾತಂತ್ರ್ಯೋತ್ತರ ಭಾರತದಲ್ಲಿ ತೊಂಬತ್ತರ ದಶಕ ಅಮಾನವೀಯತೆಗೆ ಅಟ್ಟಹಾಸದ ಕಿರೀಟ ತೊಡಿಸಿತು; ಸಾಮರಸ್ಯವನ್ನು ಸೆರೆಮನೆಗೆ ತಳ್ಳಿತು; ಮಂದಿರ-ಮಸೀದಿಗಳ ನಡುವೆ ವಿಷಬಾಣಗಳನ್ನು ಬಿಡುತ್ತಾ ಅವನ್ನೇ ರಾಮಬಾಣಗಳೆಂದು ಕರೆಯಿತು. ವಾಲ್ಮೀಕಿ ರಾಮಾಯಣದ ಜಾಗದಲ್ಲಿ 'ಇಟ್ಟಿಗೆ ರಾಮಾಯಣ'ವನ್ನು ಪ್ರತಿಷ್ಠಾಪಿಸಲಾಯಿತು. ನಮಗೆ ಆದರ್ಶವಾಗಬೇಕಾದ ಕನಕದಾಸರ 'ರಾಮಧಾನ್ಯಚರಿತೆ'ಯ 'ರಾಗಿರಾಮ'ನಿಗೆ ಬದಲಾಗಿ 'ಕೋಮುರಾಮ'ನನ್ನು ಆದರ್ಶವಾಗಿಸುವ ಪ್ರಯತ್ನಕ್ಕೆ ರಾಜಕೀಯ ಬಣ್ಣವೂ ಲಭ್ಯವಾಗಿ ವಿಜೃಂಭಿಸಿದ್ದು ವಿಷಾದಕರ ಬೆಳವಣಿಗೆ. ಜೊತೆಗೆ ಎಲ್ಲ ಧರ್ಮಗಳಲ್ಲೂ ಮೂಲಭೂತವಾದಿಗಳು ದನಿಮಾಡತೊಡಗಿದ್ದು ದುರಂತದಾಯಕ.

ಇನ್ನು ಆರ್ಥಿಕ ಉದಾರೀಕರಣದ ಹೆಸರಿನಲ್ಲಿ 'ಉಳ್ಳವರ ಉದರೀಕರಣ'ಕ್ಕೆ ನಾಂದಿ ಹಾಡಿದ್ದು ಶತಮಾನದ ಹಿನ್ನಡೆ ಎನ್ನಬೇಕಾಗಿದೆ. ಅಲ್ಲೀವರೆಗಿನ ಸಮಾನತೆಯ ಚಿಂತನೆಗಳು, ಸಮತೋಲನ ಪ್ರಕ್ರಿಯೆಗಳು, ತಮ್ಮ ಶಕ್ತಿ ಕಳೆದುಕೊಳ್ಳತೊಡಗಿದ್ದು ಶತಮಾನದ ಮೊದಲ ಮೌನಭೂಕಂಪ. ಸೋವಿಯತ್ ರಷ್ಯಾದ ವಿಘಟನೆಯ ನಿಜ ಕಾರಣಗಳನ್ನು ಹುಡುಕದೆ, ಸಮಾಜವಾದಿ ಆಶಯಗಳ ವಿರೋಧಕ್ಕೆ ಅದನ್ನೊಂದು ಕುಂಟು ನೆಪವಾಗಿಸಿಕೊಂಡು, 'ಸುಧಾರಣೆ' ಎಂಬ ಪರಿಕಲ್ಪನೆಗೆ 'ಬಡವರ ಪರ' ಎನ್ನುವ ಬದಲು 'ಬಂಡವಾಳಿಗರ ಪರ' ಎಂಬ ಅರ್ಥವನ್ನು ಹುಟ್ಟುಹಾಕಿದ್ದು ಒಂದು ಬೌದ್ಧಿಕ ದೀವಾಳಿತನ.

ಹೊಸ ಶತಮಾನದ ಹೊಸ್ತಿಲಲ್ಲಿರುವ ನಾವು ಹಳೆಯ ಶತಮಾನದ ಕೊನೆಯ ದಶಕದ ಬುತ್ತಿಯನ್ನು ನೆತ್ತಿಮೇಲಿಟ್ಟುಕೊಂಡು ನಿಂತಿದ್ದೇವೆ. ಈ ಬುತ್ತಿಯಲ್ಲಿ ಹಸಿವನ್ನು ಹೋಗಲಾಡಿಸುವ ಅನ್ನವಿಲ್ಲ ; ಸುಟ್ಟು ಬೂದಿಮಾಡುವ ಬಾಂಬುಗಳಿವೆ. ಇವು, ಮನುಷ್ಯರ ಭಾವ-ಬಾಂಧವ್ಯಗಳನ್ನು, ಬಡವರ ಬದುಕನ್ನು, ಸಮಾನತೆ-ಸಾಮರಸ್ಯಗಳ ಬೆಳಕನ್ನು, ಪುಡಿಪುಡಿ ಮಾಡಲು ಹೊಂಚು ಹಾಕುತ್ತ ಕೂತಿವೆ. ಬುತ್ತಿ ಬಿಚ್ಚಿದರೂ ಅಪಾಯ; ಬಿಚ್ಚದಿದ್ದರೂ ಅಪಾಯ. ಯಾವಾಗ ಸಿಡಿಯುವುದೊ ಗೊತ್ತಿಲ್ಲದ ಗುರಿಯಿಲ್ಲದ ಪ್ರಯಾಣ.

ಈಗ ನೋಡಿ - ನಮ್ಮೆದುರು ಗಟ್ಟಿಯಾಗಿ ಕೇಳಿಬರುತ್ತಿರುವ ಮಂತ್ರ 'ಜಾಗತೀಕರಣ'. ಬಹುರಾಷ್ಟ್ರೀಯ ಕಂಪನಿಗಳ ಆಗಮನಕ್ಕಾಗಿ ಭಾರತದ ಬಾಗಿಲಲ್ಲಿ ಪೋಣಿಸಿದ ಪ್ರಜಾಪ್ರಭುತ್ವದ ಆತ್ಮಗಳ ತೋರಣ ! ಉದಾರೀಕರಣದ ಮೂಲಕ ಜಾಗತೀಕರಣಕ್ಕೆ ಪ್ರಾರ್ಥನಾಗೀತೆ ಬರೆದ ತೊಂಬತ್ತರ ದಶಕದ ಕಾಂಗ್ರೆಸ್ ಸರ್ಕಾರದ ಕೆಲಸವನ್ನು ಸ್ವದೇಶಿ ಶ್ಲೋಕ ಪಠಣಕಾರರಾದ ಬಿ.ಜೆ.ಪಿ.ಯವರು ಉಗ್ರವಾಗಿ ಮುಂದುವರೆಸುತ್ತಿರುವುದು ಈಗ ಕಣ್ಣೆದುರಿಗಿನ ಸತ್ಯ. ಜಾಗತೀಕರಣವು ಕೈಗಾರಿಕೀಕರಣವಲ್ಲ ಎಂಬ ಅಂಶವನ್ನು ನಾವು ಮೊದಲೇ ಸ್ಪಷ್ಟಪಡಿಸಿಕೊಳ್ಳಬೇಕಾಗಿದೆ. ಕಳೆದ ಶತಮಾನದಲ್ಲಿ ಕಾಲಿಟ್ಟ ಕೈಗಾರಿಕೀಕರಣ, ಗುಡಿಕೈಗಾರಿಕೆಗಳಿಗೆ ಧಕ್ಕೆ ತಂದಿರಬಹುದಾದರೂ ಮೊದಲೇ ಹೇಳಿದಂತೆ ಕುಲಮೂಲ ಉತ್ಪಾದನಾ ವಿಧಾನವನ್ನು ಉಲ್ಲಂಘಿಸಿತು, ಮಾತ್ರವಲ್ಲ, ಮಿಶ್ರ ಆರ್ಥಿಕ ಪದ್ಧತಿಯ ಚೌಕಟ್ಟಿನೊಳಗೆ ದೇಶದ ಆರ್ಥಿಕ ಹಕ್ಕನ್ನು ಉಳಿಸಿಕೊಂಡಿತ್ತು. ಆದರೆ ಈಗ ಬಂದಿರುವ ಜಾಗತೀಕರಣವು ಕೈಗಾರಿಕೀಕರಣದ ಅನೈತಿಕ ವಿದೇಶಿ ವಸಾಹತುವಾಗಿದ್ದು, ಮೂಲಕೈಗಾರಿಕೀಕರಣದ ಪ್ರಜಾಸತ್ತಾತ್ಮಕ ಚೌಕಟ್ಟನ್ನು ಮುರಿಯುತ್ತಿದೆ. ಕೈಗಾರಿಕೀಕರಣವು ಈ ನೆಲದ ಕಾನೂನಿನ ಇತಿಮಿತಿಯಲ್ಲಿ ಅನುಷ್ಠಾನಕ್ಕೆ ಬಂದರೆ, ಜಾಗತೀಕರಣವು ಈ ನೆಲದ ಕಾನೂನಿನ ಇತಿಮಿತಿಗಳನ್ನು ಮೀರಿ, ತನಗೆ ಹೊಂದುವ ಕಾನೂನುಗಳನ್ನು ರೂಪಿಸುವಂತೆ ಮಾಡುತ್ತಿರುವುದು ತೀರಾ ಆತಂಕಕಾರಿ ಸಂಗತಿ. ಜಾಗತೀಕರಣವು ಕೈಗಾರಿಕೀಕರಣದ ಸಂದರ್ಭದಲ್ಲಿ ಹುಟ್ಟಿದ 'ಸಾರ್ವಜನಿಕ ವಲಯ'ಗಳನ್ನು ಸಂಪೂರ್ಣ ವ್ಯರ್ಥವೆಂದು ಘೋಷಿಸುವ ಸ್ಥಿತಿಯನ್ನು ಉತ್ತೇಜಿಸುತ್ತಿದೆಯಲ್ಲದೆ, ಸ್ಥಳೀಯ ಬಂಡವಾಳಕ್ಕೆ ಎದುರಾಗಿ ನಿಂತಿದೆ. ಮೀಸಲಾತಿ, ಸ್ಥಳೀಯರಿಗೆ ಉದ್ಯೋಗ, ಸರ್ಕಾರದ ಪ್ರಜಾಸತ್ತಾತ್ಮಕ ನಿಯಂತ್ರಣ - ಮುಂತಾದ ಹಕ್ಕುಗಳು ಮೂಲೆಗುಂಪಾಗುತ್ತಿವೆ. ಸಂವಿಧಾನಾತ್ಮಕ ಆಶಯಗಳಿಗೆ ಈ ದೇಶದಲ್ಲಿ ಬೆಲೆಯಿಲ್ಲವೆ ಎಂದು ಕೇಳುವಂಥ ಪರಿಸ್ಥಿತಿ ನಿರ್ಮಾಣವಾಗುತ್ತಿದೆ. ಯಾಕೆಂದರೆ ಸಂವಿಧಾನವು ಅಡಕಗೊಳಿಸಿಕೊಂಡ ನೀತಿಗಳನ್ನು, ಮಾರ್ಗದರ್ಶಿ ಸೂತ್ರಗಳನ್ನು ಜಾಗತೀಕರಣ ಮಣ್ಣುಪಾಲಾಗಿಸುತ್ತಿದೆ. ಸಾಮಾಜಿಕ-ಆರ್ಥಿಕ ಪರಿಣಾಮಗಳ ಜೊತೆಗೆ ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಗಳ ಮೇಲೆ ಹಲ್ಲೆ ನಡೆಯುತ್ತಿದೆ. ಇಂದಿನ ಸನ್ನಿವೇಶದಲ್ಲಿ ಇಂಗ್ಲಿಷ್ ಇಲ್ಲದೆ ಉದ್ಯೋಗವಿಲ್ಲ ಎಂಬ ವಾದವನ್ನು ಉದ್ಯಮಪತಿಗಳು ಮಂಡಿಸುತ್ತ ದಿಕ್ಕುತಪ್ಪಿಸುತ್ತಿದ್ದಾರೆ. ಭಾಷೆ, ಶಿಕ್ಷಣ, ಸಂಸ್ಕೃತಿ ಎಲ್ಲಾ ವಿಷಯಗಳಿಗೂ ಉದ್ಯಮದ ವಿಷಗಾಳಿ ಬೀಸಿ ಉಸಿರುಕಟ್ಟುತ್ತಿದೆ. ಸ್ಥಳೀಯ ಭಾಷೆ-ಸಂಸ್ಕೃತಿಯ ಜೀವ ಚೈತನ್ಯವನ್ನು ಬಿಟ್ಟುಕೊಡದೆ ಅನ್ಯ ಭಾಷೆ - ಸಂಸ್ಕೃತಿಗಳು ಅಗತ್ಯ ಹಾಗೂ ಔಚಿತ್ಯಪೂರ್ಣ ಆಸಕ್ತಿ ಬೆಳೆಸಿಕೊಳ್ಳುವುದನ್ನು ವಿವೇಕಿಗಳಾರೂ ವಿರೋಧಿಸುವುದಿಲ್ಲ. ಆದರೆ ಇದಕ್ಕೆ ಹೊರತಾದ ಭ್ರಮೆಗಳನ್ನು ಬಿತ್ತಲಾಗುತ್ತಿದ್ದು ಪ್ರಜಾಪ್ರಭುತ್ವವನ್ನು ಉದ್ಯಮಪತಿಗಳು ಅಪಹರಣ ಮಾಡುತ್ತಿದ್ದಾರೆ.

ಜಾಗತೀಕರಣವೊಂದೇ ಹೊಸಶತಮಾನದ ಆತಂಕವಲ್ಲ; ಸ್ವದೇಶೀಕರಣದ ಕಲ್ಪನೆಯೂ ಆತಂಕ ಹುಟ್ಟಿಸುವಷ್ಟು ಭಯಾನಕವಾಗಿ ಬೆಳೆಯುತ್ತಿದೆ. ಸ್ವದೇಶೀಕರಣದ ಹೆಸರಿನಲ್ಲಿ ಈ ದೇಶದಲ್ಲಿರುವ ಬಹುಸಂಸ್ಕೃತಿ ಪರಂಪರೆಗೆ ಕಿಚ್ಚು ಹಚ್ಚಲಾಗುತ್ತಿದೆಯೇ ಹೊರತು ಅನ್ಯದೇಶೀಯ ಆರ್ಥಿಕ ದಾಳಿಯನ್ನು ತಡೆಯುತ್ತಿಲ್ಲ; ಆರ್ಥಿಕ ದಾಳಿಯೊಂದಿಗೆ ಬೀಸುವ ಸಾಂಸ್ಕೃತಿಕ ಗಾಳಿಯ ಬಗ್ಗೆ ಸರಿಯಾದ ಕಲ್ಪನೆಯೇ ಇಲ್ಲ. ಧರ್ಮಗಳ ಹೆಸರಿನಲ್ಲಿ ಮನುಷ್ಯರನ್ನು ಒಡೆದು ವಿಷಗೋಡೆಗಳನ್ನು ಕಟ್ಟುವ ಹುನ್ನಾರ ಕಡಿಮೆಯಾಗುವ ಬದಲು ಬಲಗೊಳ್ಳುತ್ತಿದೆ. ಸನಾತನ ಸಂಪ್ರದಾಯಗಳನ್ನೇ ಧರ್ಮವೆಂದು ಕರೆದು, ಅವುಗಳನ್ನೇ ಅಂತಿಮ ನೀತಿಯನ್ನಾಗಿ ಹೇರುವ ಪ್ರವೃತ್ತಿ ಢಾಳಾಗಿ ಕಾಣುತ್ತಿದೆ. **ಕೈಗಾರಿಕೀಕರಣವು ಹೇಗೆ ಜಾಗತೀಕರಣವಾಗಬಾರದೊ ಹಾಗೆಯೇ ಸ್ವದೇಶೀಕರಣವು ಕೇಸರೀಕರಣವಾಗಬಾರದು.** ಆದರೆ ಕೋಮುವಾದಿ ಕೇಸರೀಕರಣವನ್ನೇ ಸ್ವದೇಶೀಕರಣ ಎಂದು ನಂಬಿಸಲಾಗುತ್ತಿದೆ.

ಬ್ರಿಟಿಷ್ ವಸಾಹತುಶಾಹಿ ವಿರುದ್ಧದ ಸ್ವದೇಶೀಕರಣಕ್ಕೆ ರಾಷ್ಟ್ರೀಯತೆ ಉಪರಾಷ್ಟ್ರೀಯತೆಗಳ ಗಟ್ಟಿ ನೆಲೆಯಿತ್ತು. ಆದರೆ ಈಗ ನವ ವಸಾಹತುಶಾಹಿಯ ಇಂದಿನ ಸಂದರ್ಭದಲ್ಲಿ ಪ್ರತಿಪಾದಿಸುತ್ತಿರುವ ಸ್ವದೇಶೀಕರಣಕ್ಕೆ ಸಂಸ್ಕೃತಿ-ಉಪಸಂಸ್ಕೃತಿಗಳ ನಿಜದ ನೆಲೆಯಿಲ್ಲ. ಇಂದು ಹುಸಿ ಸಂಸ್ಕೃತಿಯ ಹುನ್ನಾರದಲ್ಲಿ ಸ್ವದೇಶೀಕರಣದ ಕಲ್ಪನೆ ಹುಟ್ಟಿ, ಬೆಳೆಯುತ್ತಿದೆ. ನವವಸಾಹತುಶಾಹಿ

ಮುಂದಿನ ಪುಟಕ್ಕೆ.......

ತಿಂಗಳ ಪತ್ರಿಕೆ
ಹೊಸತು
ನೆನ್ನೆದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ.
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೨೪೯೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

ಜೂನ್ ೨೦೦೧ರ 'ಹೊಸತು'ವಿನ ಮುಖಪುಟ ತುಂಬ ಚೆಲುವಿನಿಂದ ಕಂಗೊಳಿಸುತ್ತಾ ಹೊರಬಂದಿದ್ದು ಒಳ ಪುಟಗಳಲ್ಲಿ ಡಾ|| ಸಿ. ಆರ್. ಚಂದ್ರಶೇಖರ್‌ರವರ ವೈದ್ಯಕೀಯ ದಲ್ಲಿ 'ಹೊಸತು' ಶೀರ್ಷಿಕೆಯಡಿಯಲ್ಲಿ ಪ್ರಕಟವಾದ ಲೇಖನವು ಇಂದಿನ ವೈದ್ಯಕೀಯ ಕ್ಷೇತ್ರಕ್ಕೆ ಹಿಡಿದ ಕೈಗನ್ನಡಿ ಯಾಗಿದ್ದು ಓದುಗರಿಗೆ ವೈದ್ಯಕೀಯ ಕ್ಷೇತ್ರದ ಬಗೆಗಿನ ಅರಿವು ಹೆಚ್ಚಿಸಿದೆ. ಉತ್ತಮ ಆರೋಗ್ಯ ಉಳಿಸಿಕೊಳ್ಳಲು ಮಾರ್ಗ ಸೂಚಿಯಾಗಿದೆ. ಆದರೆ ಲೇಖಕರು ಖಾಸಗೀಕರಣ ಮತ್ತು ವ್ಯಾಪಾರೀಕರಣಗಳಿಂದಾಗಿ ವೈದ್ಯಕೀಯ ಕ್ಷೇತ್ರದಲ್ಲಾಗುತ್ತಿರುವ ದುಷ್ಪರಿಣಾಮಗಳ ಬಗ್ಗೆ ಚರ್ಚಿಸುತ್ತಾ ''ಇಂದು ಸರಕಾರಿ ಆಸ್ಪತ್ರೆಗೆ ಯಾರೂ ಹೋಗಲಿಚ್ಛಿಸುವುದಿಲ್ಲ, ದರಿದ್ರರು, ಕಡು ಬಡವರು ವಿಧಿ ಇಲ್ಲದೆ ಹೋಗುತ್ತಾರೆ'' ಎಂಬ ಮಾತನ್ನು ಹೇಳುತ್ತಾರೆ. ಇದು ಭಾಗಶಃ ನಿಜವಾದರೂ ''ದರಿದ್ರರು'' ಎಂಬುವ ಪದ ಪ್ರಯೋಗ ಅಷ್ಟು ಸಮಂಜಸವಲ್ಲ ಎಂದೆನಿಸುತ್ತದೆ.

ಹಾಗೆಯೇ ವ್ಯಾಪಾರಿ ಮನೋಭಾವದಿಂದ ಚಿಕಿತ್ಸೆಯನ್ನು ನೀಡದೆ ಮಾನವೀಯ ಮೌಲ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ನೀಡಿ ಸಮಾಜದಲ್ಲಿನ ಇತರ ಕ್ಷೇತ್ರಗಳಿಗಿಂತ ಹೆಚ್ಚಿನ ಗೌರವವನ್ನು ವೈದ್ಯಕೀಯ ಕ್ಷೇತ್ರ ಪಡೆದುಕೊಳ್ಳಲಿ ಎಂದು ಹಾರೈಸುತ್ತಾ ಲೇಖಕರಿಗೂ, ಇಂತಹ ಉತ್ತಮ ಲೇಖನ ಪ್ರಕಟಿಸಿದ 'ಹೊಸತು'ವಿಗೂ ಅನಂತ ಧನ್ಯವಾದಗಳು.

*ಮಂಡ್ಯ* *ಎನ್. ಶ್ರೀನಿವಾಸ*

ಜೂನ್ ತಿಂಗಳ ಪತ್ರಿಕೆ ಸಮೃದ್ಧ ವಿಷಯ ಒಳಗೊಂಡಿದೆ. ಇದೇ ರೀತಿ ವೈಚಾರಿಕ ಬರಹಗಳು ಬರುವುದರ ಜೊತೆಗೆ ನೆಮ್ಮದಿಯ ನಾಳೆಗಳನ್ನು ಕಾಯುವುದರಲ್ಲಿ ನಾನೂ ಒಬ್ಬನಾಗಿದ್ದೇನೆ.

*ರಾಯಚೂರು ಜಿಲ್ಲೆ* *ರಾಮರೆಡ್ಡಿ ಮದರಕಲ್*

ಜೂನ್ ೨೦೦೧ರ 'ಹೊಸತು' ಪತ್ರಿಕೆಯನ್ನು ಗಮನಿಸಿದೆ. ಡಾ|| ರಾ. ಸತ್ಯನಾರಾಯಣರ ''ದ್ರಾವಿಡರು ತಮಿಳರು: ಕನ್ನಡಿಗರಲ್ಲ'' ಸಂಶೋಧನೆ ಲೇಖನವನ್ನು ಓದಿದೆ. ಪಾಂಡಿತ್ಯಕ್ಕೆ ಕಸರತ್ತುಕೊಟ್ಟು ದ್ರಾವಿಡತ್ವದ ವಿಚಾರಗಳನ್ನು ತಿಳಿದುಕೊಳ್ಳುವಂತೆಯೂ, ದ್ರಾವಿಡ ರಾಜ್ಯದ ಬಗ್ಗೆ ಒತ್ತು ಕೊಡುವ ಸಂಗತಿಗಳನ್ನು ನಿಜ ಜೀವನದ ಮೂಸೆಯೊಳಗೆ ಚಿಂತಿಸುವಂತೆ




ಮಾಡುತ್ತದೆ. ಶ್ರೇಷ್ಠತೆಯುಳ್ಳ ವಿಚಾರಗಳನ್ನು ಕಲೆಹಾಕುವ ವ್ಯಕ್ತಿತ್ವ ಈ ಲೇಖನಕ್ಕಿದೆ. ಶ್ಲಾಘನೀಯ. ನಿಮಗೂ ಮತ್ತು ಸಂಶೋಧನಾ ಲೇಖಕರಿಗೂ ಆತ್ಮೀಯ ಧನ್ಯವಾದಗಳು.

*ಯಶವಂತಪುರ* *ಹ. ಚ. ಸತ್ಯನಾರಾಯಣ ಉರಾಳ*

ಜೂನ್ ತಿಂಗಳ ಸಂಚಿಕೆಯಲ್ಲಿನ ಪರಸ್ಪರದಲ್ಲಿ ಮೂಡಿ ಬಂದ ಎಂ. ವಿ. ಭಟ್ ಅವರ ''ಇದು ನಮ್ಮ ದೇಶ !'' ಬಹಳ ಚೆನ್ನಾಗಿತ್ತು. ನಮ್ಮ ದೇಶದ ಜನರಲ್ಲಿನ ಬೌದ್ಧಿಕ ದಾರಿದ್ರ್ಯ ನಿವಾರಿಸುವ ಯಾವೊಬ್ಬ ಮಹಾತ್ಮನೂ ನಮ್ಮ ನೂರು ಕೋಟಿ ಜನಸಂಖ್ಯೆಯ ಮಧ್ಯದಲ್ಲಿಲ್ಲವೇ ? ಎಂದು ಖೇದವಾಯಿತು. ಜೊತೆಗೆ ಆ ನೂರುಕೋಟಿ ಜನರಲ್ಲೇ ಅಲ್ಲವೇ ನಾನೂ ! ಎಂಬ ಭಾವನೆ ಮೂಡಿತು. ಇಂದಿನಿಂದಲೇ ಸಾಧ್ಯವಾದಷ್ಟು ನನ್ನ ಅಳಿಲು ಸೇವೆ ಮೂಲಕ ಮೂಢನಂಬಿಕೆ ತೊಲಗಿಸುವತ್ತ ಪ್ರಾಮಾಣಿಕ ಪ್ರಯತ್ನದ ತೀರ್ಮಾನ ನನ್ನದು. ನಮ್ಮ ದೇಶವನ್ನು ಒಂದು ಪುಟದಲ್ಲಿ ಪರಿಚಯಿಸಿದ 'ಹೊಸತು'ವಿಗೂ ಲೇಖಕರಿಗೂ ವಂದನೆಗಳು.

*ಬೆಂಗಳೂರು* *ಮೀನಾಕ್ಷಿ*

ಜೂನ್ ತಿಂಗಳ 'ಹೊಸತು'ವಿನ ತಿಂಗಳ ಕಥೆ 'ಬೊಂಬೆ ಮನೆ' ಚೆನ್ನಾಗಿತ್ತು. ಬೊಂಬೆ ಮನೆಯ ಕಲ್ಪನೆ ಹಾಗೂ ಮಕ್ಕಳ ಮುಗ್ಧ ನಿಷ್ಕಲ್ಮಶ ಮನಸ್ಸನ್ನು ಲೇಖಕರು ಇಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ. ಬಹುಶಃ ಕಥೆಯ ಕೊನೆಯ ಸಾಲಿನಲ್ಲಿ ಎಲ್ಸಿ ತನ್ನ ಅಕ್ಕನಿಗೆ ತನ್ನ ಅಪರೂಪದ ಮುಗುಳ್ನಗೆಯಿಂದ 'ನಾನು ಆ ಬೊಂಬೆ ಮನೆ ನೋಡ್ದೆ' ಎನ್ನುವ ಮಾತು ಕಥೆಯ ಮೌಲ್ಯವನ್ನು ಹೆಚ್ಚಿಸುತ್ತದೆ. ಮಗುವಿನ ಕುತೂಹಲ ಹಾಗೂ ಬೈಸಿಕೊಂಡಿದ್ದಾಗ್ಯೂ ಬೊಂಬೆ ಮನೆ ನೋಡಿದ ಬಳಿಕ ಪಡುವ ಹೆಮ್ಮೆಯನ್ನು ಬಿಂಬಿಸುತ್ತದೆ.

*ಪುತ್ತೂರು* *ಚೇತನ*

ಪತ್ರಿಕೆಯ ಕೆಲಸ ಬೆಚ್ಚಿಬೀಳಿಸುವುದಷ್ಟೇ ಅಲ್ಲ, ವಾಸ್ತವ ಸ್ಥಿತಿಯನ್ನು ಎದುರಿಗಿಟ್ಟು, ವಿಶ್ಲೇಷಿಸಿ, ಅದನ್ನು ಎದುರಿಸುವ ವೇದಿಕೆ ನಿರ್ಮಾಣವಾಗುವಂತಿರಬೇಕು. ಆ ಕೆಲಸ 'ಹೊಸತು' ಮಾಡುತ್ತಿದೆ. ಧನ್ಯವಾದಗಳು.

ನಮ್ಮ ಗ್ರಾಮದ ಎಡಪಂಥೀಯ ಒಲವುಳ್ಳ ಶಿಕ್ಷಕರೆಲ್ಲ ಸೇರಿ ವಿಚಾರವೇದಿಕೆಯಡಿಯಲ್ಲಿ 'ಹೊಸತು' ಸ್ಫೂರ್ತಿಯಿಂದ ಪ್ರಚಲಿತ ವಿದ್ಯಮಾನಗಳಿಗೆ ಹೇಗೆ ಸ್ಪಂದಿಸಬೇಕು ಎಂಬ ಬಗ್ಗೆ ತಿಂಗಳಿಗೊಮ್ಮೆ ಉಪನ್ಯಾಸವನ್ನು ಏರ್ಪಡಿಸುತ್ತಿರುತ್ತಾರೆ. ಇಂತಹ ಕಾರ್ಯಗಳಿಗೆ ಪ್ರೇರಕವಾದ ತಮಗೆ ವಂದನೆಗಳು.

*ವೇಮಗಲ್-೫೬೩೧೫೭* *ವಿಶ್ವನಾಥಗೌಡ, ಎಲ್*
*ಬಿ. ಸಿ. ಆರ್. ಲಕ್ಷ್ಮಣ್*

**ಲೇಖಕರ ಗಮನಕ್ಕೆ**

ನಿಮ್ಮ ಲೇಖನಗಳಿಗೆ ಸ್ವಾಗತವಿದೆ. ಲೇಖನ ಕಳಿಸುವವರು ದಯವಿಟ್ಟು ಸ್ಫುಟವಾಗಿ ಬರೆದು ಕಳಿಸಬೇಕಾಗಿ ವಿನಂತಿ. ಹಸ್ತಪ್ರತಿಯನ್ನು ಸಹನೆಯಿಂದ ಪರಿಶೀಲಿಸಲು ಇದರಿಂದ ಸಾಧ್ಯವಾಗುತ್ತದೆ. ಇಲ್ಲದಿದ್ದಲ್ಲಿ ನಿಮ್ಮ ಮೌಲಿಕ ಲೇಖನ ಸಹ ಪ್ರಕಟವಾಗದಿರಬಹುದು ಎಂಬ ಆತಂಕ ನಮ್ಮದು. ನಿಮ್ಮ ಸಹಕಾರ ನಮಗೆ ಅತ್ಯಗತ್ಯ. ಅನಗತ್ಯವಾಗಿ ಇಂಗ್ಲಿಷ್ ಪದಗಳನ್ನೂ ವಾಕ್ಯಗಳನ್ನೂ ಬಳಸದಿದ್ದರೆ ಅನುಕೂಲವಾಗುತ್ತದೆ.

*- ಸಂಪಾದಕ, 'ಹೊಸತು'*

---

*ಹಿಂದಿನ ಪುಟದಿಂದ.......*

ಜಾಗತೀಕರಣಕ್ಕಿಂತ ಹೆಚ್ಚಾಗಿ ಸ್ವದೇಶದಲ್ಲಿರುವ ಬೇರೆ ಧರ್ಮೀಯರನ್ನು, ಸಂಸ್ಕೃತಿಯ ಬಹುಮುಖತೆಯನ್ನು ವಿರೋಧಿಸುವುದರಲ್ಲಿ ವಿಕೃತಾನಂದ ಪಡುತ್ತಿದೆ. ಪರಸ್ಪರ ವಿರುದ್ಧವಾಗಿರಬೇಕಾಗಿದ್ದ ಜಾಗತೀಕರಣ ಮತ್ತು ಸ್ವದೇಶೀಕರಣಗಳು ತಂತಮ್ಮ ನೆಲೆಗಳ ಏಕಮುಖತೆಯನ್ನು ಹೇರುತ್ತಾ ಸ್ವಭಾವದಲ್ಲಿ ಒಂದಾಗಿರುವುದು ಒಂದು ವೈರುದ್ಧ್ಯವಾಗಿದೆ; ಇಂದು ಶರಣಾಗತಿಯ ಸನ್ನಿವೇಶ ಸೃಷ್ಟಿಯಾಗುತ್ತಿದೆ. ಈ ಮಾತನ್ನು ಹೀಗೆ ಸ್ಪಷ್ಟಪಡಿಸುತ್ತೇನೆ:

ಜಾಗತಿಕ ಗ್ರಾಮದ ಕಲ್ಪನೆಯಲ್ಲಿ ನಮ್ಮ ಗ್ರಾಮಗಳು ಸೊರಗಿ ಶರಣಾಗುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳ ಎದುರು ನಮ್ಮ ಬೃಹತ್ ಕೈಗಾರಿಕೆಗಳೂ ಸಣ್ಣ ಕೈಗಾರಿಕೆಗಳಂತಾಗಿ ಶರಣಾಗುತ್ತಿವೆ. ಏಕಸಂಸ್ಕೃತಿಯ ಸ್ವದೇಶಿ ಕಲ್ಪನೆಯ ಎದುರು ಬಹು ಸಂಸ್ಕೃತಿಯ ಸ್ಥಳೀಯ ಸತ್ವ ಶರಣಾಗುವ ಆತಂಕ ಕಾಣಿಸುತ್ತಿದೆ; ಭೂ ಸುಧಾರಣೆ, ರಾಷ್ಟ್ರೀಕರಣ, ಮೀಸಲಾತಿ, ಸಮಾನತೆ ಮುಂತಾದ ನೀತಿ ನಿಯಮಗಳು ಹಿನ್ನೆಲೆಗೆ ತಳ್ಳಲ್ಪಡುತ್ತಿವೆ. ಧಾರ್ಮಿಕ ಮೂಲಭೂತವಾದಕ್ಕೆ ಧಾರ್ಮಿಕ ಸಾಮರಸ್ಯ ಮತ್ತು ನಿಜಭಕ್ತಿಯ ನೆಲೆಗಳು ಶರಣಾಗುತ್ತಿವೆ. ಹುಸಿ ಆಧುನಿಕತೆ ಮತ್ತು ಹುಸಿ ಸಂಸ್ಕೃತಿಗಳು ನಿಜ ಆಧುನಿಕತೆ ಮತ್ತು ಜನಸಂಸ್ಕೃತಿಗಳ ಮೇಲೆ ಸವಾರಿ ಮಾಡುತ್ತಿವೆ.

ಹೀಗೆ ಇಪ್ಪತ್ತೊಂದನೆಯ ಶತಮಾನ ಶರಣಾಗತಿಯ ಶತಮಾನವಾಗಿ ಮಾರ್ಪಡುತ್ತಿದೆ. ಇಪ್ಪತ್ತನೆಯ ಶತಮಾನದಲ್ಲಿ ಸ್ಥಿತ್ಯಂತರಗಳಿದ್ದವು; ಏಕಕಾಲಕ್ಕೆ ಸಂಘರ್ಷ ಮತ್ತು ಸಾಮರಸ್ಯಗಳಿದ್ದವು. ಸಂಘರ್ಷ ಮತ್ತು ಸಾಮರಸ್ಯಗಳ ನಡುವಿನ ಸೂಕ್ಷ್ಮನೆಲೆಗಳನ್ನು ಶೋಧಿಸುವ ಸಂವೇದನೆಗಳಿದ್ದವು. ಎಲ್ಲ ಏರು-ಪೇರು ಮತ್ತು ವೈಪರೀತ್ಯಗಳ ನಡುವೆಯೂ ಇಪ್ಪತ್ತನೆಯ ಶತಮಾನವು ಅರ್ಥಪೂರ್ಣ ದಿಕ್ಕುಗಳನ್ನು ತೆರೆಯುತ್ತ ಬಂದಿತ್ತು. ಕೊನೆಯ ದಶಕದಲ್ಲಿ ಕಾಣಿಸಿಕೊಂಡ ಜಾಗತೀಕರಣ ಮತ್ತು ಸ್ವದೇಶೀಕರಣದ ಕ್ರೂರ ಹಾಗೂ ಕುರೂಪಿ ಚಿಂತನೆಗಳು ಕಡೇಪಕ್ಷ ಸಮತೋಲನವನ್ನೂ ನಿರೀಕ್ಷಿಸುತ್ತಿಲ್ಲ; ಶರಣಾಗತಿಯನ್ನು ಬಯಸುತ್ತಿವೆ. ಈ ಸವಾಲನ್ನು ನಾವು ಗಟ್ಟಿ ಸಿದ್ಧಾಂತ ಮತ್ತು ಸೂಕ್ಷ್ಮ ಸಂವೇದನೆಯಿಂದ ಎದುರಿಸಬೇಕಾಗಿದೆ. ಸಮಾನತೆಯ ಆಶಯಗಳಿಗೆ ಜೀವ ಚೈತನ್ಯವನ್ನು ಕೊಡುತ್ತ, ಎಲ್ಲ ಧರ್ಮಗಳ ಮೂಲಭೂತವಾದವನ್ನು ವಿರೋಧಿಸುತ್ತ, ನಾವು ಬದುಕುತ್ತಿರುವ ಭೂಮಿಯ ಭಾಷೆ - ಸಂಸ್ಕೃತಿಗಳ ಮೂಲಕ ಉತ್ತರವನ್ನು ಕಂಡುಕೊಳ್ಳಬೇಕಾಗಿದೆ. ಸಮಾಜ ಮತ್ತು ಸಂಸ್ಕೃತಿಗಳನ್ನು ಪ್ರಜಾಸತ್ತಾತ್ಮಕಗೊಳಿಸುವ ಪ್ರಕ್ರಿಯೆಗೆ ನಮ್ಮನ್ನು ನಾವು ಒಡ್ಡಿಕೊಳ್ಳಬೇಕಾಗಿದೆ. ಆಗ ಹಾದಿ ತೆರೆದುಕೊಳ್ಳುತ್ತದೆ. ಇಟ್ಟ ಹೆಜ್ಜೆ ನಮ್ಮದಾಗುತ್ತದೆ.

*- ಬರಗೂರು ರಾಮಚಂದ್ರಪ್ಪ*

# ಸಂವಿಧಾನ ಪರಾಮರ್ಶೆ

**ಗು**ಜರಾತ್ ರಾಜ್ಯದಲ್ಲಿ ಜನವರಿ ೨೬ ರಂದು ಸಂಭವಿಸಿದ ಭೂಕಂಪದಿಂದಾದ ಅಗಾಧ ಪ್ರಮಾಣದ ಸಾವು, ನೋವು, ನಷ್ಟ ಇಡೀ ದೇಶವನ್ನೇ ಸ್ತಂಭೀಭೂತಗೊಳಿಸಿ, ತಲ್ಲಣಗೊಳಿಸಿದ ಕಾರಣದಿಂದಾಗಿ ಹಿಂದಿನ ದಿನ ರಾಷ್ಟ್ರಪತಿ ಶ್ರೀ ಕೆ. ಆರ್. ನಾರಾಯಣನ್ ರವರು ಗಣರಾಜ್ಯೋತ್ಸವದಂಗವಾಗಿ ರಾಷ್ಟ್ರವನ್ನುದ್ದೇಶಿಸಿ ಮಾತನಾಡುತ್ತಾ ಹಲವಾರು ವಿಷಯಗಳ ಬಗ್ಗೆ ಕೇಂದ್ರ ಸರಕಾರದ ನೀತಿ ನಿಲುವುಗಳನ್ನು ಪ್ರಶ್ನಿಸಿದ್ದು ಮತ್ತು ಟೀಕಿಸಿದ್ದು ವಾಜಪೇಯಿ ಸರಕಾರವನ್ನು ಕಂಪನಗೊಳಿಸಿದರೂ, ಜನತೆಯ ಗಮನಕ್ಕೆ ಬಂದರೂ, ಮಹತ್ವದ ಸುದ್ದಿಯಾಗುಳಿಯಲಿಲ್ಲ.

ಶ್ರೀ ಕೆ. ಆರ್. ನಾರಾಯಣನ್‌ರವರು ತಮ್ಮ ಭಾಷಣದಲ್ಲಿ ಪಾಕಿಸ್ತಾನದ ಫೀಲ್ಡ್‌ಮಾರ್ಷಲ್ ಅಯೂಬ್ ಖಾನ್‌ರವರು ಪರೋಕ್ಷ ಚುನಾವಣಾ ಪದ್ಧತಿಯನ್ನು ಆ ರಾಷ್ಟ್ರದಲ್ಲಿ ಜಾರಿಗೆ ತರುವುದರ ಮೂಲಕ ''ಕನಿಷ್ಠ ಪ್ರಜಾಪ್ರಭುತ್ವ'' ಅಥವಾ ''ಮಾರ್ಗದರ್ಶಿ ಪ್ರಜಾಪ್ರಭುತ್ವ''ದ ಬಗ್ಗೆ ನಡೆಸಿದ ಪ್ರಯೋಗಗಳನ್ನು ಸ್ಮರಿಸುತ್ತಾ, ನಮ್ಮ ದೇಶದ ಆಳುವ ಪಕ್ಷ ಅದೇ ರೀತಿಯ ಪರೋಕ್ಷ ಚುನಾವಣಾ ಪದ್ಧತಿಯನ್ನು ಇಲ್ಲಿಯೂ ಜಾರಿಗೆ ತರಬೇಕೆಂದು ನಡೆಸುತ್ತಿರುವ ಪ್ರಯತ್ನಗಳನ್ನು ಸಾಕಷ್ಟು ಕಟುವಾಗಿ ಟೀಕಿಸಿದರು. ಪರೋಕ್ಷ ಚುನಾವಣಾ ಪದ್ಧತಿಯನ್ನು ಅನುಷ್ಠಾನಗೊಳಿಸಿದಲ್ಲಿ ರಾಜಕೀಯ ವ್ಯವಸ್ಥೆಯ ''ಸ್ಥಿರತೆ'' ಮತ್ತು ''ಏಕರೂಪತೆ'' ಯನ್ನು ಸಾಧಿಸಬಹುದೆಂಬ ಆಳುವ ಪಕ್ಷಗಳ ಅಭಿಪ್ರಾಯವನ್ನು ಶ್ರೀ ನಾರಾಯಣನ್‌ರವರು ಪ್ರಶ್ನಿಸುತ್ತಾ, ೧೯೩೫ರ ಭಾರತ ಸರ್ಕಾರದ ಕಾಯಿದೆಯಲ್ಲಿದ್ದ ಸೀಮಿತ ಮತದಾನದ ಹಕ್ಕನ್ನು ಒಪ್ಪದ ನಮ್ಮ ಸಂವಿಧಾನ ಕರ್ತೃಗಳು ಎಲ್ಲ ಭಾರತೀಯರಿಗೂ ಪೂರ್ಣ ಮತದಾನದ ಹಕ್ಕನ್ನು ಕೊಡುವುದರ ಮೂಲಕ ಸರಕಾರದ ''ಸ್ಥಿರತೆ'' ಮತ್ತು ''ಏಕರೂಪತೆ''ಗೆ ಹೆಚ್ಚಿನ ಮಹತ್ವ ನೀಡದೆ ತಮ್ಮ ದೂರದರ್ಶಿತ್ವವನ್ನು ತೋರಿಸಿದ ಬಗ್ಗೆ ಸ್ಮರಿಸುತ್ತಾ ಸೀಮಿತ ಮತದಾನದ ಪ್ರಯೋಗ ಮಹಾತ್ಮಾ ಗಾಂಧಿಯವರ ವಿಚಾರಕ್ಕೆ ವಿರೋಧವಾದದ್ದೆಂದೂ ಮತ್ತು ಪ್ರಜಾಪ್ರಭುತ್ವದಲ್ಲಿ ನಂಬಿಕೆಯನ್ನು ಕಳೆದುಕೊಳ್ಳುತ್ತಿರುವ ಸಂಕೇತವೆಂದೂ ತಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ದೇಶಕ್ಕೆ ಸಾರಿ ಹೇಳಿದ್ದು ನಿಜಕ್ಕೂ ಶ್ಲಾಘನೀಯ.

ಭಾರತೀಯ ಜನತಾ ಪಕ್ಷ ಸಂವಿಧಾನದ ಪರಾಮರ್ಶೆಯಾಗಬೇಕೆಂಬ ಉದ್ದೇಶದಿಂದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ಮುಖ್ಯ ನ್ಯಾಯಮೂರ್ತಿಗಳಾದ ಶ್ರೀ ಎಂ. ಎನ್. ವೆಂಕಟಾಚಲಯ್ಯ ಅವರ ಅಧ್ಯಕ್ಷತೆಯಲ್ಲಿ ಈಗಾಗಲೇ ಒಂದು ಸಮಿತಿಯನ್ನು ರಚಿಸಿದೆ. ಈ ಸಮಿತಿ ಇತ್ತೀಚೆಗೆ ಹೊರಡಿಸಿದ ಒಂದು ಸುತ್ತೋಲೆಯಲ್ಲಿ ಜಿಲ್ಲಾ ಪರಿಷತ್, ರಾಜ್ಯ ವಿಧಾನಸಭೆ, ಲೋಕಸಭೆಗೆ ಪರೋಕ್ಷ ಚುನಾವಣಾ ಪದ್ಧತಿಯನ್ನು ತರುವ ಬಗ್ಗೆ ಸಲಹೆ ನೀಡಿದೆ. ಮಹಾತ್ಮಾ ಗಾಂಧಿಯವರು ಈ ಪದ್ಧತಿಯ ಪರವಾಗಿದ್ದರು ಎಂದು ಹೇಳುತ್ತಾ, ಮತದಾನದ ಹಕ್ಕು ಕನಿಷ್ಠ ವಿದ್ಯಾರ್ಹತೆ ಹೊಂದಿರುವ, ಅಂದರೆ ನಮ್ಮ ಸಂವಿಧಾನವನ್ನು ಓದಲು ಬರುವ ಭಾರತೀಯರಿಗೆ ಮಾತ್ರ ಸೀಮಿತಗೊಳಿಸಬೇಕೆಂಬ ಸಲಹೆಯನ್ನು ನೀಡಲಾಗಿದೆ. ರಾಜ್ಯ ಶಾಸನ ಸಭೆಗಳು ಮತ್ತು ಲೋಕಸಭೆ ನಿಗದಿತ ಕಾಲಾವಧಿ ಹೊಂದಬೇಕು, ಅಂದರೆ ಚುನಾಯಿತ ಪಕ್ಷಗಳು ಅಧಿಕಾರಕ್ಕೇರಿದರೆ ನಿಗದಿತ ಕಾಲಾವಧಿಯವರೆಗೆ ಸರ್ಕಾರದಲ್ಲಿ ಮುಂದುವರಿಯಬೇಕು, ಇದು ಪ್ರಜಾಪ್ರಭುತ್ವದ ಬುನಾದಿಯನ್ನು ಭದ್ರಗೊಳಿಸುತ್ತದೆ ಎಂದು ಹೇಳುತ್ತಿದ್ದಾರೆ.

ಸಂವಿಧಾನದ ಪರಾಮರ್ಶೆ ಬಿ.ಜೆ.ಪಿ. ಮತ್ತು ಸಂಘಪರಿವಾರಕ್ಕೆ ಬಹಳ ತುರ್ತಾಗಿ ಬೇಕಾಗಿರುವುದು ಈಗ ಗುಟ್ಟೇನಲ್ಲ. ''ಸಮಾಜವಾದ'', ''ಧರ್ಮನಿರಪೇಕ್ಷತೆ'', ''ಅಲ್ಪಸಂಖ್ಯಾತರ ಹಕ್ಕು'' ಇತ್ಯಾದಿಗಳನ್ನು ಸಂವಿಧಾನದಿಂದ ಅಳಿಸಹಾಕಬೇಕೆಂಬ ಇವರ ಹಂಬಲ ಈಗಾಗಲೇ ಅನೇಕ ರೀತಿಯಲ್ಲಿ ಅನೇಕರ ಮೂಲಕ ವ್ಯಕ್ತವಾಗಿದೆ. ಅದರ ಜೊತೆಗೆ, ಸೀಮಿತ ಮತದಾನದ ಹಕ್ಕು, ನಿಗದಿತ ಕಾಲಾವಧಿಯವರೆಗೆ ದರ್ಬಾರು ನಡೆಸುವ ಅವಕಾಶ, ಇತ್ಯಾದಿ ಬದಲಾವಣೆಗಳನ್ನು ಸಂವಿಧಾನಕ್ಕೆ ತರುವ ಪ್ರಯತ್ನಗಳು ನಿರಂಕುಶವಾಗಿ ಪ್ರಭುತ್ವದ, ಸರ್ವಾಧಿಕಾರಿ ವ್ಯವಸ್ಥೆಯ ಹುಟ್ಟಿಗೆ ನಾಂದಿಯಾಗುವುದರಲ್ಲಿ ಸಂದೇಹವಿಲ್ಲ. ಸಂಘ ಪರಿವಾರದ ದೈತ್ಯ ಕುಣಿತಕ್ಕೆ ಸಂವಿಧಾನವೂ ಕೂಡ ಸಾಧನವಾಗುವ ಭಯಂಕರ ಸಾಧ್ಯತೆ ಎದ್ದು ಕಾಣುತ್ತಿದೆ.

ತಮ್ಮ ಈ ಅಧಿಕಾರ ನಿರಂತರತೆಗನುಕೂಲವಾಗುವ ರೀತಿಯಲ್ಲಿ ಸಂವಿಧಾನವನ್ನು ತಿರುಚುವ ಬಿ.ಜೆ.ಪಿ. - ಸಂಘ. ಪರಿವಾರದ ಪ್ರಯತ್ನ ಹೊಸದೇನಲ್ಲ. ಇದು ಇತಿಹಾಸದ ಮರುಕಳಿಕೆ. ೧೯೬೯ರಲ್ಲಿ ಕಾಂಗ್ರೆಸ್ ಪಕ್ಷ ಒಡೆದಾಗ ಪ್ರಧಾನಿಯಾಗಿದ್ದ ಇಂದಿರಾ ಗಾಂಧಿ, ರಾಜಧನ ಪದ್ಧತಿಯ ರದ್ದತಿ, ಬ್ಯಾಂಕ್ ರಾಷ್ಟ್ರೀಕರಣ, ಬಾಂಗ್ಲಾ ದೇಶದ ವಿಮೋಚನೆಗೆ ನೆರವು, ಬಡತನ ನಿರ್ಮೂಲನ, ಇಪ್ಪತ್ತು ಅಂಶಗಳ ಕಾರ್ಯಕ್ರಮ ಇತ್ಯಾದಿ ಪ್ರಗತಿಪರ ಧೋರಣೆಯ ಮುಖವಾಡ ಧರಿಸಿ, ೧೯೭೧ರ ಲೋಕಸಭಾ ಚುನಾವಣೆಯಲ್ಲಿ ಭಾರಿ ಬಹುಮತ ಗಳಿಸಿದರೂ, ೧೯೭೪ರ ಜಯಪ್ರಕಾಶ್ ನಾರಾಯಣರ ಸಾಮಾಜಿಕ ಆಂದೋಲನದ ಬಿರುಗಾಳಿ ಅವರ ಮುಖವಾಡವನ್ನು ಕಿತ್ತೆಸೆದದ್ದು, ನಂತರದ ತುರ್ತು ಪರಿಸ್ಥಿತಿಯ ಘೋಷಣೆ, ಸಾವಿರಾರು ರಾಜಕೀಯ ಮುಖಂಡರನ್ನು, ರೈತ-ಕಾರ್ಮಿಕ ಸಂಘಟನೆಗಳ ಮುಂದಾಳುಗಳನ್ನು ಜೈಲಿಗೆ ಅಟ್ಟಿದ್ದು, ಸಂವಿಧಾನದ ಮೂಲಭೂತ ಹಕ್ಕುಗಳನ್ನು ಅಮಾನತ್ತಿನಲ್ಲಿಟ್ಟಿದ್ದು, ನ್ಯಾಯಾಂಗದ ಮೇಲೆ ಹಲ್ಲೆ ನಡೆಸಿದ್ದು ಈಗಾಗಲೇ ಚರಿತ್ರೆಯ ಭಾಗವಾಗಿದೆ. ೧೯೭೫ರಲ್ಲಿ ನಡೆದ ಕಾಂಗ್ರೆಸ್(ಐ)ನ ವಾರ್ಷಿಕ ಅಧಿವೇಶನದಲ್ಲಿ ನಮ್ಮ ಸಂವಿಧಾನ ಒಂದು ಜೀವಂತ ದಾಖಲೆಯಾಗುಳಿಯಬೇಕಾದರೆ ಅನೇಕ ಬದಲಾವಣೆಗಳಾಗಬೇಕಾದ ಅಗತ್ಯ ಇನ್ನೂ ಬಂದಿಲ್ಲವೇ ಎಂಬುದನ್ನು ತಿಳಿಯಲು ಅದನ್ನು ವಿಶದವಾಗಿ ಪುನರ್‌ಪರಿಶೀಲಿಸಬೇಕೆಂದು ನಿರ್ಣಯವನ್ನು ಕೈಗೊಂಡಿದ್ದನ್ನು ನಾವು ಸ್ಮರಿಸಬಹುದಾದ ವಿಶೇಷ ಘಟನೆ. ಈ ಹಿನ್ನೆಲೆಯಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಸರ್ದಾರ್ ಸ್ವರಣ್ ಸಿಂಗ್ ಅವರ ಅಧ್ಯಕ್ಷತೆಯಲ್ಲಿ ಪುನರ್‌ವಿಮರ್ಶೆಗೆ ಸಮಿತಿ ರಚಿಸಿ, ಅವರಿಗೆ ಅನುಕೂಲವಾದಷ್ಟು ಸಂವಿಧಾನವನ್ನು ತಿರುಚಲು ತಯಾರಿ ನಡೆಸಿ, ೪೨ನೇ ತಿದ್ದುಪಡಿಯನ್ನು ತಂದರು. ತುರ್ತು ಪರಿಸ್ಥಿತಿಯ ಮಧ್ಯದ ಅವಧಿಯಲ್ಲಿ ಸಂವಿಧಾನದ ಮುನ್ನುಡಿಗೆ ''ಸಮಾಜವಾದ'' ಮತ್ತು ''ಧರ್ಮನಿರಪೇಕ್ಷತೆ'' ಪದಗಳನ್ನು ಜೋಡಿಸಿ ಮತ್ತೊಮ್ಮೆ ಪ್ರಗತಿಶೀಲತೆಯ ಮುಖವಾಡ ಧರಿಸಿ, ತಮ್ಮ ಸರ್ವಾಧಿಕಾರ ಸಮಾಜದ ಏಳಿಗೆಗೆ ಮತ್ತು ಬಡಜನತೆಯ ಉದ್ಧಾರಕ್ಕೆ ಎಂಬಂತಹ ನಾಟಕವಾಡಿದ್ದು ಇತಿಹಾಸದ ಭಾಗವಾಗಿದೆ. ಇಷ್ಟೆಲ್ಲ ಕಸರತ್ತುಗಳನ್ನು ನಡೆಸಿದರೂ, ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷ ಹೀನಾಯ ಸೋಲು ಅನುಭವಿಸಿತು. ಜನತಾ ಪಕ್ಷ ಅಧಿಕಾರಕ್ಕೆ ಬಂದ ಕೂಡಲೆ, ಕಾಂಗ್ರೆಸ್ ಪಕ್ಷ ೪೨ನೇ ತಿದ್ದುಪಡಿಯ ಮೂಲಕ ಬದಲಾಯಿಸಿದ ಅನೇಕ ವಿಧಿಗಳನ್ನು ಯಥಾಸ್ಥಿತಿಗೆ ತರಲು ೪೪ನೇ ತಿದ್ದುಪಡಿಯನ್ನು ತಂದದ್ದನ್ನು ನಾವು ನೆನಪಿಸಬಹುದು.

ಇಪ್ಪತ್ತೈದು ವರ್ಷಗಳ ನಂತರ, ಅನೇಕ ಕಸರತ್ತುಗಳ ಮೂಲಕ ಅಧಿಕಾರದ ಚುಕ್ಕಾಣಿ ಹಿಡಿದಿರುವ ಬಿ.ಜೆ.ಪಿ ಮತ್ತು ಸಂಘ ಪರಿವಾರದವರಿಗೆ ಸಂವಿಧಾನ ಅವರ ನಿರಂಕುಶ ಪ್ರಭುತ್ವದ ಆಕಾಂಕ್ಷೆಗೆ ಇರುವ ಭಾರಿ ಅಡ್ಡಗೋಡೆ ಎಂಬ ಅರಿವೇ ಅದನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ತಿರುಚಿ ದಾರಿ ಸುಗಮಗೊಳಿಸಿಕೊಳ್ಳುವ ಪ್ರಯತ್ನಕ್ಕೆ ಪ್ರೇರಣೆ. ಸಂವಿಧಾನದ ಪುನರ್‌ವಿಮರ್ಶೆ, ಸೀಮಿತ ಮತದಾನದ ಹಕ್ಕು, ನಿಗದಿತ ಕಾಲಾವಧಿಯ ಅಧಿಕಾರ, ಸರಕಾರದ ಸ್ಥಿರತೆ, ಏಕರೂಪತೆ, ಇತ್ಯಾದಿಗಳನ್ನು ಒಟ್ಟಾಗಿ ನೋಡಿ ವಿಮರ್ಶಿಸಿದಲ್ಲಿ, ಎಲ್ಲ ಪ್ರಯತ್ನಗಳ ಹಿಂದಿರುವ ರಾಜಕೀಯ ಉದ್ದೇಶ ಸ್ಪಷ್ಟವಾಗಿ ಗೋಚರಿಸುತ್ತದೆ. ಸರ್ವಾಧಿಕಾರಿ ವ್ಯವಸ್ಥೆಯೆಡೆಗೆ ಇಡುತ್ತಿರುವ ದೈತ್ಯ ಹೆಜ್ಜೆಗಳಾಗಿವೆ.

೧೯೭೫-೭೬ರಲ್ಲಿ ಕಾಂಗ್ರೆಸ್ ಪಕ್ಷ ಸಂವಿಧಾನದ ಬಗ್ಗೆ ತೆಗೆದುಕೊಂಡ ನಿಲುವು - ನಡೆವಳಿಕೆ, ಬಿ.ಜೆ.ಪಿ. - ಸಂಘ ಪರಿವಾರದ ಇತ್ತೀಚಿನ ನಿಲುವು- ನಡೆವಳಿಕೆಗಳ ಮಧ್ಯೆ ಹೆಚ್ಚಿನ ವ್ಯತ್ಯಾಸವಿಲ್ಲ ಎಂಬುದು ಗಮನಾರ್ಹ. ಸಂವಿಧಾನದ ಬಗ್ಗೆ ಆಳುವ ಪಕ್ಷಗಳು ನೋಡುವ ದೃಷ್ಟಿಕೋನ ಒಂದೇ ಎಂಬುದು ಇದರಿಂದ ತಿಳಿದುಬರುವ ಅಂಶ. ಆಳುವ ಪಕ್ಷಗಳಿಗೆ ಸಂವಿಧಾನ ನಿರ್ವಿಘ್ನ, ನಿರಂಕುಶ ಆಳ್ವಿಕೆಗೆ ಅಡ್ಡಿಬರುವ ಅಡ್ಡಗೋಡೆ. ಹಾಗಾಗಿ ಇವರ ಕೈಗೆ ಸಿಕ್ಕ ಸಂವಿಧಾನ ತನ್ನ ವಿಶೇಷ ಗುಣಗಳನ್ನು, ವಿಶಿಷ್ಟ ಲಕ್ಷಣಗಳನ್ನು ಕಳೆದುಕೊಳ್ಳುವ ಸಾಧ್ಯತೆ ಹೆಚ್ಚಾಗುತ್ತಿದೆ. ಸಂವಿಧಾನ ರಾಷ್ಟ್ರದ ಆಳ್ವಿಕೆಗೆ ಮೂಲಭೂತ ದಾಖಲೆ. ಇದು ಸಮಾಜದ ಆಗುಹೋಗುಗಳಿಗೆ ಸ್ಪಂದಿಸಬೇಕು ಎಂಬುದು ನಿರ್ವಿವಾದ. ಅಂದರೆ ಸಮಾಜದ ಏಳಿಗೆಗೆ ಸಂವಿಧಾನ ಮಾರ್ಪಾಟಾಗಬೇಕೇ ಹೊರತು ಆಳುವ ಪಕ್ಷಗಳ ಹಿತರಕ್ಷಣೆಗಲ್ಲ. ನಮ್ಮ ಸಂವಿಧಾನ ಅನೇಕ ಮೂಲಭೂತ ಹಕ್ಕುಗಳನ್ನು, ಪ್ರಜಾಪ್ರಭುತ್ವ ಹಕ್ಕುಗಳನ್ನು ಅಳವಡಿಸಿಕೊಂಡಿದೆ. ಈ ದೃಷ್ಟಿಯಿಂದ ನೋಡಿದಾಗ ಈ ಪ್ರಜಾಪ್ರಭುತ್ವದ ಹಕ್ಕುಗಳನ್ನು ಮತ್ತು ಮಾನವನ ಮೂಲಭೂತ ಹಕ್ಕುಗಳನ್ನು ಉಳಿಸುವ ಪ್ರಯತ್ನಗಳು ಪ್ರಗತಿಶೀಲ ಹೋರಾಟವಾಗುತ್ತವೆ. ಈ ಕಾರಣದಿಂದಲೇ ಬಿ.ಜೆ.ಪಿ - ಸಂಘ ಪರಿವಾರದ ಸಂವಿಧಾನದ ಪುನರ್‌ವಿಮರ್ಶೆಯ ಪ್ರಯತ್ನಗಳನ್ನು ಜನತೆ ವಿರೋಧಿಸಬೇಕಾದ ಕಾಲ ಬಂದಿದೆ.

ಮುರಳಿಧರ್
ವಕೀಲರು, ಎ.ಐ.ಟಿ.ಯು.ಸಿ. ಕಾನೂನು ಘಟಕ, ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ಹಳದಿ ನಕ್ಷತ್ರ

ಹೇಮಲತಾ ಮಹಿಷಿ

*ಜಡ್ಡುಗಟ್ಟಿದ ಮತಧಾರ್ಮಿಕ ಮೂರ್ಖತನವು ಒಂದು ದಶಕದಿಂದ ನೆರೆಯ ಆಫ್ಘಾನಿಸ್ತಾನಕ್ಕೆ ಕುತ್ತು ತಂದಿದೆ. ಜನರ ಸ್ವಾತಂತ್ರ್ಯವನ್ನು ಕಸಿದಿದೆ. ವ್ಯಕ್ತಿತ್ವವನ್ನು ನಾಶಮಾಡಿದೆ. ಅದಕ್ಕೆ ಮೊದಲು ಇದೇ ಜಡ್ಡುತನ ಇರಾನಿನಲ್ಲಿ ಪ್ರಕಟಗೊಂಡಿತ್ತು. ಅಮೆರಿಕಾ ಬ್ರಿಟನ್‌ನಂತಹ ರಾಷ್ಟ್ರಗಳಲ್ಲಿ ಕೂಡ ಜನಾಂಗೀಯ ದ್ವೇಷ ಹೆಚ್ಚುತ್ತಿದೆ. ಭಾರತದ ಈಚಿನ ಹತ್ತಾರು ಘಟನೆಗಳು ಫ್ಯಾಸಿಸ್ಟ್ ದುಷ್ಪ್ರವೃತ್ತಿಯ ನಿದರ್ಶನಗಳಾಗಿವೆ. ಅಂದರೆ, ಇಂದಿನ ಚಾರಿತ್ರಿಕ ಹಂತದಲ್ಲಿ ಹಿಟ್ಲರನ ದೈತ್ಯಾಕಾರದ ಕಾರ್ಮೋಡವು ನಮ್ಮನ್ನಾವರಿಸುತ್ತಿದೆ. ಮುಂದಿನ ದಾರಿಯನ್ನು ಕಂಡುಕೊಳ್ಳಬೇಕಾದ ತುರ್ತು ಸಂದರ್ಭ ಇಂದು ನಮ್ಮ ಮುಂದಿದೆ.*

**ಹಿಂ**ದೂಗಳು ಹಳದಿ ವಸ್ತ್ರ ಮೈಮೇಲೆ ಧರಿಸಬೇಕು. ತಮ್ಮ ಮನೆಯ ಮೇಲೆ ಹಳದಿ ವಸ್ತ್ರದ ಬಾವುಟ ಹಾರಿಸಬೇಕು. ಹಿಂದೂ ಹೆಣ್ಣು ಮಕ್ಕಳು ಮುಸ್ಲಿಂ ಮಹಿಳೆಯರಂತೆ ಬುರಖಾ ಧರಿಸಬೇಕು. - ಇವು ಆಫ್ಘಾನಿಸ್ತಾನ ತಾಲಿಬಾನ್ ಸರ್ಕಾರದ ಇತ್ತೀಚಿನ ಆದೇಶಗಳು. ಈ ಆದೇಶದ ಪರಿಪಾಲನೆಯಾಗುವಂತೆ ನೋಡಿಕೊಳ್ಳಲು ಸರ್ಕಾರದಿಂದ ನೇಮಿಸಲ್ಪಟ್ಟ ಧಾರ್ಮಿಕ ಅಧಿಕಾರಿಗಳು, ಅದಕ್ಕೊಂದು ಸರ್ಕಾರಿ ಇಲಾಖೆ. ಭಾರತವೂ ಸೇರಿದಂತೆ ಅನೇಕ ನಾಗರಿಕ ರಾಷ್ಟ್ರಗಳು ವ್ಯಕ್ತಪಡಿಸಿದ ವಿರೋಧಕ್ಕೆ ತಾಲಿಬಾನ್ ಉತ್ತರ, ''ಹಿಂದೂಗಳ ಹಿತರಕ್ಷಣೆಗಾಗಿಯೇ ಈ ಆದೇಶಗಳನ್ನು ಮಾಡಿರುವುದು. ಅಲ್ಲದೇ, ಅವರೇ ಕೇಳಿಕೊಂಡಿರುವುದರಿಂದ ಈ ಕ್ರಮ ಅನುಸರಿಸಲಾಗಿದೆ.''

ಇದಕ್ಕೂ ಮೊದಲು ತಾಲಿಬಾನ್ ತನ್ನ ಮುಸ್ಲಿಂ ಪ್ರಜೆಗಳ ಮೇಲೆ ಅನೇಕ ಧಾರ್ಮಿಕ ಆಚರಣೆಗಳನ್ನು, ಸಾಮಾಜಿಕ ಕಟ್ಟುಪಾಡುಗಳನ್ನು ಉಡುಗೆ-ತೊಡುಗೆಗಳ ನಿಯಮಗಳನ್ನು ಇಸ್ಲಾಂ ಧಾರ್ಮಿಕ ಕಾನೂನಿನ ಹೆಸರಿನಲ್ಲಿ ವಿಧಿಸಿತ್ತು. ಮುಸ್ಲಿಂ ಪುರುಷರು ಗಡ್ಡ ಬೋಳಿಸಬಾರದು, ಉದ್ದದ ಕುರ್ತಾ-ಪೈಜಾಮಾ ಧರಿಸಬೇಕು, ದಿನಕ್ಕೆ ಐದು ಬಾರಿ ಕಡ್ಡಾಯವಾಗಿ ಪ್ರಾರ್ಥನೆ ಮಾಡಬೇಕು, ಮುಸ್ಲಿಂ ಮಹಿಳೆಯರು ಶಿಕ್ಷಣ ಪಡೆಯಲು, ಕೆಲಸ ಮಾಡಲು ಹೊರಗೆ ಹೋಗಬಾರದು, ಮಹಿಳಾ ರೋಗಿಗಳು ಪುರುಷ ವೈದ್ಯರ ಬಳಿ ಚಿಕಿತ್ಸೆಗೆ ಹೋಗಬಾರದು (ಆದರೆ, ಮಹಿಳಾ ವೈದ್ಯರು ವೃತ್ತಿ ಕೈಗೊಳ್ಳುವಂತಿಲ್ಲ). ಹೊರಗೆ ಹೋಗಬೇಕಾದರೆ ಮೈ ಪೂರ್ತಿ ಮುಚ್ಚುವ ಬುರಖಾ ಧರಿಸಬೇಕು. ಇತ್ತೀಚಿನ ಸುದ್ದಿಯಂತೆ ಈ ಬುರಖಾ ಕೂಡಾ ಮೈಗೆ ಅಂಟಿಕೊಂಡು ಮೈಮಾಟ ತೋರಿಸುವಂತಿರಬಾರದು. ಸಡಿಲವಾಗಿದ್ದು ಒಂದು ಮಾನವ ಮೂಟೆ ಓಡಾಡುವಂತೆ ಕಾಣಿಸಬೇಕು. ಇದನ್ನು ಪರಿಪಾಲಿಸುವಂತೆ ನೋಡಿಕೊಳ್ಳಲು ಧಾರ್ಮಿಕ ಅಧಿಕಾರಿಗಳು, ಇಲಾಖೆ. ಈ ಧಾರ್ಮಿಕ ಅಧಿಕಾರಿಗಳು ಹಿಂದೂ-ಮುಸ್ಲಿಂರ ನಡುವೆ ವ್ಯತ್ಯಾಸ ತಿಳಿಯದೇ ತಪ್ಪಾಗಿ ಹಿಂದೂಗಳನ್ನೂ ಹಿಡಿದುಕೊಂಡು ಹೋಗುತ್ತಿರುವುದರಿಂದ ಹಿಂದೂಗಳಿಗೆ ತೊಂದರೆಯಾಗುತ್ತಿದೆ. ಅಲ್ಲದೆ, ಮುಖ್ಯವಾಗಿ ಮುಸ್ಲಿಂರನ್ನು ಗಡ್ಡ ಬೋಳಿಸಿದಾಗ ಹಿಡಿದುಕೊಂಡರೆ ತಾವು ಹಿಂದೂಗಳೆಂದು ಹೇಳಿ ತಪ್ಪಿಸಿಕೊಳ್ಳುತ್ತಾರೆ. ತಮಗೆ ಆಗುವ ತೊಂದರೆಯನ್ನು ತಪ್ಪಿಸುವಂತೆ ಹಿಂದೂಗಳು ಸರ್ಕಾರಕ್ಕೆ ಮೊರೆಹೋಗಿದ್ದಾರೆ. ಅಧಿಕಾರಿಗಳು ಹಿಂದೂಗಳನ್ನು ಗುರುತುಹಿಡಿಯಲು ಈ ಕ್ರಮ ಕೈಗೊಳ್ಳಲಾಯಿತು. ಇದು ಸರ್ಕಾರದ ಸಮರ್ಥನೆ. ಈ ಸಮರ್ಥನೆಯಲ್ಲಿ ವಿಶ್ವಕ್ಕೆ ನಂಬಿಕೆಯಿಲ್ಲ. ಈ ರೀತಿ ದೇಶದ ಅಲ್ಪಸಂಖ್ಯಾತರನ್ನು ಬೇರೆಯಾಗಿ ಗುರುತಿಸುವುದು ತರವಲ್ಲ, ಮಾನವ ಹಕ್ಕುಗಳಿಗೆ ವಿರುದ್ಧವಾದುದು, ತಾರತಮ್ಯ ಧೋರಣೆ ತೋರಿಸುವಂತಹುದು. ಇದು ಮುಂದೆ ಅನೇಕ ಅಲ್ಪಸಂಖ್ಯಾತ ವಿರೋಧಿ ಕಾರ್ಯಕ್ರಮಗಳಿಗೆ ನಾಂದಿಯಾಗುತ್ತದೆ. ಅವರ ವಿರುದ್ಧ ಅಸಹನೆ ಬೆಳೆಯಲು, ಸಮಾಜವನ್ನು ಒಡೆಯಲು ಕಾರಣವಾಗುತ್ತದೆ. ಮುಂದಿನ ಅನೇಕ ಮಾನವ ವಿರೋಧಿ ಕ್ರೂರ ಕೃತ್ಯಗಳಿಗೆ ಹಾದಿ ಹಾಕಿಕೊಡುತ್ತದೆ ಎನ್ನುವುದು ನಾಗರಿಕ ರಾಷ್ಟ್ರಗಳ ಒಮ್ಮತದ ಅಭಿಮತ. ಅದು ಕೇವಲ ಕಾಲ್ಪನಿಕವಲ್ಲ, ಅದಕ್ಕೆ ಅನುಭವದ ಆಧಾರವಿದೆ. ಒಂದೆರಡು ತಿಂಗಳ ಮೊದಲು ಇದೇ ತಾಲಿಬಾನ್ ಸರ್ಕಾರ, ಹಲವಾರು ಶತಮಾನಗಳಿಂದ ತನ್ನಷ್ಟಕ್ಕೆ ತಾನು ಬೆಟ್ಟಗಳಲ್ಲಿ ಎತ್ತರವಾಗಿ ಶಾಂತ ಮುದ್ರೆಯಿಂದ, ಜಗತ್ತಿನ ಕ್ಷೇಮ ಚಿಂತನೆಯಲ್ಲಿ ಮಗ್ನನಾಗಿ ನಿಂತಿದ್ದ ಬುದ್ಧನ ಶಿಲಾಮೂರ್ತಿಯನ್ನು ಉಳಿ-ಸುತ್ತಿಗೆಗಳಿಂದ, ಮೆಷಿನ್‌ಗನ್ - ರಾಕೆಟ್‌ಗಳಿಂದ ಕುಟ್ಟಿ ಪುಡಿ ಪುಡಿ ಮಾಡಿ ವಿರೂಪಗೊಳಿಸಿದೆ. ಜಗತ್ತಿನ ಅತಿ ಎತ್ತರದ ಬುದ್ಧನ ವಿಗ್ರಹ ಎನ್ನುವ ಖ್ಯಾತಿ ಇದಕ್ಕಿತ್ತು, ವಿಶ್ವದ ಕಲಾ ಭಂಡಾರಕ್ಕೆ, ಪ್ರಾಚೀನ ಸಂಸ್ಕೃತಿಯ ಪರಂಪರೆಗೆ ಸೇರಿದ ಆಸ್ತಿಯಾಗಿತ್ತು ಇದು. ಇಡೀ ವಿಶ್ವ ಒಕ್ಕೊರಲಿನಿಂದ ಮಾಡಿದ ಪ್ರತಿಭಟನೆ, ಮನವಿ ಯಾವುದನ್ನೂ ಲೆಕ್ಕಿಸುವ ಮನಃಸ್ಥಿತಿಯಲ್ಲಿರಲಿಲ್ಲ ಈ ತಾಲಿಬಾನ್. ತಮ್ಮ ಈ ಬರ್ಬರ ಕೃತ್ಯಕ್ಕೆ ಅವರು ಕೊಟ್ಟ ಕಾರಣ, ಬುದ್ಧನ ಪ್ರತಿಮೆ ಮುಸ್ಲಿಂ ಸಂಪ್ರದಾಯಕ್ಕೆ, ಇಸ್ಲಾಂ ಧರ್ಮಕ್ಕೆ ವಿರುದ್ಧವಾದುದು. ವಿಗ್ರಹಾರಾಧನೆಯನ್ನು ತಮ್ಮ ಧರ್ಮ ಸಹಿಸುವುದಿಲ್ಲ! ತಮ್ಮದಲ್ಲದ್ದನ್ನು ಸಹಿಸದ ಧೋರಣೆ ಆ ನೀತಿಯ ಸ್ಪಷ್ಟ ಪ್ರತಿಪಾದನೆ. ಈ ದಿನ ವಿಗ್ರಹಕ್ಕೆ ಆದ ಗತಿ ಮುಂದೆ ಮಾನವರಿಗೆ ಆಗುವುದಿಲ್ಲ ಎಂದು ಭಾವಿಸಲು, ನಂಬಲು ತಾಲಿಬಾನ್ ಇತಿಹಾಸ ಯಾವುದೇ ಆಧಾರ ಒದಗಿಸುತ್ತಿಲ್ಲ. ಬುದ್ಧನ ವಿಗ್ರಹ ಚೂರು-ಚೂರಾಗುತ್ತಿದ್ದಾಗ, ಏಷ್ಯಾದ ಅದೇ ಭಾಗದಿಂದ ಭಾರತದ ಮೇಲೆ ಪದೇ-ಪದೇ ಧಾಳಿ ಮಾಡುತ್ತಿದ್ದ ಘಜ್ನಿ-ಘೋರಿ, ನಾದಿರ್‌ಷಾ-ಬಾಬರರ ನೆನಪಾಗಿತ್ತು. ಹಳದಿ ಬಟ್ಟೆಯ ಪ್ರಕರಣ ಇಂತಹ ಹಳದಿಯ ನಕ್ಷತ್ರದಿಂದ ಆರಂಭವಾದ ಮಾನವನ ಮಾರಣಹೋಮವನ್ನು ನೆನಪಿಸಿತು. ಅದಕ್ಕೆ ತುತ್ತಾದ ೬ ಮಿಲಿಯನ್ ಜ್ಯೂಗಳನ್ನು ನೆನೆದು ಮೈ ನಡುಗಿತು.

ಮೊದಲ ಮಹಾಯುದ್ಧದಲ್ಲಿ ಸೋತು ಹಣ್ಣಾದ, ಅವಮಾನಕ್ಕೆ ತುತ್ತಾದ, ಆರ್ಥಿಕ ಮುಗ್ಗಟ್ಟಿಗೆ ಸಿಲುಕಿ ತತ್ತರಿಸಿದ ಜರ್ಮನಿ ತನ್ನ ಎಲ್ಲಾ ಸಮಸ್ಯೆಗಳಿಗೆ ನ್ಯಾಷನಲ್ ಸೋಷಲಿಸ್ಟ್ ಪಕ್ಷ ಉತ್ತರ ಕಂಡುಕೊಳ್ಳುವುದೆಂದು ಭಾವಿಸಿ ೧೯೩೨ರಲ್ಲಿ ಅದನ್ನು ಅಧಿಕಾರಕ್ಕೆ ತಂದಿತ್ತು. ಜರ್ಮನರ ರಾಷ್ಟ್ರೀಯ ಭಾವನೆಯನ್ನು ಎಚ್ಚರಿಸಿ ಅತ್ಯುತ್ಕಟವಾಗಿಸಿದ ಅಡಾಲ್ಫ್ ಹಿಟ್ಲರ್‌ನನ್ನು ೧೯೩೩ರಲ್ಲಿ ತನ್ನ ಏಕೈಕ ನಾಯಕನನ್ನಾಗಿ ಒಪ್ಪಿಕೊಂಡಿತ್ತು. ಜರ್ಮನಿಯನ್ನು ವಿಸ್ತರಿಸಿ ಮೊದಲಿನ ಪ್ರತಿಷ್ಠೆಯನ್ನು ಗಳಿಸಿಕೊಳ್ಳುವುದು, ಶ್ರೇಷ್ಠ ಆರ್ಯನ್ನರ ರಕ್ತ ಕಲುಷಿತಗೊಳ್ಳದಂತೆ ನೋಡಿಕೊಳ್ಳುವುದು ಹಿಟ್ಲರ್‌ನ ಪರಮ ಧ್ಯೇಯ. ಜರ್ಮನರ ಆಂತರಿಕ ಸಮಸ್ಯೆಗಳಿಗೆ, ಆರ್ಥಿಕ ದುಸ್ಥಿತಿಗೆ ಮುಖ್ಯ ಕಾರಣ ಜ್ಯೂಗಳು. ಅವರು ಶ್ರೇಷ್ಠ ಕುಲದ ಆರ್ಯರಾದ ಜರ್ಮನ್ನರಿಗಿಂತ ಕೀಳು ಮಾನವ ಜನಾಂಗಕ್ಕೆ ಸೇರಿದವರು.



ಜರ್ಮನ್ನರ ಬಡತನಕ್ಕೆ, ನಿರುದ್ಯೋಗಕ್ಕೆ ಅವರೇ ಕಾರಣ. ಅವರ ನಿರ್ನಾಮದಿಂದಲೇ ಜರ್ಮನ್ನರ ಉದ್ಧಾರ, - ಇದು ಹಿಟ್ಲರನ ವಿಚಾರಧಾರೆ. ಜರ್ಮನಿಯ ಜನರು ಇದನ್ನು ನಂಬಿದರು, ಹಿಟ್ಲರನಿಗೆ ಬೆಂಬಲ ಕೊಟ್ಟರು. ಜನವರಿ ೧೯೩೩ರಿಂದ ಒಂದಾದ ಮೇಲೊಂದರಂತೆ ಅನೇಕ ಯೆಹೂದಿ - ವಿರೋಧಿ ಕ್ರಮಗಳು ಜಾರಿಗೆ ಬಂದವು. ಅವುಗಳಲ್ಲಿ ಮೊದಲನೆಯದು ಜ್ಯೂಗಳು ತಮ್ಮ ಬಟ್ಟೆಯ ಮೇಲೆ ಡೇವಿಡನ ಹಳದಿ ನಕ್ಷತ್ರವನ್ನು ಧರಿಸಬೇಕು. ಇದು ಜ್ಯೂಗಳನ್ನು ಗುರುತಿಸಲು, ಜರ್ಮನ್ನರಿಂದ ಅವರನ್ನು ಬೇರೆಯಾಗಿ ವಿಂಗಡಿಸಲು, ಅವರ ಮೇಲೆ ನಾನಾ ರೀತಿಯ ಆಕ್ರಮಣ ನಡೆಸಲು, ಅವರ ಮಾನವ ಹಕ್ಕುಗಳನ್ನು ಕಿತ್ತುಕೊಳ್ಳಲು ಹಿಟ್ಲರ್ ಕಂಡುಕೊಂಡ ಉಪಾಯ. ಮೇ ೧೯೩೩ ಬರ್ಲಿನ್‌ನಲ್ಲಿ ಸಾರ್ವಜನಿಕವಾಗಿ ಪುಸ್ತಕಗಳನ್ನು ಸುಡಲಾಯಿತು. ಅವುಗಳನ್ನು ಬರೆದ ಜ್ಯೂಗಳು ಜರ್ಮನ್ನರಲ್ಲವೆಂಬ ಹಣೆಪಟ್ಟಿ ಅಂಟಿಸಲಾಯಿತು. ಇದರಿಂದ ಭಯಭೀತರಾದ ಅನೇಕ ಯೆಹೂದಿ ಲೇಖಕರು, ಕಲಾವಿದರು, ವಿಜ್ಞಾನಿಗಳು ಜರ್ಮನಿಯನ್ನು ತೊರೆದು ಬೇರೆ ದೇಶಗಳಲ್ಲಿ ಆಶ್ರಯ ಕೋರಿದರು. ಇದಕ್ಕೂ ಮೊದಲು ವಿದೇಶಿ ಪತ್ರಿಕೆಗಳಲ್ಲಿ ನಾಜಿ ಕೂಟ ನೀತಿಯನ್ನು ಬಹಿರಂಗಗೊಳಿಸುವ ಕಾರ್ಯ ಆರಂಭವಾಗಿದ್ದರೂ ಅದನ್ನು ಲೆಕ್ಕಿಸದ ನಾಜಿಗಳು ಜ್ಯೂ ವಕೀಲರನ್ನು, ವೈದ್ಯರನ್ನು, ಅಂಗಡಿಗಳನ್ನು ಬಹಿಷ್ಕರಿಸುವ ಪ್ರಕ್ರಿಯೆಯನ್ನು ಏಪ್ರಿಲ್ ೧, ೧೯೩೩ರಿಂದಲೇ ಆರಂಭಿಸಿದ್ದರು. ಜರ್ಮನ್ ರಕ್ತ ಇರುವವರು ಮಾತ್ರ ಜರ್ಮನಿಯ ಪ್ರಜೆಗಳಾಗಿರಲು ಸಾಧ್ಯವಿತ್ತು. ಜ್ಯೂಗಳು - ಜರ್ಮನ್ನರು ಬೆರೆಯುವಂತಿಲ್ಲ. ಮದುವೆ ಮಾಡಿಕೊಳ್ಳುವಂತಿಲ್ಲ. ಸ್ನೇಹಿತರಾಗಿ ಜೊತೆಯಲ್ಲಿ ಸಾರ್ವಜನಿಕವಾಗಿ ಕಾಣಿಸಿಕೊಂಡರೂ ಶಿಕ್ಷೆಯ ಅಪಾಯ. ಶಾಲೆಗಳಲ್ಲಿ ಮಕ್ಕಳನ್ನು ಪರೀಕ್ಷಿಸಿ, ಅದರ ಜನಾಂಗೀಯ ಲಕ್ಷಣಗಳನ್ನು ಗುರುತಿಸಿ ಬೇರೆ ಮಾಡಲಾಗುತ್ತಿತ್ತು. ಜ್ಯೂ ಮಕ್ಕಳಿಗಾಗಿಯೇ ಬೇರೆ ಶಾಲೆ. ಜರ್ಮನ್ ಗಂಡು ಮಕ್ಕಳಿಗೆ ಸೈನಿಕ ತರಬೇತಿ; ಹೆಣ್ಣು ಮಕ್ಕಳನ್ನು ತಾಯ್ತನಕ್ಕೆ, ಗೃಹಿಣಿಪಟ್ಟಕ್ಕೆ ಸಿದ್ಧಗೊಳಿಸುವುದು.

ನವೆಂಬರ್ ೯-೧೦, ೧೯೩೮ರ ಮಧ್ಯರಾತ್ರಿ ಜ್ಯೂಗಳು ಮರೆಯಲಾಗದ ರಾತ್ರಿ. ಆ ರಾತ್ರಿಯ ಕಾರ್ಯಕ್ರಮ ಕ್ರಿಸ್ಟಲ್ ನೈಟ್ ಅಥವಾ ಒಡೆದ ಗಾಜಿನ ರಾತ್ರಿ. ಆ ರಾತ್ರಿ ೧೭೭ ಸಿನೋಗಾಗ್‌ಗಳು (ಜ್ಯೂಗಳ ಪ್ರಾರ್ಥನಾ ಗೃಹಗಳು), ಅವರ ೭೫೦೦ ಅಂಗಡಿ ಮುಂಗಟ್ಟುಗಳು ಸುಟ್ಟು ಭಸ್ಮವಾದವು. ೨೩೬ ಜ್ಯೂಗಳು ಕೊಲ್ಲಲ್ಪಟ್ಟರು. ೩೦,೦೦೦ಕ್ಕೂ ಹೆಚ್ಚಿನ ಜ್ಯೂಗಳು ಸೆರೆಹಿಡಿಯಲ್ಪಟ್ಟು ನಾಜಿ ಕೂಡುದೊಡ್ಡಿಗಳಿಗೆ ರವಾನೆಯಾದರು. ಅಳಿದುಳಿದ ಜ್ಯೂಗಳು ಜರ್ಮನಿಯನ್ನು ತೊರೆದರು. ಈ ಎಲ್ಲಾ ಧಾಳಿಗಳಿಗೆ ಜ್ಯೂಗಳನ್ನು ಸರಿಯಾಗಿ ಗುರುತಿಸಲು ಸಹಾಯ ಮಾಡಿದ್ದು ಅವರ ಮೈಮೇಲಿನ, ಮನೆಯ ಮೇಲಿನ ಹಳದಿ ನಕ್ಷತ್ರದ ಗುರುತು. ಆಗ ಜರ್ಮನಿಯಲ್ಲಿ ಜ್ಯೂಗಳ ಜನಸಂಖ್ಯೆ ಕೇವಲ ೧%. ಆದರೂ ಜನಾಂಗೀಯ ಅಸಹನೆ, ಸಾಂಸ್ಕೃತಿಕ ವ್ಯತ್ಯಾಸ, ಧಾರ್ಮಿಕ ಭೇದಭಾವ ಮಾನವೀಯತೆಯನ್ನು ಮೆಟ್ಟಿ ತುಳಿಯಿತು.

''ಜ್ಯೂಗಳ ವಿರುದ್ಧ ಸರಣಿ ಆದೇಶಗಳನ್ನು ಹೊರಡಿಸಿ ನಮ್ಮ ಸ್ವಾತಂತ್ರ್ಯಹರಣ ಮಾಡಲಾಯಿತು: ಜ್ಯೂಗಳು ಹಳದಿ ನಕ್ಷತ್ರ ಧರಿಸಬೇಕು; ಜ್ಯೂಗಳು ಬೈಸಿಕಲ್‌ಗಳನ್ನು ಹಿಮ್ಮುಖವಾಗಿ ನಡೆಸಬೇಕು; ಜ್ಯೂಗಳು ಟ್ರಾಂಗಳನ್ನು ಉಪಯೋಗಿಸುವಂತಿಲ್ಲ; ಜ್ಯೂಗಳು ಕಾರುಗಳಲ್ಲಿ ಪ್ರಯಾಣಿಸಲಾಗದು, ತಮ್ಮದೇ ಕಾರು ಇದ್ದರೂ ಸಹ ಮಧ್ಯಾಹ್ನ ೩ರಿಂದ ೫ ಗಂಟೆಯ ಒಳಗೆ ಜ್ಯೂಗಳು ತಮ್ಮ ಷಾಪಿಂಗ್ ಮುಗಿಸಬೇಕು. ಜ್ಯೂಗಳು ತಮ್ಮದೇ ಕ್ಷೌರಿಕ ಶಾಲೆಗೆ, ಬ್ಯೂಟಿಪಾರ್ಲರ್‌ಗಳಿಗೆ ಹೋಗಬೇಕು; ರಾತ್ರಿ ೮ರಿಂದ ಬೆಳಿಗ್ಗೆ ೬ ಗಂಟೆಯ ನಡುವೆ ಜ್ಯೂಗಳು ಬೀದಿಗಳಲ್ಲಿ ನಡೆಯಬಾರದು'', ಇದು ಆ್ಯನ್ ಫ್ರಾಂಕ್ ತನ್ನ ದಿನಚರಿಯಲ್ಲಿ ಬರೆದಿರುವುದು. ಹೋದಲ್ಲೆಲ್ಲಾ ''ಜ್ಯೂಗಳಿಗೆ ಪ್ರವೇಶವಿಲ್ಲ'' ಎನ್ನುವ ಫಲಕ. ಜ್ಯೂಗಳು ಸ್ವಂತ ಉದ್ಯೋಗ ಹೊಂದುವಂತಿಲ್ಲ. ಜ್ಯೂ ಮಕ್ಕಳು ವಿಶೇಷ ಜ್ಯೂಗಳ ಶಾಲೆಗೇ ಹೋಗಬೇಕು. ಜ್ಯೂಗಳೆಲ್ಲಾ ತಮ್ಮ ಹೆಸರನ್ನು ನೋಂದಾಯಿಸಬೇಕು. ''ಜ್ಯೂ ಆಗಿರುವುದು ಎಂದರೆ ಏನು ಎನ್ನುವುದರ ಅನುಭವ ಈಗ ನನಗೆ ಆಗುತ್ತಿದೆ'' ಎಂದು ೧೩ ವರ್ಷದ ಬಾಲಕಿ ದಿನಚರಿಯಲ್ಲಿ ತನ್ನ ಮನಸ್ಸಿನ ಯಾತನೆಯನ್ನು, ದುಗುಡವನ್ನು ತೋಡಿಕೊಂಡಿದ್ದಾಳೆ.

ಹಿಟ್ಲರನ ಜ್ಯೂ ವಿರೋಧಿ ಕಾರ್ಯಾಚರಣೆಯಿಂದ ಭಯಪಟ್ಟು ಆ ದೇಶವನ್ನು ತೊರೆದು ನೆದರ್‌ಲ್ಯಾಂಡಿನ ಆಮ್‌ಸ್ಟರ್‌ಡಾಂನಲ್ಲಿ ಬಂದು ನೆಲೆಸಿದರೂ ಆ್ಯನ್ ಫ್ರಾಂಕಳ ಕುಟುಂಬಕ್ಕೆ ನೆಮ್ಮದಿಯೇನೂ ಲಭಿಸಲಿಲ್ಲ. ಮೇ ೧೬, ೧೯೪೦ರಂದು ಜರ್ಮನ್ ನಾಜಿ ಸೈನ್ಯ ಆಮ್‌ಸ್ಟರ್‌ಡಾಂ ಪ್ರವೇಶಿಸುವುದರೊಂದಿಗೆ ಅವರ, ಇನ್ನಿತರ ಜ್ಯೂಗಳ ಕಷ್ಟಗಳ ಸರಮಾಲೆ ಆರಂಭವಾಗಿತ್ತು. ಆ್ಯನ್‌ಳ ಕುಟುಂಬ ತಲೆಮರೆಸಿಕೊಂಡಿರಲು ಸಿದ್ಧತೆಯೂ ನಡೆದಿತ್ತು. ಅಷ್ಟರಲ್ಲಿ ಜುಲೈ ೫, ೧೯೪೨ರಂದು ಆ್ಯನ್‌ಳ ಅಕ್ಕ ಮಾರ್ಗಟಳಿಗೆ ಪೊಲೀಸರಿಂದ ಬಂದ ನೋಟೀಸು ಅವರ ಯೋಜನೆ ತಕ್ಷಣವೇ ಕಾರ್ಯಗತಗೊಳ್ಳುವಂತೆ ಮಾಡಿತು. ಜುಲೈ ೬ರಂದು ಮಾರ್ಗಟ್ ಆಮ್‌ಸ್ಟರ್‌ಡಾಂನ ಎಸ್. ಎಸ್. ಪೊಲೀಸರ ಮುಂದೆ ಹಾಜರಾಗುವಂತೆ ಆ ನೋಟೀಸಿನಲ್ಲಿ ತಿಳಿಸಲಾಗಿತ್ತು. ಅದರರ್ಥ, ಕೂಟ ಶಿಬಿರ, ಗ್ಯಾಸ್ ಛೇಂಬರ್. ''ಹಾಗಾಗಿ ತಂದೆ - ತಾಯಿ ಮತ್ತು ನಾನು ಸುರಿಯುತ್ತಿರುವ ಮಳೆಯಲ್ಲಿ ನಡೆಯುತ್ತಿದ್ದೆವು. ಪ್ರತಿಯೊಬ್ಬರೂ ಏನೇನೋ ತರಹಾವರಿ ಸಾಮಾನುಗಳನ್ನು ಕಂಠಪೂರ್ತಿ ತುಂಬಿಕೊಂಡು ಶಾಲೆಯ ಚೀಲ, ಷಾಪಿಂಗ್ ಚೀಲಗಳನ್ನು ಹೊತ್ತಿದ್ದೆವು. ಬೆಳಗಿನ ಝಾವ ಕೆಲಸಕ್ಕೆ ಹೋಗುತ್ತಿದ್ದ ಜನರು ನಮ್ಮತ್ತ ಕನಿಕರದ ನೋಟ ಬೀರುತ್ತಾ ಸಾಗಿದರು. ಅವರ ಮುಖ ನೋಡಿದರೆ, ನಮ್ಮನ್ನು ತಮ್ಮ ವಾಹನದಲ್ಲಿ ಕರೆದುಕೊಂಡು ಹೋಗಲಾರದ ಅಸಹಾಯಕತೆ ಎದ್ದು ಕಾಣುತ್ತಿತ್ತು. ಏಕೆಂದರೆ ಎದ್ದು ಕಾಣುತ್ತಿದ್ದ ಹಳದಿ ನಕ್ಷತ್ರವೇ ಎಲ್ಲವನ್ನೂ ಹೇಳುತ್ತಿತ್ತು'' ಎಂದು ಆ ದಿನ ತಮ್ಮ ಅಡಗುದಾಣಕ್ಕೆ ತೆರಳಿದ ಬಗ್ಗೆ ಆ್ಯನ್ ದಿನಚರಿಯಲ್ಲಿ ಬರೆದಿದ್ದಾಳೆ. ಈ ಅಡಗುದಾಣದಲ್ಲಿ ಸುಮಾರು ೨ ವರ್ಷಕಾಲ ಆ್ಯನ್‌ಳ ಕುಟುಂಬದ ೪ ಜನರು, ಮತ್ತೆ ಎರಡು ಜ್ಯೂ ಕುಟುಂಬದವರು ನಾಜಿಗಳಿಂದ ತಲೆ ಮರೆಸಿಕೊಂಡಿದ್ದರು: ಪ್ರಾಣವನ್ನು ಅಂಗೈಯಲ್ಲಿ ಹಿಡಿದು, ಮನಸ್ಸಿನಲ್ಲಿ ಆತಂಕ - ಯಾತನೆಯನ್ನು ತುಂಬಿಕೊಂಡು. ಆ್ಯನ್‌ಳ ದಿನಚರಿಯಲ್ಲಿರುವ ಅವಳ ಬರಹದ ಕೊನೆಯ ದಿನಾಂಕ ಆಗಸ್ಟ್ ೧, ೧೯೪೪. ಆಗಸ್ಟ್ ೪, ೧೯೪೪ ನಾಜಿ ಪೊಲೀಸರು ಅಡಗುದಾಣದ ಮೇಲೆ ದಾಳಿ ಮಾಡಿ ಅಲ್ಲಿದ್ದ ಎಂಟೂ ಜನರನ್ನು ಸೆರೆ ಹಿಡಿದು ಬೇರೆ ಬೇರೆ ಕೂಟ ಶಿಬಿರಗಳಿಗೆ ರವಾನಿಸಿದರು. ಆ್ಯನ್ ಫ್ರಾಂಕಳ ತಂದೆ, ಆಟ್ಟೋ ಫ್ರಾಂಕನ್ನು ಬಿಟ್ಟು ಉಳಿದ ಏಳೂ ಜನರು ತಾವಿದ್ದ ಕೂಟ ಶಿಬಿರಗಳಲ್ಲಿ ಸರಿಯಾದ ಆಹಾರ - ವೈದ್ಯೋಪಚಾರವಿಲ್ಲದೇ ಮರಣಹೊಂದಿದರು. ೧೫ ವರ್ಷದ ಆ್ಯನ್ ಹ್ಯಾನೋವರ್ (ಜರ್ಮನಿ)ನ ಬರ್ಗನ್ ಬೆಲ್ಸನ್ ಕೂಟ ಶಿಬಿರದಲ್ಲಿ ಟೈಫಾಯ್ಡ್‌ಗೆ ಬಲಿಯಾಗಿ, ಸ್ವಾತಂತ್ರ್ಯಕ್ಕಾಗಿ ಪರಿತಪಿಸುತ್ತಾ ಹೊರಜಗತ್ತಿಗೆ ಕಾಲಿಡದೇ ಕೊನೆಯುಸಿರೆಳೆದಳು. ಸುಮಾರು ೬ ಮಿಲಿಯನ್ ಜ್ಯೂಗಳು, ನಾಜಿಗಳ ಹುಚ್ಚಾಟಕ್ಕೆ, ಹುಚ್ಚು ವಿಚಾರಗಳಿಗೆ ಬಲಿಯಾದರು, ಪ್ರಾಣ ತೆತ್ತರು.

ನಾಜಿ ದುರಾಡಳಿತ, ಹಿಟ್ಲರನ ಸರ್ವಾಧಿಕಾರ ಇತಿಹಾಸದ ಭಾಗವಾಯಿತು. ಉಳಿದ ನಾಜಿ ದುರಾತ್ಮರಿಗೆ ನ್ಯೂರೆಮ್‌ಬರ್ಗ್ ವಿಚಾರಣೆಯಲ್ಲಿ ಶಿಕ್ಷೆ ವಿಧಿಸಲಾಯಿತು. ಇನ್ನೊಮ್ಮೆ ಇಂತಹ ಮಾನವ ದುರಂತ ನಡೆಯಬಾರದೆಂಬ ಆಶಯದಿಂದ ವಿಶ್ವರಾಷ್ಟ್ರ ಸಂಸ್ಥೆಯ ಸ್ಥಾಪನೆಯಾಯಿತು, ಮಾನವ ಹಕ್ಕುಗಳ ಘೋಷಣೆಯಾಯಿತು. ಆದರೆ, ವಿಶ್ವದ ನಾನಾ ಭಾಗಗಳಲ್ಲಿ ಈಗಲೂ ಧರ್ಮ, ಜನಾಂಗ, ವರ್ಣ, ಲಿಂಗ, ಭಾಷಾ ಭೇದದ ಕಾರಣವಾಗಿ ನಡೆಯುತ್ತಿರುವ ದೌರ್ಜನ್ಯಗಳಿಗೆ ಕಾರಣವಾದ ಅಸಹನೆಯನ್ನು ಗಮನಿಸುವಾಗ ಇನ್ನೂ ಅನೇಕ ಹಿಟ್ಲರನ ಅವತಾರಗಳು ಬೇರೆ ಬೇರೆ ರೂಪಗಳಲ್ಲಿ, ಹಂತಗಳಲ್ಲಿ ಇರುವುದು ಕಂಡುಬರುತ್ತದೆ. ಬಾಲ್ಕನ್ ರಾಷ್ಟ್ರಗಳಲ್ಲಿ 'ಶುದ್ಧ ಜನಾಂಗ'ದ ಕಲ್ಪನೆ ಇತ್ತೀಚೆಗೆ ಇನ್ನೊಂದು ಜನಾಂಗದ ನಾಶಕ್ಕೆ ಹೇಗೆ ಕಾರಣವಾಯಿತೆಂದು ತೋರಿಸಿಕೊಟ್ಟಿದೆ. ಧರ್ಮ-ಧರ್ಮಗಳಲ್ಲಿ ಮೇಲು-ಕೀಳು ಭಾವನೆ, ತನ್ನದಲ್ಲದ ಧರ್ಮ-ಸಂಸ್ಕೃತಿಯನ್ನು ಒಪ್ಪಿಕೊಳ್ಳದ ಅಸಹನೆ, ವಿಶ್ವದ ಅನೇಕ ಭಾಗಗಳಲ್ಲಿ ಕೋಮುದ್ವೇಷದ ದಳ್ಳುರಿಯನ್ನು ಎಬ್ಬಿಸಿದೆ. ಆಫ್‌ಘಾನಿಸ್ತಾನದ ಹಳದಿ ಬಟ್ಟೆಯ ಪ್ರಕರಣ ಹಳದಿ ನಕ್ಷತ್ರದ ನೆನಪನ್ನು ಕೆದಕುತ್ತದೆ. ಮನದ ಆಳದಲ್ಲೆಲ್ಲೋ ಅಪಾಯದ ಕರೆಗಂಟೆ ಕೇಳಿಸುತ್ತಿದೆ. ಹಿಟ್ಲರನ ಹುಚ್ಚಾಟಗಳಿಗೆ ಮೊದಲೇ ಕಡಿವಾಣ ಹಾಕದ ವಿಶ್ವದ ಇತರ ರಾಷ್ಟ್ರಗಳು ಅವನು ದೈತ್ಯಾಕಾರವಾಗಿ ಬೆಳೆಯಲು ಅಪರೋಕ್ಷವಾಗಿ ಕಾರಣಕರ್ತರಾದರು. ಇತಿಹಾಸದಿಂದ ಪಾಠ ಕಲಿಯುವುದೇ ಇದ್ದಲ್ಲಿ ಆಫ್ಘಾನಿಸ್ತಾನದಲ್ಲಿನ ಈ ಧಾರ್ಮಿಕ ಅಸಹನೆಯ ಹೆಜ್ಜೆಗಳನ್ನು ವಿಶ್ವ ಎಚ್ಚರಿಕೆಯಿಂದ ಗಮನಿಸಬೇಕು. ಆರಂಭದಲ್ಲೇ ದ್ವೇಷದ, ಅಸಹನೆಯ, ಮೊಳಕೆಯನ್ನು ನಾಶಮಾಡಬೇಕು. ಹೆಮ್ಮರವಾಗಿ, ಅಕ್ಕ-ಪಕ್ಕದ ಜಾಗಗಳ ಮೇಲೆ ಹರಡಿ ಆವರಿಸಿಕೊಳ್ಳುವುದರ ವಿರುದ್ಧ ಕ್ರಮ ಕೈಗೊಳ್ಳಬೇಕು.

**ಹೇಮಲತಾ ಮಹಿಷಿ**
ಶಶಿಕಿರಣ್ ಅಪಾರ್ಟ್‌ಮೆಂಟ್ಸ್, ನಂ. ೨೧೯, ೧೮ನೇ ಅಡ್ಡರಸ್ತೆ
ಮಲ್ಲೇಶ್ವರಂ, ಬೆಂಗಳೂರು-೫೬೦ ೦೫೫

# ಗಾಂಧಿ-ಅಂಬೇಡ್ಕರ್ ಭೇಟಿ ಪ್ರಸಂಗ

ಪ್ರೊ|| ಮ. ನ. ಜವರಯ್ಯ



ಒಂದು ಸಣ್ಣ ಅಡಿಟಿಪ್ಪಣಿಯೊಡನೆ ಪ್ರಾಯಶಃ ಹೆಚ್ಚು ಕಡಿಮೆ ಖಚಿತವಾಗಿಯೇ ಹೇಳಬೇಕಾದ ಒಂದು ಸಂಗತಿಯೆಂದರೆ, ಗಾಂಧೀಜಿಯವರನ್ನೂ ಅಂಬೇಡ್ಕರರನ್ನೂ – ಯಾವ ಉಪಮೆಗೂ ಸಿಲುಕದ ಗಹನಾತಿಗಹನವಾದ ಈ ಇಬ್ಬರು ಮಹಾ ಮಾನವರನ್ನು – ದೇಶ ಅರ್ಥ ಮಾಡಿಕೊಂಡಿರುವುದು ಅತ್ಯಲ್ಪವೆಂದೇ ಹೇಳಬೇಕು; ಅರುಣ ಶೌರಿಯಂತೆ ಅವರನ್ನು ವಿಕಾರಗೊಳಿಸಿದವರೇ ಹೆಚ್ಚೆನ್ನಬೇಕು. ಅದರಲ್ಲೂ ಇವರಿಬ್ಬರ ನಡುವಿನ ಮಾನವ ಸಂಬಂಧವನ್ನೂ, ಅವರಿಬ್ಬರೂ ಪರಸ್ಪರ ಭೇಟಿಯಾದ ಐತಿಹಾಸಿಕ ಸನ್ನಿವೇಶವನ್ನಂತೂ, ದೇಶ ಅರ್ಥವಿಸಿಕೊಳ್ಳುವ ಗೋಜಿಗೆ ಹೋದಂತೆ ತೋರುವುದೇ ಇಲ್ಲ. ಪ್ರಜ್ಞಾವಂತ ಸಮುದಾಯ ಅವರಿಬ್ಬರ ನಡುವಿನ ಮಾನವ ಸಂಬಂಧವನ್ನು ತಿಳಿಯಲು ಯತ್ನಿಸಿರುವಂತಿಲ್ಲ. ಇನ್ನು, ಈ ಇಬ್ಬರು ಮಹಾಮಾನವರನ್ನು ಕುರಿತಂತೆ ಅಗಣಿತ ಸ್ತರಗಳಲ್ಲಿ ಸಂಶೋಧನೆಗಳನ್ನು ಕೈಗೊಂಡ ಲೋಕದ ನೂರಾರು ವಿದ್ವಾಂಸರ ಮಾತಂತೂ ಇವರೆಲ್ಲರಿಗಿಂತಲೂ ಭಿನ್ನವಾದದ್ದು; ಅಡಿಟಿಪ್ಪಣಿ ಮತ್ತು ಪುಟಸಂಖ್ಯೆ ಅವರಿಗೆ ಮುಖ್ಯವಾಗಿ ಕಂಡಿರುವಷ್ಟು ಗಾಂಧಿ ಮತ್ತು ಅಂಬೇಡ್ಕರರ ನಡುವಿನ ಜೀವ ಪ್ರೀತಿ ಮತ್ತು ಮಾನವ ಸ್ನೇಹಗಳು ಮಹತ್ವದ ವಿಷಯಗಳಾಗಿ ಆ ವಿದ್ವಾಂಸರಿಗೆ ಕಂಡಿರುವಂತಿಲ್ಲ. ರಾಷ್ಟ್ರವೂ ಅದರ ಜೀವನವೂ ರಾಜಕೀಯವಾಗಿ ಒಂದು ನಿರ್ಣಾಯಕ ಕಾಲಘಟ್ಟವನ್ನು ಪ್ರವೇಶಿಸಿದ್ದ ಕಾಲ ಮತ್ತು ಸನ್ನಿವೇಶಗಳ ಸಂದರ್ಭದಲ್ಲಿ ಅಂಬೇಡ್ಕರರು ತಳೆದು ನಿಂತ ನಿಲುವನ್ನು ಶೌರಿಯಂಥ ಲೇಖಕರು ಒಂದು ಅತಿರೇಕಕ್ಕೆ ತೆಗೆದುಕೊಂಡು ಹೋಗಿ ನಿಲ್ಲಿಸಿ, ಹಾಗೆಯೇ ಗಾಂಧೀಜಿಯವರು ತಳೆದು ನಿಂತ ನಿಲುವನ್ನು ಇನ್ನೊಂದು ಅತಿರೇಕದ ನೆಲೆಯಲ್ಲಿ ನಿಲ್ಲಿಸಿ, ಈ ನಡುವಿನಂತರದ ಶೂನ್ಯದಲ್ಲಿ ತಮಗಿಷ್ಟ ಬಂದ ನಿರ್ಧಾರಗಳನ್ನು ಘೋಷಿಸಿ ವಿಜೃಂಭಿಸುವುದನ್ನೇ ಬಹು ಮುಖ್ಯವಾಗಿ ಗಾಂಧಿ – ಅಂಬೇಡ್ಕರರನ್ನು ಕುರಿತ ಬಹುತೇಕ ಸಂಶೋಧನೆಗಳಲ್ಲಿ ಕಾಣುತ್ತೇವೆ.

೧೯೪೬ರ ದಶಕದ ೧೯೪೭ರವರೆಗೂ ಗಾಂಧಿ-ಅಂಬೇಡ್ಕರರ ನಡುವೆ ಘಟಿಸಿದ ಒಂದು ಭೇಟಿಯ ಪ್ರಸಂಗ ಸದಾ ಅನುರಣೀಯ. ಬಹುಶಃ ಹಾಗೆಂದೇ ಅದೊಂದು ಅವಿಸ್ಮರಣೀಯ ಮಾನವೀಯ ಪ್ರಸಂಗ. ಅದು ನಮ್ಮ ನೆಲದ ಮಾನವ ಹೃದಯ ಮರೆಯಲಸಾಧ್ಯವಾದ ವಿಷಯ. ಈ ಘಟನೆಯನ್ನು ೧೯೭೨ರಲ್ಲಿ ನನಗೆ ನಿರೂಪಿಸಿದವರು ಭಾರತ ಸಂವಿಧಾನ ರಚನಾ ಅಸೆಂಬ್ಲಿಯ ೩೧೮ ಮಂದಿ ಸದಸ್ಯರಲ್ಲೊಬ್ಬರಾದ ಎಸ್. ನಿಜಲಿಂಗಪ್ಪನವರು. ಆದರೆ ಇಂತಹ ಎಷ್ಟೋ ಘಟನೆಗಳು ಎಲ್ಲೂ ದಾಖಲಾಗದೇ ಹೋಗಿರುವ ಸ್ಥಿತಿ ಈ ಇಬ್ಬರು ಮಹಾಮಾನವರ ನಡುವೆ ಕೇವಲ ವಿದ್ವೇಷವನ್ನು ಮಾತ್ರ ಪ್ರಚಾರಗೈದ ಜಾತೀಯ ಮತ್ತು ಅವರ ಮಾಧ್ಯಮ ಶಕ್ತಿಗಳ ವ್ಯವಸ್ಥಿತ ಕುತಂತ್ರಗಳ ಸಂಕೇತವೆನಿಸುತ್ತದೆ. ಸಂವಿಧಾನ ರಚನಾ ಅಸೆಂಬ್ಲಿಗೆ ಚುನಾವಣೆಗಳೆಲ್ಲ ನಡೆದು ಮುಗಿದಿರುತ್ತದೆ. ಗೆಲ್ಲುವವರು ಗೆದ್ದಿರುತ್ತಾರೆ, ಸೋಲುವವರು ಸೋತೂ ಇರುತ್ತಾರೆ. ಆದರೆ ಈ ಚುನಾವಣೆಯಲ್ಲಿ ಅನ್ಯರಂತೆಯೇ ಸ್ಪರ್ಧಿಸಿದ್ದ ಅಂಬೇಡ್ಕರರಿಗೆ ಒಂದೆಡೆ ಸೋಲು, ಇನ್ನೊಂದೆಡೆ ಗೆಲುವು - ಎರಡೂ ಸಂಭವಿಸಿರುತ್ತವೆ. ಆದರೆ, ಅಂಬೇಡ್ಕರರು ತಮ್ಮ ಹುಟ್ಟೂರು ರಾಜ್ಯವಾದ ಮುಂಬೈ ಪ್ರದೇಶದಲ್ಲಿ ಚುನಾವಣೆಗೆ ಸ್ಪರ್ಧಿಸಿ ಶೋಚನೀಯವಾಗಿ ಪರಾಭವಗೊಂಡಿರುತ್ತಾರೆ. ಅಂಬೇಡ್ಕರ್ ಸೋಲಿನ ಈ ವಿಷಯ ಆ ಕಾಲದ ಸಾವರ್‌ಕರ್ ಅಧ್ಯಕ್ಷತೆಯ ಹಿಂದೂ ಮಹಾಸಭಾದವರಿಗೆ ಬ್ರಹ್ಮಾನಂದ ವುಂಟುಮಾಡಿರುತ್ತದೆ. ಆ ಆನಂದವನ್ನು ಹಿಂದೂ ಮಹಾಸಭಾದ ಅಧ್ಯಕ್ಷರಾಗಿದ್ದ ವಿ. ಡಿ. ಸಾವರ್‌ಕರ್‌ರವರು ಒಂದೆರಡು ಕಡೆ ಪರೋಕ್ಷವಾಗಿಯಾದರೂ ವ್ಯಕ್ತಪಡಿಸದೆ ಬಿಟ್ಟಿರುವುದಿಲ್ಲ. ಅಂಬೇಡ್ಕರರ ಆ ಸೋಲಿನಿಂದ ಆ ಕಾಲದ ಆರೆಸೆಸ್‌ನವರಿಗಂತೂ ಪರಮಾನಂದವುಂಟಾಗಿರುತ್ತದೆ. ಅದೇ ಆನಂದವನ್ನು ಆರೆಸೆಸ್ ಮುಖಂಡರಾಗಿದ್ದ ಎಂ. ಎಸ್. ಗೋಲ್ವಾಲ್ಕರ್‌ರವರು ಬಹಿರಂಗವಾಗಿಯೂ, ಅವರ ಜಾತಿ ರಾಜಕೀಯದ ರಾಜಾರೋಷವಾಗಿಯೂ ಬಹು ಸಂಭ್ರಮದಿಂದಲೇ ವ್ಯಕ್ತಪಡಿಸಿರುತ್ತಾರೆ. ಆ ನಂತರದ ಕೆಲ ದಿನಗಳ ನಂತರವಂತೂ ಅಂಬೇಡ್ಕರರನ್ನು "ಹಿಂದೂ ಕೋಡ್ ಬಿಲ್ ಕಮಿಟಿ"ಯ ಅಧ್ಯಕ್ಷರನ್ನಾಗಿ ಸರ್ಕಾರ ನೇಮಕ ಮಾಡಿದ ನಂತರ, ಅಂಬೇಡ್ಕರರ ಆ ನೇಮಕವನ್ನು ಪೂರಿ ಶಂಕರಾಚಾರ್ಯ ಜಾತೀಯವಾಗಿ ವಿರೋಧಿಸಿದರೆ, ಆರೆಸೆಸ್‌ನ ಗೋಲ್ವಾಲ್ಕರ್‌ರವರು ಮುಂಬೈ ಮುಖ್ಯ ರಸ್ತೆಯಲ್ಲಿ ರಾಜಕೀಯವಾಗಿ ಪ್ರತಿಭಟಿಸಿದರು. ಗಾಂಧೀಜಿಯವರು, ಅಂಬೇಡ್ಕರರ ವಿರುದ್ಧ ಆವರೆಗೂ ನಡೆದಿದ್ದ ಇಷ್ಟೆಲ್ಲಾ ಘಟನೆಗಳ ಸಕಲ ವಿವರಗಳನ್ನೂ ಸಾಧ್ಯವಾದ ಎಲ್ಲಾ ಮೂಲಗಳಿಂದಲೂ ಸಂಗ್ರಹಿಸಿ ಅರಿತುಕೊಂಡರಾದರೂ, ಅಂಬೇಡ್ಕರರ ಹುಟ್ಟೂರು ರಾಜ್ಯವಾದ ಮುಂಬೈ ಪ್ರದೇಶ ಕ್ಷೇತ್ರದಲ್ಲಿ ಚುನಾವಣೆಯಲ್ಲಿ ಅವರು ಪರಾಭವಗೊಂಡುದರ ಹಿಂದಿನ ಕಾರಣಗಳನ್ನು ಕೇಳಿ ಗಾಂಧೀಜಿಯವರ ಎದೆ ನಡುಗಿಹೋಗುತ್ತದೆ. ಈ ಎದೆನಡುಗುವ ಮಾತನ್ನು ಸ್ವತಃ ಗಾಂಧೀಜಿಯವರೇ ಆ ನಂತರ ಅಂಬೇಡ್ಕರರನ್ನು ಖುದ್ದು ಭೇಟಿಯಾದ ಸಂದರ್ಭದಲ್ಲಿ ವ್ಯಕ್ತಪಡಿಸುತ್ತಾರೆ. ಮುಂಬೈ



ಪ್ರದೇಶದಲ್ಲಿ ಅಂಬೇಡ್ಕರರನ್ನು ಸೋಲಿಸಲು ಮುಖ್ಯವಾದ ಮೂರು ರೀತಿಯ ವಿರೋಧಿ ಶಕ್ತಿಗಳು ಸನ್ನದ್ಧ ಸ್ಥಿತಿಯಲ್ಲಿರುತ್ತವೆ. ಸಕಲಾಸ್ತ್ರ ಮತ್ತು ವಿಕಲ ತಂತ್ರಗಳಿಂದಲೂ ಅವುಗಳು ಸುಸಜ್ಜಿತವಾಗಿರುತ್ತವೆ. ಆ ಮೂರು ವಿರೋಧಿ ಶಕ್ತಿಗಳೆಂದರೆ ೧) ಹಿಂದೂ ಮಹಾಸಭಾ, ೨) ಆರೆಸೆಸ್ ಮತ್ತು ೩) ಕಾಂಗ್ರೆಸ್. ಆದರೆ ಹಿಂದೂ ಮಹಾಸಭಾ ಮತ್ತು ಆರೆಸೆಸ್ ಶಕ್ತಿಗಳು ಅಂಬೇಡ್ಕರರನ್ನು ವಿರೋಧಿಸುವುದಕ್ಕೆ ಇರುವ ಕಾರಣಗಳನ್ನು ಬಹು ಸುಲಭವಾಗಿಯೇ ಅರ್ಥಮಾಡಿಕೊಳ್ಳಬಹುದು. ಜಾತಿ ವ್ಯವಸ್ಥೆಯನ್ನು ಯಾವುದೇ ಸಂದರ್ಭದಲ್ಲೂ ಸಂರಕ್ಷಿಸುವ ಆರೆಸೆಸ್‌ನ ಧೋರಣೆ ಎಲ್ಲ ಕಾಲಕ್ಕೂ ಯಾವುದೇ ಮುಚ್ಚು ಮರೆಯಿಲ್ಲದಷ್ಟು ಸ್ಪಷ್ಟವಾಗಿಯೇ ನಡೆದಿತ್ತು. ಆದರೆ ಅಂಬೇಡ್ಕರರನ್ನು ಚುನಾವಣೆಯಲ್ಲಿ ಸೋಲಿಸಲು, ಅಂದಿನ ಮುಂಬೈ ಪ್ರದೇಶ ಕಾಂಗ್ರೆಸ್ ಕಮಿಟಿಯ ನೇತೃತ್ವದಲ್ಲಿ ನಡೆಸಲಾದ ಅಂಬೇಡ್ಕರ್ ವಿರೋಧಿ ರಾಜಕೀಯ ಪಿತೂರಿಗಳು, ಪಿತೂರಿಗಳು ಎಂದು ಕರೆಯಲೂ ಸಾಧ್ಯವಾಗದ ತೀರಾ ಕೆಳಮಟ್ಟದ ಕುತಂತ್ರಗಳನ್ನು ಶೌರಿಯಂಥ ದುರುಳ ಶಕ್ತಿಗಳು ಕಾಂಗ್ರೆಸ್‌ನೊಳಗೂ ಕ್ರಿಯಾಶೀಲವಾಗಿದ್ದವು. ಆ ಕುತಂತ್ರ ಸಮಸ್ತದ ಮುಖಂಡತ್ವ ವಹಿಸಿದ್ದವರು ಅಂದಿನ ಭೂಮಾಲೀಕ ಗುಜರಾತಿ ನಾಯಕರಾದ ವಲ್ಲಭಭಾಯ್ ಪಟೇಲರು. ಕೆಲವು ಐತಿಹಾಸಿಕ ದಾಖಲೆಗಳ ಪ್ರಕಾರ ಅಂಬೇಡ್ಕರರನ್ನು ಮುಂಬೈ ಪ್ರಾಂತದಲ್ಲಿ ಪರಾಭವಗೊಳಿಸಲು ಸಕಲ ಕುತಂತ್ರ ಸಂಪನ್ನರಾದ ಪಟೇಲರು, ತಮ್ಮ ಈ ನೀಚ ರಾಜಕೀಯಕ್ಕೆ ಬಾಬು ಜಗಜೀವನರಾಮ್‌ರವರನ್ನು ತಮ್ಮ ಲೆಫ್ಟಿನೆಂಟ್ ಆಗಿ ಬಳಸಿ ಕೊಂಡರು. ಪಟೇಲರ ನೇತೃತ್ವದಲ್ಲಿ ಕಾಂಗ್ರೆಸ್ ಮತ್ತು ಸೇವಾದಳದ ಸಾವಿರಾರು ಕಾರ್ಯಕರ್ತರನ್ನು ಒಂದೆಡೆ ಜಮಾಯಿಸಲಾಯಿತು. ಚುನಾವಣೆಯ ಹಿಂದಿನ ದಿನದಿಂದಲೇ ಕಾಂಗ್ರೆಸ್ ಎಂ.ಎಲ್.ಎ. ಮತ್ತು ಎಂ.ಎಲ್.ಸಿ.ಗಳ ಮನೆಗಳ ಮುಂದೆ, ತುಂಬಾ ವ್ಯವಸ್ಥಿತವಾಗಿಯೇ ಗುಂಪು ಗುಂಪಾಗಿ ಸೇವಾದಳ ಕಾರ್ಯಕರ್ತರನ್ನು ಸೇರಿಸಲಾಯಿತು. ಯಾವ ಕಾರಣಕ್ಕೂ ಅಂಬೇಡ್ಕರರನ್ನು ಗೆಲ್ಲಿಸಬಾರದೆಂದು ನಿರ್ಣಯಿಸಲಾಯಿತು. ಎಂತಹ ಪರಿಸ್ಥಿತಿ ಎದುರಾದರೂ ಸಹ ಅಂಬೇಡ್ಕರರನ್ನು ಸೋಲಿಸಲು ಸಿದ್ಧರಿರಬೇಕೆಂದು ಅವರಿಗೆಲ್ಲ ಮನದಟ್ಟು ಮಾಡಿಕೊಡ

ಲಾಯಿತು. ಅದರಲ್ಲೂ ನಿರ್ದಿಷ್ಟವಾಗಿ ಬಾಬು ಜಗಜೀವನ ರಾಮ್‌ರವರ ನೇತೃತ್ವದಲ್ಲಿ ರಚಿತವಾದ ಸೇವಾದಳದ ಹಲವಾರು ಗುಂಪುಗಳು, ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಎಂ.ಎಲ್.ಎ.ಗಳು ಮತ್ತು ಎಂ.ಎಲ್.ಸಿ. ಗಳ ಮನೆಗಳ ಮುಂದೆ ಹಗಲಿರುಳು ಒಂದು ರೀತಿಯ ಗೃಹ ಬಂಧನದ ಪಹರೆ ಹಾಕಲಾಯಿತು. ಅಂಬೇಡ್ಕರರು ತಮ್ಮ ಅನುಯಾಯಿಗಳೊಡನೆ ಚುನಾವಣಾ ಪ್ರಚಾರವನ್ನು ಕೈಗೊಂಡು ಮತ ಯಾಚಿಸಲು ಶಾಸಕರ ಮನೆಯ ಮುಂದೆ ಬರುವುದನ್ನು ಸಹ ಅಂಬೇಡ್ಕರರ ವಿರೋಧಿ ಮತ್ತು ಕಾಂಗ್ರೆಸ್ ಪರವಾದ ಘೋಷಣೆಗಳ ಮೂಲಕ, ಸಾಧ್ಯಂತದವರೆಗೂ ನಿರ್ಬಂಧಿಸಲಾಯಿತು. ಇವೆಲ್ಲವುಗಳ ಒಟ್ಟು ಪರಿಣಾಮವಾಗಿ ಅಂಬೇಡ್ಕರರು ತಮ್ಮ ಹುಟ್ಟೂರು ರಾಜ್ಯವಾದ ಮುಂಬೈ ಪ್ರಾಂತದಲ್ಲಿ ಅಸಹನೀಯ ಸೋಲನ್ನೇ ಅನುಭವಿಸಬೇಕಾಯಿತು.

ಈ ಎಲ್ಲಾ ಘಟನೆಗಳನ್ನು ಕೇಳಿ ಆಕ್ರೋಶದವರೂ, ಅತೀವ ಉದ್ವಿಗ್ನರೂ, ಮಾನವ ಪ್ರೇಮದ ತುಂದಿಲರೂ ಆಗಿದ್ದ ಗಾಂಧೀಜಿಯವರು ''ನಾನು ಕೂಡಲೇ ಡಾಕ್ಟರ್ ಸಾಹೇಬರನ್ನು ಭೇಟಿಯಾಗಬೇಕು'' ಎಂಬುದಾಗಿ, ತಮ್ಮ ಕಾರ್ಯದರ್ಶಿ ಮಹಾದೇವ ದೇಸಾಯಿ ಎದುರಿಗೆ, ತುಂಬಾ ಅಸಹನೆಯಿಂದಲೇ ಗುಡುಗಾಡಿದರು. ಪರಿಸ್ಥಿತಿಯ ಸೂಕ್ಷ್ಮವರಿತ ಮಹಾದೇವ ದೇಸಾಯಿಯವರು ದೆಹಲಿಯ ಪೃಥ್ವಿರಾಜ್ ರಸ್ತೆಯ ಅಂಬೇಡ್ಕರರ ಮನೆಗೆ ಜರೂರು ಸುದ್ದಿಯನ್ನು ಆ ಕ್ಷಣವೇ ಕಳುಹಿಸಿದರು. ಸುದ್ದಿಯನ್ನು ಕೇಳಿ, ಒಂದು ನಿಮಿಷ ಮೌನವಾದ ಅಂಬೇಡ್ಕರರು ''ನಾನು ಮಹಾತ್ಮಾಜೀಯವರನ್ನು ಭೇಟಿಯಾಗುತ್ತೇನೆ; ಆದರೆ ಬಿರ್ಲಾ ಭವನಕ್ಕೆ ಮಾತ್ರ ಕಾಲಿಡುವುದಿಲ್ಲ'' ಎಂದು ಖಡಾಖಂಡಿತ ವಾಗಿ ತಮ್ಮ ಆಪ್ತ ಕಾರ್ಯದರ್ಶಿ ರತ್ತು ಅವರ ಮುಖಾಂತರ ಮಹಾದೇವ ದೇಸಾಯಿ ಅವರಿಗೆ ಪ್ರತ್ಯುತ್ತರ ಕಳುಹಿಸಿದರು. ಅಂಬೇಡ್ಕರರ ಈ ಉತ್ತರದಿಂದ ಮತ್ತಷ್ಟು ಸಮಾಧಾನ ಕಳೆದುಕೊಂಡ ಗಾಂಧೀಜಿಯವರು ''ಈ ಬಿರ್ಲಾ ಭವನ ನನಗೂ ಬೇಕಿಲ್ಲ; ಅಂಬೇಡ್ಕರರ ಮನೆಗೆ ನಾನೇ ಹೋಗುತ್ತೇನೆ'' ಎಂದು ಕೂತಲ್ಲಿಂದ ಎದ್ದುನಿಂತ ಗಾಂಧೀಜಿಯವರು, ದೆಹಲಿಯ ಬಿರ್ಲಾ ಭವನದ ತಮ್ಮ ಪ್ರಾರ್ಥನಾ ಸಭಾಂಗಣದಿಂದ ಹೊರನಡೆದೇಬಿಟ್ಟರು.....

ಗಾಂಧೀಜಿಯವರು ಹಾಗೆ ಬಿರ್ಲಾ ಭವನದಿಂದ ಹೊರಬಂದು, ಆ ಭವನದ ಪೋರ್ಟಿಕೋದಿಂದ ನಿರ್ಗಮಿಸಿ, ಎರಡು ಮೂರು ಹೆಜ್ಜೆ ಮುಂದೆ ನಡೆದು ಒಮ್ಮೆ ತಲೆ ಎತ್ತಿ ನೋಡಿದರೆ, ಅಂಬೇಡ್ಕರರು ಆ ಮೊದಲೇ ಬಂದು ಬಿರ್ಲಾ ಭವನದಿಂದ ಸ್ವಲ್ಪ ದೂರದಲ್ಲಿ ನಿಂತಿರುತ್ತಾರೆ. ಇದನ್ನು ಕಂಡ ಗಾಂಧೀಜಿಯವರು, ಚಕಿತರೂ ಸಂತುಷ್ಟರೂ ಸಂಭ್ರಮಿತರೂ ಆಗಿ, ಸರಸರನೆ ತಾವೇ ಸಮೀಪ ಬಂದು ಮೊದಲು ಹಸ್ತಲಾಘವ ಮಾಡುತ್ತಾರೆ. ಆದರೆ ಅದರಿಂದ ಕಿಂಚಿತ್ತೂ ತೃಪ್ತರಾಗದೆ, ಇಬ್ಬರೂ ಪರಸ್ಪರ ಆಲಂಗಿಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಗಾಂಧೀಜಿಯವರು ''ಡಾಕ್ಟರ್ ಸಾಬ್, ನಿಮ್ಮೊಂದಿಗೆ ನಾನು ಬೇಕಾದಷ್ಟು ಮಾತನಾಡುವುದಿದೆ, ನಾವಿಬ್ಬರೂ ಎಲ್ಲಿಗೆ ಹೋಗೋಣ ? ನೀವೇ ಹೇಳಿ'' ಎನ್ನುತ್ತಾರೆ. ಅದಕ್ಕೆ ಅಂಬೇಡ್ಕರರು ಅತ್ಯಂತ ಗಂಭೀರವಾಗಿ ಹಾಸ್ಯ ಮಾಡುತ್ತಾರೆ : ''ಮಹಾತ್ಮಾಜೀ, ನಾನು ನಿಮ್ಮ ಅಸ್ಪೃಶ್ಯ ಗುಲಾಮನಲ್ಲವೇ ? ಅಂದ ಬಳಿಕ, ನಿಮ್ಮ ಆಜ್ಞೆಯಂತೆ ನಾನು ನಡೆಯಬೇಕಾದುದು ನನ್ನ ಕರ್ತವ್ಯವಲ್ಲವೇ ?'' ಎನ್ನುತ್ತಾರೆ.

ವಾಸ್ತವವಾಗಿ ಅಂಬೇಡ್ಕರರು ಹಾಸ್ಯ ಮಾಡಿದರು ಎಂಬುದು ಸತ್ಯವಾದರೂ, ಆ ಹಾಸ್ಯದ ವಸ್ತು ಹರಿತವಾದ ಚೂರಿಯಂತೆ ಗಾಂಧೀಜಿಯವರ ಎದೆಗೆ ಚುಚ್ಚಿತೋ ಎಂಬಂತೆ, ಹಾಗೆ ಚುಚ್ಚಿದುದರ ನೋವು ನೀರು ಕಣ್ಣಲ್ಲಿ ತುಂಬಿಕೊಂಡಿತೋ ಎಂಬಂತೆ, ಗಾಂಧೀಜಿಯವರು ತಮ್ಮ ಎಡಗೈಯಲ್ಲಿ ತಮ್ಮ ಎರಡೂ ಕಣ್ಣುಗಳನ್ನು ಒರೆಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ, ಗಾಂಧೀಜಿಯವರು ತಮ್ಮ ಸೊಂಟದಲ್ಲಿ ಸಿಗಿಸಿಕೊಂಡಿದ್ದ ಖಾದಿ ಕರವಸ್ತ್ರ ಅವರ ನೆನಪಿಗೂ ಬಾರದೆ ಹೋಗುತ್ತದೆ.

ತದನಂತರ, ನಮ್ಮ ನೆಲದ ನೆಲೆಯಿಂದ ಹಿಮಾಲಯ ದೆತ್ತರಕ್ಕೆ ಪ್ರವರ್ಧಿಸಿ, ಇಡೀ ಮಾನವ ಲೋಕದ ಗಮನವ ನ್ನೆಲ್ಲಾ ತಮ್ಮೆಡೆಗೆ ಸೆಳೆದುಕೊಂಡ, ಈ ಇಬ್ಬರು ಮಹಾಮಾನವ ಮೂರ್ತಿಗಳು, ಮುಂಬೈನ ಒಂದು ಪರಿಚಿತರ ಖಾಸಗಿ ಕಟ್ಟಡ ದಲ್ಲಿ ಪರಸ್ಪರ ಎದುರಾಗಿ ಕುಳಿತು, ಅದೆಷ್ಟೋ ಮಾತುಗಳನ್ನಾಡು ತ್ತಾರೆ : ಅದೆಷ್ಟೋ ಹಾಸ್ಯಗಳನ್ನು ಮಾಡುತ್ತಾರೆ; ತಮ್ಮ ಕಾಲ ಘಟ್ಟದ ಅದೆಷ್ಟೋ ಮಹಾಪುರುಷರನ್ನು ಉಲ್ಲೇಖಿಸುತ್ತಾರೆ; ಗೌರವಪೂರ್ವಕವಾಗಿ ಸ್ಮರಿಸುತ್ತಾರೆ; ಮೆಚ್ಚುಗೆಯನ್ನು ಪರಸ್ಪರ ಹಂಚಿಕೊಳ್ಳುತ್ತಾರೆ. ಅವರಿಬ್ಬರ ಸಂಭಾಷಣೆ ಹಿಂದಿಯಲ್ಲೂ, ಇಂಗ್ಲಿಷ್‌ನಲ್ಲೂ ನಡೆಯುತ್ತದೆ. ಆದರೆ ರಾಜಕೀಯ ವಿಚಾರವನ್ನು ತಿಲಮಾತ್ರವೂ ಅವರು ಪ್ರಸ್ತಾಪಿಸುವುದಿಲ್ಲ. ರಾಜಕೀಯವನ್ನು ಹೊರತುಪಡಿಸಿ ಮಹತ್ವಪೂರ್ಣವೆನಿಸುವ ಆ ಕಾಲದ ಅನ್ಯ ಯಾವುದೇ ವಿಚಾರ ಅವರ ಮಾತುಕತೆ ಗಳಿಂದ ದೂರ ಉಳಿಯುವುದೇ ಇಲ್ಲ. ಗಾಂಧೀಜಿಯವರು ಅಂಬೇಡ್ಕರರನ್ನು ''ಡಾಕ್ಟರ್ ಸಾಬ್'' ಎಂತಲೇ ಪ್ರತಿಸಲವೂ ಸಂಬೋಧಿಸುತ್ತಾರೆ. ಪ್ರತಿಯಾಗಿ ಅಂಬೇಡ್ಕರರು ಗಾಂಧೀಜಿ ಯವರನ್ನು ''ಮಹಾತ್ಮಾಜೀ'' ಎಂತಲೇ ಪ್ರತಿ ಸಲವೂ ಸಂಬೋಧಿಸುತ್ತಾರೆ. ಹೀಗೆ ನಡೆದ ಮಾತುಕತೆಯ ಒಂದು ಪರಾಕಾಷ್ಠೆಯ ಘಟ್ಟದಲ್ಲಿ, ಗಾಂಧೀಜಿಯವರು ತುಂಬಾ ಆವೇಶಭರಿತರಾಗಿ ''ಡಾಕ್ಟರ್ ಸಾಬ್, ಕೇವಲ ಆರೆಂಟು ನೂರು ಅಥವಾ ಸಾವಿರ ರೂಪಾಯಿಗಳ ನಿಮ್ಮ ವಕೀಲೀ ಸಂಪಾದನೆಯಲ್ಲಿ ಜೀವನ ಮಾಡುತ್ತಿದ್ದೀರಿ ಎಂಬ ವಿಷಯ ಕೇಳಿ, ನನ್ನೆದೆ ನಡುಗುತ್ತಿದೆ ! ನೀವು ಮನಸು ಮಾಡಿದರೆ ಯುರೋಪಿನಲ್ಲಿ ನೆಲೆಸಬಹುದು; ಕೋಟಿ ಕೋಟಿ ಗಳಿಸಬಹುದು. ಬಿರ್ಲಾ ಭವನದ ಬದುಕು ನನಗೆ ಸಾಕಾಗಿದೆ. ನಿಮ್ಮ ಹಟವನ್ನು ನನಗೆ ಬಿಟ್ಟುಕೊಡಿ; ನಿಮ್ಮ ಬಡತನವನ್ನು ನನಗೆ ಕೊಟ್ಟುಬಿಡಿ; ಪ್ರಥಮ ರಾಷ್ಟ್ರಪತಿಯಾಗಲು ನೀವು ಒಪ್ಪಿಕೊಳ್ಳಿ'' ಎಂದು ಪರಿಪರಿಯಾಗಿ ಆವೇಶದಿಂದ ಒತ್ತಾಯಿ ಸುತ್ತಾರೆ. ಅದಕ್ಕೆ ಪ್ರತಿಯಾಗಿ ಅಂಬೇಡ್ಕರರು, ತುಂಬಾ ಸಮಾಧಾನಚಿತ್ತದಿಂದಲೇ, ಕೊಂಚವೂ ವಿಚಲಿತರಾಗದೆ, ಗಾಂಧೀಜಿಯವರ ಸಲಹೆಗೆ ಕೊಂಚ ಹುಬ್ಬೇರಿಸಲೂ ಅವಕಾಶವಿಲ್ಲದಂತೆ ಹೀಗೆ ನುಡಿಯುತ್ತಾರೆ : ''ಮಹಾತ್ಮಾಜೀ, ನಿಮ್ಮ ಸಲಹೆಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಆದರೆ, ನನ್ನ ರಾಷ್ಟ್ರಕ್ಕೆ ನಾನು ತ್ಯಾಗ ಮಾಡಲು, ನನ್ನ ಹತ್ತಿರ ಏನೊಂದೂ ಇಲ್ಲವಾದ್ದರಿಂದ, ನಿಮ್ಮ ಮಾತಿನಂತೆ ರಾಷ್ಟ್ರಪತಿಯಾಗುವ ಅವಕಾಶವನ್ನಾದರೂ ನಾನು ತ್ಯಾಗ ಮಾಡಿಬಿಡುತ್ತೇನೆ; ನಿಮ್ಮನ್ನು ರಾಷ್ಟ್ರಪಿತ ಎನ್ನಲಾಗುತ್ತದೆ. ಆದ್ದರಿಂದ ನನ್ನ ಈ ತ್ಯಾಗವನ್ನು ಕೃಪೆಯಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ.'' ಅಂಬೇಡ್ಕರರ ಈ ಉತ್ತರದಿಂದ ಗಾಂಧೀಜಿಯವರು ಮತ್ತಷ್ಟು ದುಃಖಿತರಾಗುತ್ತಾರೆ. ಸುದೀರ್ಘವಾದ ತಮ್ಮ ರಾಷ್ಟ್ರೀಯ ಚಳುವಳಿಯ ಯಾವ ಕಾಲಘಟ್ಟದಲ್ಲೂ ಇಂತಹ ಪ್ರಸಂಗವೊಂದು ಗಾಂಧೀಜಿಯವರಿಗೆ ಎದುರಾಗಿರಲಿಲ್ಲ ವೆಂಬುದನ್ನು ಆ ಸಂದರ್ಭದಲ್ಲಿ ಅವರು ನೆನೆಯುತ್ತಾರೆ. ಕಾಂಗ್ರೆಸ್ ಪಕ್ಷದಲ್ಲಿರುವವರು ಬಹುತೇಕ ಮಂದಿ ರಾಜಕೀಯ ಲಾಭಾಸಕ್ತರು ಎಂಬುದು ಭೂತಾಕಾರವಾಗಿ ಗಾಂಧೀಜಿ ಯವರ ಮುಂದೆ ಆ ಸಂದರ್ಭದಲ್ಲಿ ಎದ್ದು ನಿಲ್ಲುತ್ತದೆ. ಕಾಂಗ್ರೆಸ್ ಪಕ್ಷದಲ್ಲಿ, ತಮ್ಮ ಮಾತಿಗೆ ಈಗ ಬೆಲೆಯಿಲ್ಲ ವೆಂಬುದನ್ನು ಗಾಂಧೀಜಿಯವರು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಆ ಸಂದರ್ಭದಲ್ಲಿ ಗಾಂಧೀಜಿಯವರು ಒಂದು ರೀತಿಯ ದುಗುಡದಲ್ಲಿದ್ದರೆ, ಅಂಬೇಡ್ಕರರು ಅಚಲ ಚಿಂತಾಮಗ್ನರಾಗಿ ರುತ್ತಾರೆ. ಆ ಸಂದರ್ಭದಲ್ಲಿನ ಅವರ ಮನಸ್ಥಿತಿ ಎಷ್ಟೊಂದು ಉಲ್ಬಣಾವಸ್ಥೆಯಲ್ಲಿರುತ್ತದೆ ಎಂದರೆ, ಮುಂಬೈ ಪ್ರಾಂತದ ಚುನಾವಣೆಯಲ್ಲಿ ಅಂಬೇಡ್ಕರರನ್ನು ಸೋಲಿಸಿದ್ದರೂ, ಪಶ್ಚಿಮ ಬಂಗಾಳ ಪ್ರಾಂತದಲ್ಲಿ, ಆ ಕಾಲದ ಆ ಪ್ರಾಂತದ ಹಿಂದುಳಿದ ವರ್ಗಗಳ ಗಣ್ಯ ನಾಯಕರಾಗಿದ್ದ ಪ್ರಭಾಕರ್ ಮಂಡಲ್‌ರವರ ನೇತೃತ್ವದಲ್ಲಿ ನಡೆದ ಚುನಾವಣಾ ಪ್ರಚಾರದಲ್ಲಿ, ಸಂವಿಧಾನ ರಚನಾ ಅಸೆಂಬ್ಲಿಗೆ ಅಂಬೇಡ್ಕರರು ಬಹುಮತದಿಂದಲೇ ಗೆದ್ದಿದ್ದರೆಂಬ ವಿಷಯವನ್ನು ಕೂಡ ಗಾಂಧೀಜಿಯವರು ಕೇಳಲಾಗಲಿಲ್ಲ; ಅಂಬೇಡ್ಕರರು ಸಹ ಹೇಳಲಾಗಲಿಲ್ಲ. ಆದರೂ ಆ ನಂತರದ ಭಾರತ ಸಂವಿಧಾನ ರಚನಾ ಇತಿಹಾಸ, ಒಟ್ಟು ೧೩ ಸಂಪುಟಗಳಲ್ಲಿ ಇಂದು ರಾಷ್ಟ್ರದ ಮುಂದಿದೆ. ಆ ವೇಳೆಗಾಗಲೇ ಕಾಂಗ್ರೆಸ್‌ನ ಮೇಲೆ ಗಾಂಧೀಜಿ ತಮ್ಮ ಹಿಡಿತ ವನ್ನು ಸಂಪೂರ್ಣವಾಗಿಯೂ ಕಳೆದುಕೊಂಡಿದ್ದರೆಂಬುದನ್ನು ಅಂಬೇಡ್ಕರರು ಬಲ್ಲವರಾಗಿರುತ್ತಾರೆ. ಕಾಂಗ್ರೆಸ್ ಪಕ್ಷವು ಮದನ ಮೋಹನ ಮಾಳವೀಯ ಮತ್ತು ಚಕ್ರವರ್ತಿ ರಾಜ ಗೋಪಾಲಾಚಾರಿಯವರಂಥ ಪುರೋಹಿತಶಾಹಿ ಮುಖಂಡರ ಕೈಯಲ್ಲಿ ಬಿದ್ದಿತ್ತೆಂಬುದನ್ನು ಸ್ವತಃ ಅಂಬೇಡ್ಕರರೆ ತಮ್ಮ ಸಂಶೋಧನ ಸಂಪುಟಗಳಲ್ಲಿ ದಾಖಲಿಸಿರುತ್ತಾರೆ. ನೆಹರೂ ಅವರು ಹೇಳಿದಂತೆ ನಡೆದುಕೊಳ್ಳುವುದು ಮಾತ್ರ ಅವರ ಪಾಲಿಗಿರುತ್ತದೆ. ಸದಾ ತುಂಬಿರುತ್ತಿದ್ದ ಗಾಂಧೀಜಿ ಯವರ ಪ್ರಾರ್ಥನಾ ಸಭೆಗಳು ತದನಂತರ ಬಿಕೋ ಎನ್ನತೊಡಗಿದ್ದು ದನ್ನು ಅಂಬೇಡ್ಕರರು ಕಂಡವರಾಗಿರುತ್ತಾರೆ. ಆ ವೇಳೆಗಾಗಲೇ ಗಾಂಧೀಜಿಯವರ ಗಂಡುಮಕ್ಕಳೆಲ್ಲರೂ ಗಾಂಧೀಜಿಯವರಿಗೆ ಇಷ್ಟವಿಲ್ಲದಿದ್ದ ಅನ್ಯಾನ್ಯ ದಾರಿ ಹಿಡಿದಿರುತ್ತಾರೆ. ಯಶವಂತ ರಾವ್ ಒಬ್ಬರನ್ನುಳಿದರೆ, ಅಂಬೇಡ್ಕರರ ಬಾಕಿ ಮಕ್ಕಳೆಲ್ಲರೂ ತೀರಿಕೊಂಡಿರುತ್ತಾರೆ. ಇಂತಹ ಒಂದು ಅಪೂರ್ವ ಮಾನವೀಯ ಸಂದರ್ಭದಲ್ಲಿ ಭರತಖಂಡದ ಈ ಇಬ್ಬರು ಮಹಾಮಾನವರು ಪರಸ್ಪರ ಭೇಟಿಯಾಗುತ್ತಾರೆ. ಆದರೆ ಗೋಲ್ವಾಲ್ಕರ್ ಮತ್ತು ಅರುಣ್ ಶೌರಿಯಂಥ ಆರೆಸೆಸ್ ಲೇಖಕರು ತಮ್ಮ ಯಾವ ಗ್ರಂಥಗಳಲ್ಲೂ ಈ ಪರಿಯ ಭವ್ಯ ಮಾನವ ಪ್ರಸಂಗವನ್ನು ನಮೂದಿಸುವುದಿಲ್ಲ. ಏಕೆಂದರೆ, ಇಂಥ ಪ್ರಸಂಗಗಳು ಭವ್ಯ ಮಾನವ ಪ್ರಸಂಗಗಳೇ ಆಗಿದ್ದರೂ, ಅಂಥವುಗಳನ್ನು ವಿಕಾರಗೊಳಿಸಿ ಸಂತೋಷಪಡುವ ವಿಘ್ನ ಸಂತೋಷಿ ಸಂಸ್ಕೃತಿಯ ಈ ಮಂದಿ ಪುಸ್ತಕ ರಚನಾ ಕಲೆಯಂಥ ಶಬ್ದಕಲೆಯನ್ನು ಸದಾ ಬಳಸುವುದೇ ಮಾನವ ವಿರೋಧಿ ಮತ್ತು ಜೀವ ವಿರೋಧಿ ಉದ್ದೇಶಗಳಿಗಾಗಿ ಎಂಬುದಕ್ಕೆ ಅರುಣ್ ಶೌರಿಯ ''ವರ್ಷಿಪಿಂಗ್ ಫಾಲ್ಸ್ ಗಾಡ್ಸ್'' ಕೇವಲ ಒಂದು ಸಮಕಾಲೀನ ಸಾಕ್ಷಿ.

ಪ್ರೊ॥ ಮ. ನ. ಜವರಯ್ಯ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ
ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬

## ಕ್ಯಾಂಪಸ್ ದಿನಗಳು

ಕ್ಯಾಂಪಸ್‌ನಲ್ಲಿ ಕಳೆದ
ಆ ದಿನಗಳು ಬರೀ ದಿನಗಳಾಗಿರಲಿಲ್ಲ
ಹರೆಯದ ಭರಾಟೆಯಲ್ಲಿ

ಓದೆಲ್ಲಾ ಬದಿಗೊತ್ತಿ
ಹೆತ್ತವರ ಹೆಗಲ ಮೇಲೆ ಸವಾರಿ ಹೂಡಿ
ಮೆರದಿದ್ದೇ ಮೆರದಿದ್ದು
ಹೇಳವನಂತೆ ಊರೆಲ್ಲಾ
ರಾಮ ಸೀತೆಯರಂತೆ ಗುಡ್ಡ, ಬೆಟ್ಟ ಕಾಡೆಲ್ಲಾ
ಸುತ್ತಾಡಿದ್ದೇ ಸುತ್ತಾಡಿದ್ದು

ಭರವಸೆಯೊಂದಿಗೆ ಎದೆಗೆ ಎದೆ ಹಚ್ಚಿ
ತನ್ಮಯದೊಂದಿಗೆ ತುಟಿ ಕಚ್ಚಿ
ಮಾತಾಡಿದ್ದೆಷ್ಟೋ !
ಮಾತಿನಲ್ಲಿ ಮನೆ ಕಟ್ಟಿಸಿದ್ದೆಷ್ಟೋ !
ಕನಸು ಕಂಡಿದ್ದೆಷ್ಟೋ !

ಬೆಳಕು ಕತ್ತಲೆಯ ಗರ್ಭದೊಳಗೆ ನುಗ್ಗುತ್ತಿದ್ದಂತೆ
ಅದೇ ಹಾಸ್ಟೇಲ್ ಮುಂದುಗಡೆಯ
ಕಾಂಪೌಂಡದ ಮೇಲೆ, ಕೆಳಗೆ
ಪಿಸು ಪಿಸು ಮಾತುಗಳ ಮತ್ತೊಂದು ಸರದಿ
ಯಾರು ಬಂದರೂ ಯಾರು ಹೋದರೂ
ಮೈಮೇಲೆ ಖಬರಿಲ್ಲದ ಪ್ರೀತಿ

ಎಚ್ಚರಿಕೆಯ ಸಿಳ್ಳು
ನಾದದೊಂದಿಗೆ ಹೊರಬೀಳುತ್ತಿದ್ದಂತೆ
ವಾಚ್‌ಮನ್‌ನಿಗೆ
ಮನದಲ್ಲಿಯೇ ಹಿಡಿಶಾಪ ಹಾಕಿ
ಸಾವರಿಸಿಕೊಳ್ಳಬೇಕು ಅರೆಬೆತ್ತಲೆಯ
ಮತ್ತಿನಿಂದ ಹೊರಬಂದು.



ಗಂಟೆ ಎಂಟು ಹೊಡೆಯುವವರೆಗೂ
ಸಿಳ್ಳು ಕೂಗೇ ಕೂಗಬೇಕು
ಉಸಿರು ಒತ್ತಿ ಹಿಡಿಯುತ್ತಿದ್ದಂತೆ
'ಯಾರದು ? ಬರ್ರಿ' ಅಂತ ಧ್ವನಿ ಏರಿಸಿ
ಮತ್ತೊಂದು ಮಾತು ಸೇರಿಸಬೇಕು.

ಗೇಟಿನೊಳಗೆ ಕಾಲಿಡುತ್ತಿದ್ದಂತೆ
ವಾಚ್‌ಮನ್‌ನ ವಕ್ರದೃಷ್ಟಿ
ನನ್ನದು ಯಥಾ ದೈನ್ಯದೃಷ್ಟಿ
ಹೀಗೆ ಮೌನ ಅಪಮಾನದೊಂದಿಗೆ
ಪ್ರೇಮ ಸಾಗುತ್ತಿದ್ದಂತೆಯೇ...
ಏನೆಲ್ಲಾ ಆಗಿ, ಏನೆಲ್ಲಾ ಮಾಗಿ
ಎಲ್ಲೆಂದರಲ್ಲಿ ಹೊತ್ತು ನಿಂತು
ಕೊನೆಗೂ ಆಯ್ತು ಮೂರಾಬಟ್ಟೆ.

**ಎಸ್ಸಾರ್. ರಾಮರಥ**
ಸಂಶೋಧನಾ ವಿದ್ಯಾರ್ಥಿ, ಜಾನಪದ ಅಧ್ಯಯನ ವಿಭಾಗ
ಕ.ವಿ.ವಿ. : ಧಾರವಾಡ

## ಗೆಳೆಯನಿಗೆ

ಬಾಳ ಸಂಜೆಯಲಿ ಹೊರಳಿ ನೋಡಿದಾಗ
ನೀ ಬಂದು - ಕದ ತಟ್ಟಿದ ನೆನಪು
ಹೀಗೆ.. ಗಾಢವಾಗಿ ಕಾಡಬೇಕಾಗಿರಲಿಲ್ಲ.

ತಿಳಿಗೊಲದಿ ಕಲ್ಲು ಬೀಸಿ
ಚಂಚಲ ತೆರೆಗಳನ್ನೆಬ್ಬಿಸಿ
ಅವ್ಯಕ್ತ ನೋವಿನೆಲೆ ಹಾಸಬೇಕಾಗಿರಲಿಲ್ಲ.

ನನ್ನೊಲವ ಸ್ವಪ್ನ ಹಾಸಿಗೆ ಹಾಸಿ
ಕನಸುಗಣ್ಣಿನ ಅರಮನೆಗೆ ನುಸುಳಿ
ಹೀಗೆ - ರಾತ್ರಿಗಳನ್ನು ಕೊಲ್ಲಬೇಕಾಗಿರಲಿಲ್ಲ.

ಯೌವನ ಮೃದು ಭಾವ ಸುಮಗಳ
ಹಾದಿಯಲಿ - ನಿನ್ನ ಪಾದ
ಅಚ್ಚೊತ್ತಿ ದಳ-ದಳ ಹಿಸುಕಬೇಕಾಗಿರಲಿಲ್ಲ.

ಕಾರಿರುಳಿನಲಿ ಮಿಣುಕು ಬಿಂಬ
ಅರಸುವಾಗ -
ನೂರು ಕೊಳ್ಳಿದೀಪಗಳಿಂದ ಉರಿಸಬೇಕಾಗಿರಲಿಲ್ಲ.



ಅಕ್ಷರಗಳ ಕಲಸು -ಮೇಲೋಗರ
ಕವನವಾಗಿಸುವ -
ನನ್ನ ಬಾಳ - ಭಾವಗೀತೆ
ಹೀಗೆ - ಶ್ರುತಿ ತಪ್ಪಿ ಬಿಕ್ಕಳಿಸಬೇಕಾಗಿರಲಿಲ್ಲ !

**ಶೋಭಾ ಪ್ರಮೋದ್**
ಮಹಾಲಕ್ಷ್ಮಿ ಏಜೆನ್ಸೀಸ್
ಮಾಣ್‌ಗಾಂವ್ ಪೋಸ್ಟ್ - ೪೦೨೧೦೪, ಮಹಾರಾಷ್ಟ್ರ

## ಪಾಶ್ಚಿಮಾತ್ಯ ನಾಗರಿಕತೆ

ಗೂಟಗಳ ನೆಲದಲ್ಲಿಳಿಸು
ತಗಡುಗಳ ಬಡಿ :
ಸಿದ್ಧವಾಯಿತೆ ಜೋಪಡಿ

ಒಂದಿಷ್ಟು ಚಿಂದಿ ತಟ್ಟು
ಇಳಿಬಿಟ್ಟರಾಗೆಹೋಯಿತು :
ಕುಟುಂಬದ ಖಾಸಗಿ ಜಗತ್ತು

ಬಿರುಕುಗಳಲ್ಲಿ ಭಾನು ಬಾಗಿಬಂದು
ಜರಮಾಡಿಕೊಳ್ಳುವುದು

ಹನ್ನೆರಡು ತಾಸುಗಳ ಜೀತಕಳೆದು
ಬಂದ ಒಡೆಯನನ್ನು

ಬಂಡೆಗಳ ಒಡೆಯುತ್ತ
ದಿಂಡುಗಳ ಸಾಗಿಸುತ್ತ
ಬಂಡೆಗಳ ಒಡೆಯುತ್ತ



ದಿಂಡುಗಳ ಸಾಗಿಸುತ್ತ
ಹಿತ ಹವೆಯಲ್ಲಿ
ತಂಡಿ ದಿವಸದಲ್ಲಿ
ಬಂಡೆಗಳ ಒಡೆಯುತ್ತ
ದಿಂಡುಗಳ ಸಾಗಿಸುತ್ತ

ಮುಪ್ಪು ಕೂಡುವುದು ಮುಂದಾಗಿ

ಕತ್ತಲಿನ ರಾತ್ರಿಗಳಿಗೆ
ಹಾಸು ಒಂದೆ ಸಾಕವನಿಗೆ
ಕೂಳು ಕಾಣದವನಿಗೆ
ಅಂತಿಮ ನಿದ್ದೆಗೆ
ಆಭಾರಿಯಾದವನಿಗೆ

ಅಗೊಸ್ತೀನೋ ನೇಟ್ಟೊ
(೧೯೨೨-೭೯. ಅಂಗೋಲ)
**ಕನ್ನಡಕ್ಕೆ : ಎಸ್. ಗುರುದತ್**

ಕನ್ನಡದ ಮೊಟ್ಟಮೊದಲ ಕೃತಿ 'ಕವಿರಾಜಮಾರ್ಗ' ಎಂಬುದು ಲಭ್ಯ ಕೃತಿಗಳ ಆಧಾರದ ಮೇಲೆ ಹೇಳಿರುವ ಹಳೆಯ ಮಾತು. ಆದ್ಯ ಕೃತಿ ಎಂಬ ಕಾರಣದ ಜೊತೆಗೆ ಇನ್ನೂ ಹಲವು ದೃಷ್ಟಿಗಳಿಂದ ಇದು ತನ್ನ ಮಹತ್ವವನ್ನು ಸ್ಥಾಪಿಸಿಕೊಂಡಿದೆ. ಪಂಪ ಪೂರ್ವ ಯುಗದ ಕನ್ನಡ ಸಾಹಿತ್ಯದ ಸ್ವರೂಪ, ಕನ್ನಡ ಕಾವ್ಯಮೀಮಾಂಸೆ, ಕನ್ನಡ ಸಂಸ್ಕೃತಿಯ ನಿರ್ವಚನ - ಹೀಗೆ ಹಲವು ಆಯಾಮಗಳನ್ನು ಇದು ಪಡೆದುಕೊಂಡಿದೆ. ಆದ್ದರಿಂದ ಇಲ್ಲಿನ ಚರ್ಚೆ ಪ್ರಸ್ತುತ ಕೃತಿಯನ್ನು ಕೇವಲ ಸಾಹಿತ್ಯಕ ಕೃತಿಯನ್ನಾಗಿ ಮಾತ್ರ ಗ್ರಹಿಸದೆ ಕನ್ನಡ ಕಾವ್ಯಮೀಮಾಂಸೆ ಮತ್ತು ಸಾಂಸ್ಕೃತಿಕ ಪಠ್ಯವನ್ನಾಗಿ ಗ್ರಹಿಸುವುದೇ ಆಗಿದೆ.

'ಕವಿರಾಜಮಾರ್ಗ'ದ ಹುಟ್ಟಿಗೆ ಸಾಹಿತ್ಯದಷ್ಟೇ ಸಾಹಿತ್ಯೇತರ ನೆಲೆಗಳೂ ಮುಖ್ಯ ಪ್ರೇರಣೆಗಳಾಗಿವೆ. ಇದು ರಚನೆಯಾದ ಕಾಲದಲ್ಲಿ ದೇಶೀ (ಸ್ಥಳೀಯ) ಪ್ರಭುತ್ವಗಳು ದಕ್ಷಿಣ ಭಾರತದ ರಾಜಕೀಯ ಇತಿಹಾಸದಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸತೊಡಗಿದವು.

*'ಕವಿರಾಜಮಾರ್ಗ'ದಲ್ಲಿ ಕನ್ನಡ ಭಾಷೆಯನ್ನು ಸಾಹಿತ್ಯಕ್ಕಾಗಿ ಸಜ್ಜುಗೊಳಿಸುವ ಕ್ರಿಯೆ ಇದೆ. ಈ ನೆಲೆಯಲ್ಲಿ ಪ್ರಮಾಣೀಕರಣದ ಕನ್ನಡ ಭಾಷೆಯನ್ನು ರೂಪಿಸುವ ಕ್ರಿಯೆ ನಿರತ ಮತ್ತು ನಿಯತವಾಗಿದೆ. ಇಂತಹ ಪ್ರಕ್ರಿಯೆಯಲ್ಲಿ ಪ್ರಮಾಣಬದ್ಧ ಭಾಷೆಯನ್ನು ರೂಪಿಸಿದ್ದು ಸತ್ಯದ ಒಂದು ಮುಖವಾದರೆ, ಈ ಪ್ರಮಾಣೀಕರಣದ ಭಾಷಾ ನಿರ್ಮಿತಿಯು ಸ್ಥಳೀಯ ಭಾಷಾ ರೂಪಗಳನ್ನು ಅವಜ್ಞೆಗೆ ಈಡುಮಾಡಿದ್ದು ಅಥವಾ ಅವುಗಳನ್ನು ಕೊಂದಂತೆ ಆಗಿದ್ದು ಸತ್ಯದ ಇನ್ನೊಂದು ಮುಖವಾಗುತ್ತದೆ. ಕವಿರಾಜಮಾರ್ಗಕಾರ ಹೀಗೆ ಮಾಡಿದ್ದು ತಪ್ಪು ಎನ್ನುವುದಾದರೆ, ನಾವು ಇಂದು ಕರ್ನಾಟಕಕ್ಕೆ ಒಂದೇ ಕನ್ನಡವನ್ನು ಇಚ್ಛಿಸುವುದು ಸಹ ತಪ್ಪಾಗುತ್ತದೆ. ಅಂತಹ ಪ್ರಮಾಣಬದ್ಧ ಭಾಷೆಯು ಬಹು ಸಂಸ್ಕೃತಿಗಳ ಕನ್ನಡ ಭಾಷಿಕ ಸಂಸ್ಕೃತಿಯ ಪ್ರಜಾಸತ್ತಾತ್ಮಕ ನೆಲೆಗಳಿಗೆ ತನ್ನ ಅಗೌರವವನ್ನು ಸೂಚಿಸಿದಂತಾಗುತ್ತದೆ.*

# ಕವಿರಾಜಮಾರ್ಗ

## ಕನ್ನಡ ಸಂಸ್ಕೃತಿ ಮತ್ತು ಕಾವ್ಯಮೀಮಾಂಸೆಯ ಗ್ರಹಿಕೆಗಳು

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**

ಅದರಲ್ಲಿ ಕನ್ನಡದ ಪ್ರಭುತ್ವಗಳು ಕನ್ನಡ ಭಾಷೆ- ಸಂಸ್ಕೃತಿಯೊಂದಿಗೆ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳತೊಡಗಿದ್ದವು. ಆದ್ದರಿಂದಲೇ ಈ ಕಾಲದಲ್ಲಿ ಕರ್ನಾಟಕದ ಬಹುಭಾಗವನ್ನು ಆಳಿದ ರಾಷ್ಟ್ರಕೂಟರು ಕನ್ನಡದಲ್ಲಿ ಶಾಸನಗಳನ್ನು ಕೊರೆಯಿಸಿದ್ದೇ ಅಲ್ಲದೆ ಕನ್ನಡ ಸಾಹಿತ್ಯಕ್ಕೆ ಉದಾರವಾದ ಪ್ರೋತ್ಸಾಹವನ್ನು ಸಹ ನೀಡಿದುದು. ಈ ನಿಟ್ಟಿನಲ್ಲಿ ಇವರು ತಮ್ಮ ಉತ್ತರಕಾಲೀನ ಶಾಸನಗಳಲ್ಲಿ, ಅದರಲ್ಲೂ ಸಂಸ್ಕೃತದ ಶಾಸನಗಳಲ್ಲಿ ಸಹ, ಕನ್ನಡದಲ್ಲಿಯೇ ಸಹಿಯನ್ನು ಮಾಡಿದ್ದಾರೆ.

ಇಂತಹ ನೆಲೆಯಲ್ಲಿ ಕನ್ನಡ ಭಾಷೆ - ಸಂಸ್ಕೃತಿ - ಸಾಹಿತ್ಯಗಳು ಅಖಂಡವಾಗಿ ಬೆರೆಯುತ್ತಾ, ಪ್ರಭುತ್ವ ತನ್ನೊಂದಿಗೆ ನಿಯತವಾದ ಸಂಬಂಧವನ್ನಿರಿಸಿಕೊಳ್ಳುವುದು ಅನಿವಾರ್ಯ ಎಂಬ ಸ್ಥಿತಿಯನ್ನು ನಿರ್ಮಾಣ ಮಾಡಲಾಯಿತು. ಆದ್ದರಿಂದ ಇಲ್ಲಿಯವರೆಗೂ ಸಂಸ್ಕೃತ ಪ್ರಾಕೃತಗಳನ್ನೇ ನೆಚ್ಚಿಕೊಂಡಿದ್ದ ಈ ನೆಲದ ವೈದಿಕರು ಮತ್ತು ಜೈನರು ಕನ್ನಡ ಸಾಹಿತ್ಯ ರಚನೆಗೆ ತಮ್ಮ ನಿಷ್ಠೆಯನ್ನು ವರ್ಗಾಯಿಸಿಕೊಂಡರು. ಅಲ್ಲದೆ ಇದು ಸಂಸ್ಕೃತ ಸಾಹಿತ್ಯದ ಇಳಿಗಾಲ ಎಂಬುದೂ ಗಮನಾರ್ಹ ವಿಚಾರ. ದೊಡ್ಡ ಪ್ರಭುತ್ವಗಳು ವಿಘಟನೆಗೆ ಒಳಗಾದದ್ದು, ಸ್ಥಳೀಯ ಪ್ರಭುತ್ವಗಳು ಭಾರತದ ರಾಜಕೀಯ ಇತಿಹಾಸದ ಪ್ರಧಾನ ಧಾರೆಗೆ ಏರತೊಡಗಿದ್ದು ಸಂಸ್ಕೃತದ ಇಳಿಗಾಲದೊಂದಿಗೆ ಸೂಕ್ಷ್ಮ ಸಂಬಂಧವನ್ನು ಇರಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಅಪೇಕ್ಷಿತ ನೆಲೆಯಲ್ಲಿ ಪರಿಣಾಮಕಾರಿಯಾಗಿ ಕಟ್ಟುವ ನಿಟ್ಟಿನಲ್ಲಿ 'ಕವಿರಾಜಮಾರ್ಗ'ವು ಮೂಡಿಬರುತ್ತದೆ. ಆದ್ದರಿಂದಲೇ ಇದು ಕೇವಲ ಸಾಹಿತ್ಯ ಕೃತಿಯಾಗದೆ, ಕನ್ನಡ ಸಂಸ್ಕೃತಿಯನ್ನು ನಿರ್ವಚಿಸುವ ಸಾಂಸ್ಕೃತಿಕ ಪಠ್ಯವಾಗಿ ಮತ್ತು ಕನ್ನಡ ಕಾವ್ಯವನ್ನು ವಿವರಿಸಲು ಕನ್ನಡ ಕಾವ್ಯಮೀಮಾಂಸೆಯ ಕೃತಿಯಾಗಿ ನಮ್ಮ ಗಮನವನ್ನು ಸೆಳೆಯುವುದು. ಈ ಹಿನ್ನೆಲೆಯಲ್ಲಿ ಕೃತಿಯ ಮೊದಲ ಪರಿಚ್ಛೇದದ ಪೂರ್ವಾರ್ಧದಲ್ಲಿ ಬರುವ ಕನ್ನಡ ಪರ ವಿಚಾರಗಳನ್ನು ಗ್ರಹಿಸಬೇಕು.

'ಕವಿರಾಜಮಾರ್ಗ'ವು ಲಭ್ಯ ಕನ್ನಡ ಕೃತಿಗಳನ್ನು ಆಧರಿಸಿದ ಮೊದಲ ಕೃತಿ ಆಗುವಂತೆಯೇ ಅಲಭ್ಯ ಕೃತಿಗಳನ್ನು ಆಧರಿಸಿದ ಮೊದಲ ಶಾಸ್ತ್ರ ಕೃತಿಯೂ ಆಗುತ್ತದೆ. ಇದಕ್ಕೆ ಕೆಲವು ಪ್ರಮಾಣಗಳು ಕೃತಿಯ ಒಳಗಡೆಯೇ ಸಿಗುತ್ತವೆ. ಉದಾಹರಣೆಗೆ, ಇದರಲ್ಲಿ ಕನ್ನಡದ ಗದ್ಯ ಮತ್ತು ಪದ್ಯ ಕಾವ್ಯ ಕರ್ತೃಗಳ ಪ್ರಸ್ತಾಪ ಇದೆಯೇ ವಿನಃ ಇತರೆ ಪದ್ಯಗಳನ್ನೂ ಒಳಗೊಂಡಂತೆ ಎಲ್ಲಿಯೂ ಕನ್ನಡದ ಆಲಂಕಾರಿಕರ ಪ್ರಸ್ತಾಪ ಇಲ್ಲ. ಆದ್ದರಿಂದ ಕನ್ನಡ ಕಾವ್ಯಮೀಮಾಂಸೆಗೆ ಅಧಿಕೃತ ಆದ್ಯ ಕೃತಿಯಾಗುವ ಇದು ಏಕಕಾಲಕ್ಕೆ ಕನ್ನಡದ ವ್ಯಾಕರಣ ಮತ್ತು ಛಂದಸ್ಸಿನ ಕ್ಷಿತಿಜವನ್ನು ವಿಸ್ತರಿಸುವ ಕೃತಿಯೂ ಆಗುತ್ತದೆ. ಈ ಮೂಲಕವಾಗಿ ತಾನು ಕನ್ನಡದ ಮೊದಲ ಶಾಸ್ತ್ರ ಕೃತಿ ಎಂಬುದು ಇದಕ್ಕಿರುವ ಚಾರಿತ್ರಿಕ ಮಹತ್ವವನ್ನು ಸಾಬೀತು ಮಾಡುತ್ತದೆ.

ಪಂಪ ಪೂರ್ವ ಕನ್ನಡ ಸಾಹಿತ್ಯ ಕತ್ತಲಿನಲ್ಲಿಯೇ ಉಳಿದಿದೆ. ಅದಕ್ಕೆ ಸ್ವಲ್ಪಮಟ್ಟಿಗೆ ಬೆಳಕನ್ನು ಚೆಲ್ಲುವುದು 'ಕವಿರಾಜಮಾರ್ಗ'ದ ಹಿರಿಮೆ. ಈ ನಿಟ್ಟಿನಲ್ಲಿ (೧-೨೯, ೩೨) ಅಂದಿನ ಕನ್ನಡ ಗದ್ಯ, ಪದ್ಯ ಕವಿಗಳನ್ನು, ಕೆಲವು ಅಜ್ಞಾತ ಕಾವ್ಯದ ಪದ್ಯಭಾಗಗಳನ್ನು, ಚತ್ತಾಣ, ಬೆದಂಡೆಯಂತಹ ಕನ್ನಡದ ದೇಶೀ ಮಟ್ಟುಗಳನ್ನು ಹಾಗೂ ಇವುಗಳ ಲಕ್ಷಣ ಮತ್ತು ಲಕ್ಷ್ಯಗಳನ್ನು ನೀಡುತ್ತದೆ.

ಹೀಗೆ ಪ್ರಾಚೀನ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಪ್ರಸ್ತುತ ಕೃತಿಗಿರುವ ವಿಶೇಷ ಮಹತ್ವ ಸಹಜವಾಗಿಯೇ ವೇದ್ಯಗೊಳ್ಳುತ್ತದೆ.

'ಕವಿರಾಜಮಾರ್ಗ'ವು ಒಟ್ಟು ಸ್ವರೂಪದಲ್ಲಿ ಶಾಸ್ತ್ರವೂ ಕಾವ್ಯವೂ ಆಗಿದೆ. ಆದರೆ ಇದರ ಆಶಯ ಅಲಂಕಾರಗಳ ನಿರ್ವಚನ. ಇದು ಕೃತಿಯಾಗುವಾಗ ಅಲಂಕಾರ ಶಾಸ್ತ್ರದ ವಿವಿಧ ಘಟಕಗಳನ್ನು ಕುರಿತ ಲಕ್ಷಣವನ್ನು ಹೇಳುತ್ತಲೇ ಸ್ವಂತ ಪ್ರತಿಭಾ ಬಲದಿಂದ ಅವುಗಳಿಗೆ ಲಕ್ಷ್ಯಗಳನ್ನು ಸೋದಾಹರಣವಾಗಿ ಕೊಡುತ್ತದೆ. ಇಂತಹ ಎಡೆಗಳಲ್ಲಿ ಕಾವ್ಯಾತ್ಮಕತೆ ಮಿಂಚುತ್ತದೆ. ಆದ್ದರಿಂದ ಇದು ಕನ್ನಡದ ಮೊದಲ ಕಾವ್ಯ ಎಂದರೆ, ಇದರ ಅರ್ಧ ಸತ್ಯವನ್ನು ಒಪ್ಪಿದಂತೆಯೇ ಆಗುತ್ತದೆ.

'ಕವಿರಾಜಮಾರ್ಗ'ವು ೧-೩೮, ೩೯, ೪೦ರಲ್ಲಿ ಕನ್ನಡಿಗರ ಗುಣಸ್ವಭಾವ, ಕಾವ್ಯ ಸಹೃದಯತೆಗಳ ಬಗ್ಗೆ ಮಾತಾಡುತ್ತದೆ. ಇಲ್ಲಿ ವಾಸ್ತವವು ಉತ್ಪ್ರೇಕ್ಷೆಯ ನೆಲೆಯಲ್ಲಿ ಸಾಧಿತಗೊಳ್ಳುತ್ತದೆ. ಈ ಪ್ರಕ್ರಿಯೆಯಲ್ಲಿ ಕೃತಿಕಾರನ ನಾಡಭಿಮಾನವು ವ್ಯಕ್ತಗೊಳ್ಳುತ್ತದೆ. ಇಷ್ಟಾದರೂ ಈ ಕೃತಿ ಮುಖ್ಯವಾಗುವುದು ಇನ್ನೂ ಕೆಲವು ಗಂಭೀರ ಕಾರಣಗಳಿಗಾಗಿ ಎಂಬುದನ್ನು ಚರ್ಚೆಯ ಈ ಮುಂದಿನ ಭಾಗದಲ್ಲಿ ನೋಡಬೇಕಾಗಿದೆ.

ಕವಿರಾಜಮಾರ್ಗ'ದಲ್ಲಿ ಕನ್ನಡ ಭಾಷೆಯನ್ನು ಸಾಹಿತ್ಯಕ್ಕಾಗಿ ಸಜ್ಜುಗೊಳಿಸುವ ಕ್ರಿಯೆ ಇದೆ. ಈ ನೆಲೆಯಲ್ಲಿ ಪ್ರಮಾಣೀಕರಣದ ಕನ್ನಡ ಭಾಷೆಯನ್ನು ರೂಪಿಸುವ ಕ್ರಿಯೆ ನಿರತ ಮತ್ತು ನಿಯತವಾಗಿದೆ. ಇಂತಹ ಪ್ರಕ್ರಿಯೆಯಲ್ಲಿ ಪ್ರಮಾಣಬದ್ಧ ಭಾಷೆಯನ್ನು ರೂಪಿಸಿದ್ದು ಸತ್ಯದ ಒಂದು ಮುಖವಾದರೆ, ಈ ಪ್ರಮಾಣೀಕರಣದ ಭಾಷಾ ನಿರ್ಮಿತಿಯು ಸ್ಥಳೀಯ ಭಾಷಾ ರೂಪಗಳನ್ನು ಅವಜ್ಞೆಗೆ ಈಡುಮಾಡಿದ್ದು ಅಥವಾ ಅವುಗಳನ್ನು ಕೊಂದಂತೆ ಆಗಿದ್ದು ಸತ್ಯದ ಇನ್ನೊಂದು ಮುಖವಾಗುತ್ತದೆ. ಕವಿರಾಜಮಾರ್ಗಕಾರ ಹೀಗೆ ಮಾಡಿದ್ದು ತಪ್ಪು ಎನ್ನುವುದಾದರೆ, ನಾವು ಇಂದು ಕರ್ನಾಟಕಕ್ಕೆ ಒಂದೇ ಕನ್ನಡವನ್ನು ಇಚ್ಛಿಸುವುದು ಸಹ ತಪ್ಪಾಗುತ್ತದೆ. ಅಂತಹ ಪ್ರಮಾಣಬದ್ಧ ಭಾಷೆಯು ಬಹು ಸಂಸ್ಕೃತಿಗಳ ಕನ್ನಡ ಭಾಷಿಕ ಸಂಸ್ಕೃತಿಯ ಪ್ರಜಾಸತ್ತಾತ್ಮಕ ನೆಲೆಗಳಿಗೆ ತನ್ನ ಅಗೌರವವನ್ನು ಸೂಚಿಸಿದಂತಾಗುತ್ತದೆ.

ಆದರೂ ಪ್ರಮಾಣೀಕರಣದ ಭಾಷೆಯಿಂದ ಸಂಕೀರ್ಣ ಕಾವ್ಯ ರಚನೆ ಸಾಧ್ಯಗೊಳ್ಳುವುದರಿಂದ ಒಂದು ಹಂತದಲ್ಲಿ ಅದು ಸ್ವೀಕಾರಾರ್ಹವೇ ಆಗುತ್ತದೆ. ಇದನ್ನು

ಒಪ್ಪುತ್ತಾ, ಕವಿರಾಜಮಾರ್ಗಕಾರನು ಕವಿಗಳಿಗೆ, ಅದರಲ್ಲೂ ಕವಿರಾಜರಿಗೆ, ಪ್ರಮಾಣೀಕರಣದ ಭಾಷೆಯನ್ನು ರೂಪಿಸಿದ ಮಾರ್ಗವೇ ಒಟ್ಟಾರೆ 'ಕವಿರಾಜಮಾರ್ಗ' ಎನಿಸಿಬಿಡುತ್ತದೆ. ಅಲ್ಲದೆ ಈತನ ದೃಷ್ಟಿಯಲ್ಲಿ 'ದೂಷ್ಯವಲ್ಲದ್ದೇ ಮಾರ್ಗ'. ಆದ್ದರಿಂದ ಮೊದಲಿಗೆ ಕಾವ್ಯ-ಭಾಷೆಯ ದೋಷಗಳನ್ನು ಸೋದಾಹರಣವಾಗಿ ಪ್ರಸ್ತಾಪಿಸುತ್ತಾ ಅವುಗಳಿಗೆ ಅದೋಷದ ಮಾದರಿಗಳನ್ನು ಸಹ ಸ್ವತಃ ನೀಡುತ್ತಾನೆ.

ಹೀಗೆ ಕವಿಗಳಿಗೆ ರಾಜಮಾರ್ಗವೊಂದನ್ನು ಈತ ನಿರ್ಮಿಸುತ್ತಾನೆ. ಈ ಹಿನ್ನೆಲೆಯಲ್ಲಿ 'ಕವಿರಾಜಮಾರ್ಗ' ಎಂಬ ಶೀರ್ಷಿಕೆ ಇದಕ್ಕೆ ಸೂಕ್ತವಾಗಿ ಒಪ್ಪುತ್ತದೆ.

ಪ್ರಭುತ್ವ-ಸಾಹಿತ್ಯಗಳ ಸಂಬಂಧ ನಿಯತವಾದುದು. ಇದು ಜಾಗತಿಕ ನೆಲೆಯಲ್ಲಿಯೂ ಸತ್ಯ. ಆದ್ದರಿಂದಲೇ ಬ್ರಿಟಿಷ್ ಪ್ರಭುತ್ವದೊಂದಿಗೆ ಗುರುತಿಸಿಕೊಂಡ ಇಂಗ್ಲಿಷ್, ಆ ಪ್ರಭುತ್ವದ ವಿಸ್ತಾರದಷ್ಟೇ ತಾನೂ ಹಿಗ್ಗಿತು. ಈ ಹಿನ್ನೆಲೆಯಲ್ಲಿ 'ಕವಿರಾಜಮಾರ್ಗ'ದ ನಿರ್ಮಿತಿಯಲ್ಲಿ ಶ್ರೀ ವಿಜಯ ಮತ್ತು ನೃಪತುಂಗರ ಸಂಬಂಧವೂ ಅಂಥಹುದೇ ಆಗಿದೆ. ಇದು ವೈಯಕ್ತಿಕ ಸಂಬಂಧಕ್ಕಷ್ಟೇ ಸೀಮಿತವಲ್ಲ; ಅದರಾಚೆಗೆ ಸಾಹಿತ್ಯ ಮತ್ತು ಪ್ರಭುತ್ವ : ಇವುಗಳನ್ನು ಪ್ರತಿನಿಧಿಸಿರುವ ಎರಡು ಭಿನ್ನ ಪಾತಳಿಗಳ ಸಂಬಂಧವಾಗಿಯೂ ಬೆಳೆಯುತ್ತದೆ. ಆದ್ದರಿಂದಲೇ ಕೃತಿಕಾರ ತನ್ನ ಪ್ರಭುವಿನ ಪ್ರೋತ್ಸಾಹವನ್ನು ಈ ರೀತಿ ನೆನೆಯುವುದು : ''ಇದು ಪರಮ ಶ್ರೀ ನೃಪತುಂಗ ದೇವಾನುಮತಮಪ್ಪ ಕವಿರಾಜಮಾರ್ಗದೊಳ್.''

'ಕವಿರಾಜಮಾರ್ಗ'ದ ಮೇಲೆ ಸೀಮಿತ ದೃಷ್ಟಿಯ ಆರೋಪ ಅಥವಾ ಹೇಳಿಕೆಯೊಂದು ಇದೆ. ಅದೆಂದರೆ, ಇದು ದಂಡಿಯ ಕಾವ್ಯಾದರ್ಶದ ನೆರಳು ಎಂಬುದು. ಆದರೆ ಈ ಕೃತಿಯನ್ನು ಸೂಕ್ಷ್ಮವಾಗಿ ಪರ್ಯಾಲೋಚಿಸಿದ ವಿದ್ವಾಂಸರು ಭಿನ್ನ ತೀರ್ಮಾನಕ್ಕೆ ಬರುತ್ತಾರೆ. ಅದರ ಪ್ರಕಾರ ಈ ಕೃತಿ ದಂಡಿ, ಭಾಮಹರನ್ನು ಅನುಸರಿಸಿಯೂ ಅರ್ಥಕ್ಕೆ ಮಿಗಿಲಾಗಿ ಕನ್ನಡ ಸಂಬಂಧಿಯಾದ ಸ್ವತಂತ್ರ ವಿಚಾರಗಳಿಂದ ಕೂಡಿದ ಕೃತಿ ಇದಾಗಿದೆ ಎಂಬುದು. ಈ ಹಿನ್ನೆಲೆಯಲ್ಲಿ ಸಂಸ್ಕೃತ ಕಾವ್ಯಮೀಮಾಂಸೆಗಿಂತ ಭಿನ್ನವಾದ ಕನ್ನಡ ಕಾವ್ಯಮೀಮಾಂಸೆಯ ಆಕರ ಕೃತಿಯಾಗಿ ಇದು ನಿಲ್ಲುತ್ತದೆ. ಉದಾಹರಣೆಗೆ, ಸಂಸ್ಕೃತದಲ್ಲಿ 'ಯತಿ' ನಿಯತಸ್ಥಾನವನ್ನು ಮೀರಿದರೆ ದೋಷವಾಗುತ್ತದೆ. ಆದರೆ ಅರ್ಥಕ್ಕನುಗುಣವಾದ ನಿಲುಗಡೆಯ ತಾಣವಾಗಿ ಇದು ಕನ್ನಡದಲ್ಲಿ ಬರುತ್ತದೆ. ಇಂತಹ ಮಾತುಗಳು ಕನ್ನಡ ಕಾವ್ಯದ ಜಾಯಮಾನವನ್ನು ಅನುಲಕ್ಷಿಸಿ ಆಡಿದ್ದಾಗಿದೆ. ಇಂತಹ ಅನೇಕ ವಿವರಗಳಿರುವ ಈ ಕೃತಿಯ ಒಟ್ಟು ಪದ್ಯಗಳ ಸಂಖ್ಯೆ ೫೩೬. ಅದರಲ್ಲಿ ೨೩೦ ಪದ್ಯಗಳು ದಂಡಿಗೆ ಋಣಿಯಾಗಿದ್ದರೆ, ೪೫ ಪದ್ಯಗಳು ಭಾಮಹನಿಗೆ ಋಣಿಯಾಗಿವೆ. ಉಳಿದ ಸುಮಾರು ೨೬೧ ಪದ್ಯಗಳು ಕನ್ನಡಕ್ಕೆ ಸಂಬಂಧಿಸಿದ ವಿಚಾರಗಳನ್ನು ಒಳಗೊಂಡವುಗಳಾಗಿವೆ ಮತ್ತು ಇತರೆ ಋಣಿಪದ್ಯಗಳು ಸಹ ನೇರ ಅನುವಾದಗಳಲ್ಲ; ರೂಪಾಂತರಗಳು.

ಆದ್ದರಿಂದ 'ಕವಿರಾಜಮಾರ್ಗ' ಎಂಬುದು ದಂಡಿ, ಭಾಮಹರಿಗೆ ಭಾಗಶಃ ಋಣಿಯಾಗಿದ್ದರೂ ಸ್ವತಂತ್ರ ವಿಚಾರಗಳ ದೃಷ್ಟಿಯಿಂದ ಕನ್ನಡ ಕಾವ್ಯಮೀಮಾಂಸೆಯ ಹಾಗೂ ಕನ್ನಡದ ಸಂಸ್ಕೃತಿ ಪಠ್ಯವಾಗಿ ಗಮನವನ್ನು ಸೆಳೆಯುತ್ತದೆ ಎಂಬುದನ್ನು ಇಲ್ಲಿ ಗಮನಿಸಬೇಕಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯದ ವೈಶಿಷ್ಟ್ಯವೇ 'ಚಂಪೂ'ವಿನಲ್ಲಿದೆ ಮತ್ತು ಸಂಸ್ಕೃತದ್ದು ಗದ್ಯ ಪ್ರಕಾರದಲ್ಲಿದೆ ಎಂಬುದಾಗಿ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಗಳ ಪ್ರತ್ಯೇಕ ಅನನ್ಯತೆಗಳನ್ನು (೧-೧೬, ೨೬) ಕವಿರಾಜಮಾರ್ಗಕಾರ ಗುರುತಿಸುತ್ತಾನೆ. ಇದರಿಂದ ಚಂಪೂ ಸಂಸ್ಕೃತದಲ್ಲಿ ಇದ್ದಿತಾದರೂ ಅದು ಕನ್ನಡದ ಅನನ್ಯ ಅಭಿವ್ಯಕ್ತಿ ಪ್ರಕಾರ ಎಂಬುದನ್ನು ಈತ ಶ್ರುತಪಡಿಸುತ್ತಾನೆ. ಆದ್ದರಿಂದ ಇದು ಕನ್ನಡಕ್ಕೆ ಸಂಸ್ಕೃತದಿಂದ ಬಂದದ್ದಲ್ಲ; ಕನ್ನಡದಲ್ಲಿಯೇ ಹುಟ್ಟಿರಬಹುದಾದ ಮತ್ತು ಕನ್ನಡಕ್ಕೆ ವಿಶಿಷ್ಟವಾದ ಭಾಷಾ ಆಕೃತಿ ಎಂಬುದು ಗಮನಾರ್ಹವಾಗುತ್ತದೆ. ಇಲ್ಲಿಯೇ ಪಂಪ ಪೂರ್ವ ಪ್ರಕಾರಗಳಾದ ಬೆದಂಡೆ, ಚತ್ತಾಣಗಳೂ ನೆನಪಾಗುವುದು.

'ಕವಿರಾಜಮಾರ್ಗ'ವು ತನ್ನ ಮೂಲ ನೆಲೆಯಲ್ಲಿ ಒಂದು ಶಾಸ್ತ್ರ ಕೃತಿ. ಹಾಗಿದ್ದಾಗಲೂ ತನ್ನ ಮೊದಲ ಪರಿಚ್ಛೇದದ ಪೂರ್ವಾರ್ಧದಲ್ಲಿ ಕನ್ನಡ ಪ್ರದೇಶ, ಸಂಸ್ಕೃತಿ, ಕನ್ನಡಿಗರ ಗುಣ ಸ್ವಭಾವ ಇತ್ಯಾದಿ ವಿಚಾರಗಳನ್ನು ದಾಖಲಿಸುತ್ತದೆ. ಇಲ್ಲಿ ಅಭಿಮಾನವಿದೆ, ಉತ್ಪ್ರೇಕ್ಷೆಯಿದೆ. ಎಲ್ಲಕ್ಕೂ ಮೂಲದಲ್ಲಿ ಕನ್ನಡಪರವಾದ ಕಾಳಜಿ ಇದೆ. ಇದೇ ಈ ಕೃತಿ ರಚನೆಯ ಪ್ರೇರಣೆಯೂ ಆಗಿದೆ. ಈ ಚರ್ಚೆಯನ್ನು ಸ್ವಲ್ಪಮಟ್ಟಿಗೆ ದೀರ್ಘವಾಗಿಯೇ (೧-೩೬, ೩೭, ೩೮, ೩೯, ೪೦) ಕವಿರಾಜಮಾರ್ಗಕಾರ ತರುತ್ತಾನೆ. ಈ ನಿಟ್ಟಿನಲ್ಲಿ ಇದನ್ನು ಕೇವಲ ಸಾಹಿತ್ಯ ಕೃತಿಯನ್ನಾಗಿ ಪರಿಭಾವಿಸಿಲ್ಲ; ಸಂಸ್ಕೃತಿ ಪಠ್ಯವನ್ನಾಗಿಯೂ ಪರಿಭಾವಿಸಿದಂತಿದೆ. ಆದ್ದರಿಂದಲೇ ಈ ಮಾತುಗಳ ಮೂಲಕ ಅಂದಿನ ಕನ್ನಡ ಸಂಸ್ಕೃತಿ-ಸಾಹಿತ್ಯವನ್ನು ಪುನರ್ರೂಪಿಸುವ ಕೃತಿಕಾರರಿಗೆ ಸೂಕ್ತ ನಿರ್ದೇಶನವನ್ನು ನೀಡುವ ಸಾಂಸ್ಕೃತಿಕ ಸಾಹಿತ್ಯಕ ಜವಾಬ್ದಾರಿಯನ್ನು ತಾನು ಹೊತ್ತಂತೆ ಕಾಣುತ್ತದೆ. ಈ ಕಾಳಜಿ ೧-೪೧ರಲ್ಲಿಯೂ ವೇದ್ಯಗೊಳ್ಳುತ್ತದೆ.

ಸಂಸ್ಕೃತ, ಪ್ರಾಕೃತದಲ್ಲಿ ಈ ಕಾಲಕ್ಕಾಗಲೇ ಶ್ರೀಮಂತವಾದ ಲಕ್ಷ್ಯ, ಲಕ್ಷಣ ಕೃತಿಗಳಿವೆ. ಆದರೆ ಕನ್ನಡದಲ್ಲಿ ಲಕ್ಷ್ಯ ಕೃತಿಗಳು ಮಾತ್ರವಿದ್ದು, ಲಕ್ಷಣ ಕೃತಿಗಳಿಗಾಗಿ ಸಂಸ್ಕೃತದ ಮೊರೆ ಹೋಗುವ ಪರಿಪಾಠವಿದೆ. ಈ ಕೊರತೆಯನ್ನು ನೀಗಿಸಬೇಕೆನ್ನುವ ಪ್ರೇರಣೆಯೇ ಈ ಕೃತಿಗೆ ಮತ್ತೊಂದು ಮೂಲವಾಗುತ್ತದೆ (೧-೪೧).

'ಕವಿರಾಜಮಾರ್ಗ'ವು ಸಾಹಿತ್ಯಕವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿಯೂ ಮುಖ್ಯ ಎನ್ನುವುದಕ್ಕೆ ಅದರ ಆಂತರಿಕ ಪ್ರಮಾಣಗಳು ಸಾಕ್ಷ್ಯ ನುಡಿಯುತ್ತವೆ. ಕೃತಿಕಾರ ಇದನ್ನು ದಂಡಿಯಂತೆ 'ಕಾವ್ಯಾದರ್ಶ' ಎನ್ನದೆ, ಭಾಮಹನಂತೆ 'ಕಾವ್ಯಾಲಂಕಾರ' ಎನ್ನದೆ ಅಥವಾ ನಾಗವರ್ಮನಂತೆ 'ಕಾವ್ಯಾವಲೋಕನ' ಎಂಬ ಸಾಹಿತ್ಯಕ ಉಪಾಧಿಯನ್ನು ಬಳಸದೆ, 'ಕವಿರಾಜಮಾರ್ಗ' ಎಂಬ ಸಾಹಿತ್ಯಕತೆಯನ್ನೂ ಒಳಗೊಂಡ ಸಾಂಸ್ಕೃತಿಕ ಶಿರೋನಾಮೆಯನ್ನು ಬಳಸಿರುವುದು ಮೇಲಿನ ತತ್ವಕ್ಕೆ ಪೋಷಕವಾಗುತ್ತದೆ.

ಒಟ್ಟಾರೆ, ವಿಘಟನೆಗೆ ಒಳಗಾಗುತ್ತಿದ್ದ ದೊಡ್ಡ ಪ್ರಭುತ್ವಗಳು, ಹೊಸದಾಗಿ ತಲೆ ಎತ್ತುತ್ತಾ ಸಾಂಸ್ಕೃತಿಕ ಸಂದರ್ಭದಲ್ಲಿ ಮುಖ್ಯ ಪಾತ್ರವನ್ನು ನಿರ್ವಹಿಸತೊಡಗಿದ ದೇಶೀ ಮತ್ತು ಸ್ಥಳೀಯ ಪ್ರಭುತ್ವಗಳು ಅನಿವಾರ್ಯವಾಗಿ ಸ್ಥಳೀಯ ಸಂಸ್ಕೃತಿ-ಭಾಷೆಗಳೊಂದಿಗೆ ತಮ್ಮ ಅನನ್ಯತೆಗಳನ್ನು ಗುರುತಿಸಿಕೊಳ್ಳಬೇಕಾದ ಜರೂರು ಬಹಳವಾಗಿತ್ತು. ಆದ್ದರಿಂದ ಪ್ರಭುತ್ವದ ಪ್ರತೀಕವಾದ ನೃಪತುಂಗ ಸಾಹಿತ್ಯಕ ನೆಲೆಯ ಪ್ರತೀಕವಾದ ಶ್ರೀವಿಜಯನೊಂದಿಗೆ ಈ ಥರದ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕಾಗಿತ್ತು. ಇದು ಸಿಂಹಾಸನದ ಭದ್ರತೆಗೂ ಅವಶ್ಯಕವಾಗಿದ್ದಿತು. ಇಂತಹ ಸಾಂಸ್ಕೃತಿಕ ಸಂದರ್ಭದಲ್ಲಿ ಗುಣಾತ್ಮಕವಾದ ಸಾಹಿತ್ಯವನ್ನು



ಕಟ್ಟುವುದಕ್ಕಾಗಿ ಪ್ರಮಾಣಬದ್ಧವಾದ ಭಾಷೆಯನ್ನು ರೂಪಿಸುವುದು ಕೃತಿಕಾರನಿಗೆ ಸಹ ಅನಿವಾರ್ಯವಾಯಿತು. ಆದ್ದರಿಂದ ಇಂತಹ ಸಾಂಸ್ಕೃತಿಕ ಸಂದರ್ಭದ ಒತ್ತಡವೇ 'ಕವಿರಾಜಮಾರ್ಗ'ದ ಹುಟ್ಟಿನ ಮೂಲವಾಗಿ ಪರಿಣಮಿಸುತ್ತದೆ.

ದಂಡಿಯ 'ಕಾವ್ಯಾದರ್ಶ'ದ ೩ನೆಯ ಪರಿಚ್ಛೇದ, ಭಾಮಹನ 'ಕಾವ್ಯಾಲಂಕಾರ'ದ ೪ನೆಯ ಅಧ್ಯಾಯದಲ್ಲಿ ಕಾವ್ಯದೋಷದ ಚರ್ಚೆ ಬಂದಿದೆ. ಅಂತಹ ಚರ್ಚೆ ಕವಿರಾಜಮಾರ್ಗಕಾರನಲ್ಲಿ ಮೊದಲಿಗೇ ಬಂದಿರುವುದು ಗಮನಾರ್ಹ. ಸಂಸ್ಕೃತದಲ್ಲಿ ಈಗಾಗಲೇ ಯಥೇಚ್ಛವಾಗಿ ಲಕ್ಷ್ಯ, ಲಕ್ಷಣ ಕೃತಿಗಳಿದ್ದು, ಈ ಎರಡೂ ಪರಂಪರೆಗಳು ಶ್ರೀಮಂತವಾಗಿಯೂ ಬೆಳೆದಿವೆ. ಆದರೆ ಕನ್ನಡದಲ್ಲಿ ಲಕ್ಷ್ಯ ಕೃತಿಗಳಿದ್ದು, ಲಕ್ಷಣ ಕೃತಿಗಳಿಲ್ಲ. ಆದ್ದರಿಂದ ಕಾವ್ಯ ದೋಷಗಳು ಸಹ ಅಗಣಿತವಾಗಿ ಕಾಣಿಸುತ್ತಿವೆ. ಆದ್ದರಿಂದ ದೋಷ ಮತ್ತು ಅದೋಷಗಳ ಚರ್ಚೆ ಅತ್ಯಂತ ಜರೂರಾಗಿ ಕೃತಿಯ ಪ್ರಾಥಮಿಕ ಹಂತದಲ್ಲಿಯೇ ಬರಬೇಕಾಗಿದೆ. ಇದು ಇದರ ಈ ಬಗೆಯ ಹಿಂದಿನ ಒತ್ತಡವನ್ನು ಧ್ವನಿಸುತ್ತದೆ. ಆದ್ದರಿಂದ ಮೊದಲ ಪರಿಚ್ಛೇದವನ್ನು 'ದೋಷಾದೋಷಾನು ವರ್ಣನ ನಿರ್ಣಯ'ವನ್ನಾಗಿ ಮಾರ್ಪಡಿಸುತ್ತಾನೆ.

ಹೀಗೆ ಕನ್ನಡ ಭಾಷೆಯನ್ನು ಮೊದಲು ದೋಷಗಳಿಂದ ಮುಕ್ತಗೊಳಿಸಿ, ಅನಂತರದಲ್ಲಿ ಅದನ್ನು ಅಲಂಕಾರಗಳಿಂದ ಪುಷ್ಟಗೊಳಿಸುವುದು ಈ ಕ್ರಮದ ಆಶಯವಾಗಿ ನಿಲ್ಲುತ್ತದೆ.

ಹೀಗೆ ದೋಷ ವರ್ಜನಕ್ಕೆ ಮೊದಲ ಮಣೆಯನ್ನು ಹಾಕಿದ ಈ ಕೃತಿ ಕನ್ನಡ ಕಾವ್ಯಮೀಮಾಂಸೆಯಾಗಿ ನಿಲ್ಲುತ್ತಾ, ಕನ್ನಡ ವ್ಯಾಕರಣ ಮತ್ತು ಛಂದಸ್ಸುಗಳ ವಿಸ್ತರಣೆಗೂ ಗಮನಾರ್ಹ ಕೊಡುಗೆ ನೀಡುತ್ತದೆ. ಇದಕ್ಕೆ ಪೋಷಕವಾಗಿ ಈ ಪರಿಚ್ಛೇದದ ಉತ್ತರಾರ್ಧದ ಪದ್ಯಗಳನ್ನು ಲಕ್ಷಿಸಬಹುದು. ಈ ಚರ್ಚೆ ಲಕ್ಷಣ ಮತ್ತು ಲಕ್ಷ್ಯಗಳ ನೆಲೆಯಲ್ಲಿ ನಡೆಯುತ್ತಾ, ಅದೇ ಸಂದರ್ಭದಲ್ಲಿ ಶಾಸ್ತ್ರ ಮತ್ತು ಕಾವ್ಯವಾಗಿಯೂ ಗಮನವನ್ನು ಸೆಳೆಯುತ್ತದೆ. ಇಲ್ಲಿನ ಬಹುತೇಕ ಎಡೆಗಳಲ್ಲಿ ಸಂಸ್ಕೃತದ ಅನುಸರಣೆ ಇದ್ದರೂ, ಲಕ್ಷಣಗಳ ನೆಲೆಯಲ್ಲಿ ಮಾತ್ರ ಕನ್ನಡದ ಸೋಪಜ್ಞತೆಯನ್ನು ಉಳಿಸಿಕೊಳ್ಳಲಾಗಿದೆ. ಈ ನಿಟ್ಟಿನಲ್ಲಿ ಕನ್ನಡದ ಪದಗಳೊಂದಿಗೆ ಸಂಸ್ಕೃತದ ಅವ್ಯಯಗಳನ್ನು ಬೆರೆಸಬಾರದ ವಿಚಾರ (೧-೫೨ ರಿಂದ ೫೮), ಅರಿಸಮಾಸದ ದೋಷ (೧-೫೯, ೬೦, ೬೧), ಕನ್ನಡದಲ್ಲಿ ಯತಿ ವಿಲಂಘನವು ಗುಣವೇ ವಿನಃ ದೋಷವಲ್ಲ; ಅದು ಸಂಸ್ಕೃತದಂತೆ ಪದ್ಯದ ಪಾದಗಳಲ್ಲಿ ನಿಯತವಾದ ಸ್ಥಾನದಲ್ಲಿ ಬರಬೇಕಿಲ್ಲ; ಅದು ಅರ್ಥಕ್ಕನುಗುಣವಾದ ನಿಲುಗಡೆಯಾಗಿ ಬರಬೇಕು ಎಂಬ ವಿಚಾರ (೧-೮೫), ಇವೇ ಮೊದಲಾದವು ಚರ್ಚೆಯನ್ನು ಬೆಳೆಸುತ್ತಾ ಸಾಗುತ್ತವೆ.

ಇದರೊಟ್ಟಿಗೆ ಕೇಳಲು ಅಹಿತವಾಗಿರುವ ಶ್ರುತಿದುಷ್ಟ, ಅಹಿತವಾದ ಅರ್ಥಕೊಡುವ ಅರ್ಥ ದುಷ್ಟ, ಕಿವಿಗೆ ಕರ್ಕಶವಾಗಿ ಕೇಳುವ ಶ್ರುತಿ ಕಷ್ಟ ಮತ್ತು ಕಲ್ಪಿತ ವಚನದಲ್ಲಿ ಅಸಹ್ಯತೆ ಹುಟ್ಟಿಸುವ ಕಲ್ಪನೋಕ್ತಿ ಕಷ್ಟ ಎಂಬ ನಾಲ್ಕು ಪ್ರಮುಖ ಶಬ್ದದೋಷಗಳನ್ನು ಪ್ರಸ್ತಾಪಿಸುತ್ತಾನೆ. ಇಲ್ಲಿ ಸಂಸ್ಕೃತದ ನೆರಳಿದೆ, ನಿಜ. ಆದರೆ ಇವುಗಳು ಕನ್ನಡದ 'ಪಗರಣ'ಗಳಲ್ಲಿ ಹಾಸ್ಯವನ್ನು ಉಕ್ಕಿಸುವುದರಿಂದ ಇಲ್ಲಿ ಗುಣಗಳಾಗಿ ಪರಿವರ್ತನೆಗೊಳ್ಳುತ್ತವೆ ಎಂಬ ಮಾತನ್ನು ಆಡುವ ಮೂಲಕ ಕನ್ನಡ ಸಂಸ್ಕೃತಿಯ ಜಾಯಮಾನ ಮತ್ತು ಅದರಲ್ಲೊಂದಾದ ಬಯಲಾಟವನ್ನು ನೆನಪಿಗೆ ತರುತ್ತಾನೆ. ಈ ಮೂಲಕ ಪ್ರಸ್ತುತ ಭಾಗವನ್ನು ಕನ್ನಡ ಕಾವ್ಯಮೀಮಾಂಸೆಯನ್ನಾಗಿ ಮಾರ್ಪಡಿಸುತ್ತಾನೆ (೧-೬೨ ರಿಂದ ೬೮).

ಹೀಗೆ ಇನ್ನೂ ಹದಿನೈದು ದೋಷಗಳ ಚರ್ಚೆಯನ್ನು ತಂದು, ಅಂತಿಮವಾಗಿ ಇಂತಹ ದೋಷಗಳ ಸಂಖ್ಯೆಗೆ ಕೊನೆಯಿಲ್ಲ ಎಂಬ ಮಾತನ್ನು ಆಡುತ್ತಾ ಈ ಭಾಗಕ್ಕೆ ಮುಕ್ತಾಯವನ್ನು ಹಾಡುತ್ತಾನೆ (೧-೧೪೩).

ಕವಿರಾಜಮಾರ್ಗಕಾರ ತನ್ನ ಕೃತಿಯ ಎರಡನೆಯ ಪರಿಚ್ಛೇದದಲ್ಲಿ ಶಬ್ದಾಲಂಕಾರಗಳ ಚರ್ಚೆಯನ್ನು ತರುತ್ತಾನೆ. ಇದರಲ್ಲಿ ಸಂಸ್ಕೃತದ ನೆರಳು ಗಾಢವಾಗಿಯೇ ಇದೆ. ಆದರೆ ಕೆಲವು ವಿಶಿಷ್ಟ ಸಂಗತಿಗಳ ಮೂಲಕ ಇದು ಭಾರತೀಯ ಕಾವ್ಯಮೀಮಾಂಸೆಯ ಸಂದರ್ಭದಲ್ಲಿ ಸೋಪಜ್ಞ ಕೃತಿಯಾಗಿ ನಿಲ್ಲುತ್ತದೆ.

ಈತ ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳನ್ನು ಎರಡು ಪ್ರತ್ಯೇಕ ಪರಿಚ್ಛೇದಗಳಲ್ಲಿ ಚರ್ಚಿಸುತ್ತಾನೆ. ಈ ಕ್ರಮ ದಂಡಿ ಮತ್ತು ಭಾಮಹರಲ್ಲಿ ಇಲ್ಲ ಎಂದು ಭೀಮರಾವ್ ಚಿಟಗುಪ್ಪಿ ಅವರು ಅಭಿಪ್ರಾಯಪಡುತ್ತಾರೆ. ಇಂತಹ ಚರ್ಚೆಯನ್ನು ಸಹಜವಾಗಿಯೇ ಕನ್ನಡ ಸಂಸ್ಕೃತಿಯನ್ನು ವಿವಕ್ಷಿಸಿ ಮಾಡಲಾಗಿದೆ. ಈ ನಿಟ್ಟಿನಲ್ಲಿ 'ಲಕ್ಷಣ'ಗಳ ರೂಪುರೇಷೆಗಳು ಸಂಸ್ಕೃತದ ದ್ರವ್ಯದಿಂದ ಸಿದ್ಧಗೊಂಡಿದ್ದರೆ, ಅದರ ಸ್ಪಷ್ಟತೆಗಾಗಿ ಮೂಡುವ ಲಕ್ಷ್ಯಗಳಲ್ಲಿ ಕನ್ನಡ ಸಂಸ್ಕೃತಿಯ ಭಾಷಿಕ ಚಿತ್ರಗಳು ಮೂಡಿನಿಲ್ಲುತ್ತವೆ. ಉದಾಹರಣೆಗೆ, ಕನ್ನಡ ಕಾವ್ಯದ ಜಾಯಮಾನದಲ್ಲಿ 'ಪ್ರಾಸಾನುಪ್ರಾಸಾಂತ ಪ್ರಾಸಂಗಳ್ ಮೂಱುಮತಿಶಯಂಗಳ್' ಎಂಬ ಮಾತನ್ನು ಆಡುತ್ತಾನೆ. ಅದೇ ಸಂದರ್ಭದಲ್ಲಿ ಕನ್ನಡದ ದೇಸೀಯತೆಯನ್ನು ನಿರಾಕರಿಸುತ್ತ, ಒಟ್ಟು ತನ್ನ ಕೃತಿಯ ಆಶಯಕ್ಕನುಗುಣವಾದ 'ಮಾರ್ಗ'ದಲ್ಲಿ ಅದನ್ನು ಪುನರ್ರಚಿಸಬೇಕು ಎಂದು ತಿಳಿಯುತ್ತಾನೆ (೨-೮೩, ೮೪).

ಹೀಗೆ ಮಾರ್ಗಮುಖಿಯಾಗಿ ಚಲಿಸುವ ಕನ್ನಡದ ಶಬ್ದಾಲಂಕಾರಗಳ ಚರ್ಚೆ ಸಂಸ್ಕೃತದ ಆವಾಹನೆಯ ಮೂಲಕ ಶ್ರೀಮಂತವಾಗಿಯೇ ಬೆಳೆದು ನಿಲ್ಲುತ್ತದೆ. ಇದು ಒಂದು ಭಾಷೆ ಶ್ರೀಮಂತವಾಗಿ ಬೆಳೆಯುವ ಕ್ರಮವೂ ಹೌದು ಎಂಬುದನ್ನು ಸಹ ಧ್ವನಿಸುತ್ತದೆ.

ಅರ್ಥಾಲಂಕಾರ ಪ್ರಕರಣ ಎಂಬುದು ಕೃತಿಯ ಕಡೆಯ ಪರಿಚ್ಛೇದವಾಗಿದೆ. ಇದು ವಿಶೇಷವಾಗಿ ದಂಡಿಯನ್ನು ಅನುಸರಿಸಿದೆ. ಭಾಮಹನ ಪ್ರಭಾವವೂ ಗುರುತರವಾಗಿದೆ. ಆದರೂ ತನ್ನ ಸೋಪಜ್ಞ ವಿಚಾರಗಳಿಂದ ಎದ್ದು ಕಾಣುವಂತಾಗಿದೆ. ಈ ನಿಟ್ಟಿನಲ್ಲಿ ಲಕ್ಷಣ ಮತ್ತು ಲಕ್ಷ್ಯಗಳ ಎರಡು ನೆಲೆಗಳಲ್ಲಿ ಬೆಳೆಯುವ ಕೃತಿ ಏಕಕಾಲಕ್ಕೆ ಇಲ್ಲಿ ಶಾಸ್ತ್ರ ಸಮನ್ವಿತ ಕಾವ್ಯವಾಗಿಯೂ ನಿಲ್ಲುತ್ತದೆ.

ಈ ಭಾಗದಲ್ಲಿ ಕೃತಿಕಾರ ಮೊದಲಿಗೆ ಸ್ವಭಾವೋಕ್ತಿ, ರೂಪಕ, ಶ್ಲೇಷೆ ಮೊದಲಾದ ೩೫ ಅರ್ಥಾಲಂಕಾರಗಳ ಚರ್ಚೆಯನ್ನು ತರುತ್ತಾನೆ. ಇದರ ಭಾಗವಾಗಿ ನಿದರ್ಶನ (ದೃಷ್ಟಾಂತ) ಅಲಂಕಾರವೂ ಬರುತ್ತದೆ (೩-೧೪೨, ೧೪೪). ಒಂದು ವಿಷಯವನ್ನು ಹೇಳುವಾಗ ಅದೇ ಗುಣ ಇಲ್ಲವೆ ದೋಷಗಳಿಂದ ಅನುಗತವಾಗಿ ಆದಂತಿರುವ ಇನ್ನೊಂದನ್ನು ನಿದರ್ಶನವನ್ನಾಗಿ ಕೊಡುವುದು ಈ ಅಲಂಕಾರದ ಸಾರ. ಇದರ ಸ್ಪಷ್ಟತೆಗಾಗಿ ಈತ ೧೧ ಲಕ್ಷ್ಯಗಳನ್ನು ಕೊಡುತ್ತಾನೆ. ಇವುಗಳು ಕನ್ನಡದ ಜಾಯಮಾನದ ಹಿನ್ನೆಲೆಯಲ್ಲಿ ಮೂಡುವ ಚಿತ್ರಗಳಾಗಿವೆ. ಹಾಗಾಗಿ ಒಂದೊಂದು ಲಕ್ಷಣಕ್ಕೂ ಒಂದೊಂದೇ ಲಕ್ಷ್ಯ ಕೊಡುವ ದಂಡಿಯ ಸಂಪ್ರದಾಯವನ್ನು ಮುರಿದು, ಅದಕ್ಕೆ ತನ್ನದೇ ಆದ ಮತ್ತು ದೇಸೀ ಸಂಸ್ಕೃತಿಯ ವಿವರಣಾತ್ಮಕ ನೆಲೆಯ ಪುಂಖಾನುಪುಂಖ ನಿದರ್ಶನಗಳನ್ನು ನೀಡುವ ಉಪಕ್ರಮವನ್ನು ಉಳಿಸಿಕೊಳ್ಳುತ್ತಾನೆ.

ದಂಡಿಯ 'ಕಾವ್ಯಾದರ್ಶ'ಕ್ಕೆ ಹೆಚ್ಚು ಋಣಿಯಾಗಿರುವ ಈ ಕೃತಿಯಲ್ಲಿ ೯ ರಸಗಳ ಪ್ರಸ್ತಾಪ ಇದೆ. ಆದರೆ ದಂಡಿಯಲ್ಲಿ ಮಾತ್ರ ೮ ರಸಗಳೇ ಇರುವುದು ಮತ್ತು ಭರತನ 'ನಾಟ್ಯಶಾಸ್ತ್ರ'ದಲ್ಲಿ ಸೇರಿರುವ ೯ನೆಯ (ಶಾಂತ) ರಸವು ಪ್ರಕ್ಷಿಪ್ತ ಎಂಬುದು ಅನೇಕ ವಿದ್ವಾಂಸರ ಮತ. ಆದ್ದರಿಂದ 'ಕವಿರಾಜಮಾರ್ಗಕಾರನ ೯ನೆಯ ರಸವಾದ ಶಾಂತರಸವು ಭಾರತೀಯ ಕಾವ್ಯಮೀಮಾಂಸೆಗೆ ತನ್ನ ಮತ್ತು ಕನ್ನಡದ ಕೊಡುಗೆಯಾಗಿದೆ ಎಂಬುದು ಒಂದು ಮಾತು (೩-೧೮೭, ೧೮೮).

ದಂಡಿಯಲ್ಲಿ ೩೫ ಅಲಂಕಾರಗಳ ಪ್ರಸ್ತಾಪ ಇದೆ ಎಂಬುದನ್ನು ಈಗಾಗಲೇ ಹೇಳಲಾಗಿದೆ. ಅದನ್ನೇ ಅನುಸರಿಸಿರುವ ಕವಿರಾಜಮಾರ್ಗಕಾರ ತನ್ನ ಕೃತಿಯಲ್ಲಿ ೩೬ ಅಲಂಕಾರಗಳನ್ನು ತರುತ್ತಾನೆ. ಆ ಕಡೆಯ ಮತ್ತು ೩೬ನೇ ಅಲಂಕಾರವು ಧ್ವನಿ ವ್ಯಾಪಾರಕ್ಕೆ ಸಂಬಂಧಿಸಿದ್ದಾಗಿದೆ (೩-೨೦೮).

ದಂಡಿ, ಭಾಮಹರಾದಿಯಾಗಿ ಇದುವರೆಗಿನ ಯಾವ ಭಾರತೀಯ ಆಲಂಕಾರಿಕರೂ, ಇದನ್ನೊಂದು ಅಲಂಕಾರ ಎಂದು ಘೋಷಿಸಿಲ್ಲ. ಆದ್ದರಿಂದ 'ಧ್ವನಿಯೆಂಬುದಳಂಕಾರಂ' ಎಂದು ಮೊದಲಾಗುವ ಏಕ ಕಂದಪದ್ಯದಲ್ಲಿನ ಈ ಚರ್ಚೆ ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕಾವ್ಯ ಮೀಮಾಂಸೆಯ ಕೊಡುಗೆಯೇ ಆಗಿದೆ.

ಇಲ್ಲಿ ಗಮನಿಸಬಹುದಾದ ಮತ್ತೊಂದು ಮಾತು: ಇದೇ ಕಾಲದ ಸರಿಸುಮಾರಿನಲ್ಲಿ 'ಧ್ವನ್ಯಾಲೋಕ'ದ ಆನಂದವರ್ಧನನು ಕಾಶ್ಮೀರದಲ್ಲಿ ಇದ್ದನು. ಆದ್ದರಿಂದ ಇವನ ಧ್ವನಿ ಸಿದ್ಧಾಂತದ ಕೆಲವೊಂದು ವಿವರಗಳು ಕರ್ಣಾಕರ್ಣಿಕೆಯಾಗಿ ಕರ್ನಾಟಕವನ್ನೂ ಮುಟ್ಟಿದ್ದಿರಬಹುದೇ? ಗೊತ್ತಿಲ್ಲ.

ಅಂತೂ 'ಕವಿರಾಜಮಾರ್ಗ' ಎಂಬ ಈ ವಿಶಿಷ್ಟ ಕೃತಿ ಭಾರತೀಯ ಸಂದರ್ಭದಲ್ಲಿ ಕನ್ನಡ ಸ್ವಾಯತ್ತತೆಯನ್ನು ಎತ್ತಿಹಿಡಿಯುತ್ತಲೇ ಭಾರತದ ಸಾಂಸ್ಕೃತಿಕ ರಾಷ್ಟ್ರೀಯತೆಗೂ ಪೋಷಕವಾಗಿ ನಿಲ್ಲುವ ಆರೋಗ್ಯಕಾರಿ ನೆಲೆಗಳನ್ನು ನಿರ್ಮಾಣ ಮಾಡುತ್ತದೆ. ಈ ಮೂಲಕವಾಗಿ 'ಭೂತ'ವನ್ನೂ ಮೀರಿ ನಿಲ್ಲುವ ಕೃತಿ ಒಕ್ಕೂಟ ವ್ಯವಸ್ಥೆಯೊಳಗೆ ಬದುಕುತ್ತಿರುವ ನಮ್ಮೊಳಗಿನ ಮಾತುಗಳಿಗೂ ಧ್ವನಿಯಾಗುತ್ತದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಕನ್ನಡ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ
ಸ್ನಾತಕೋತ್ತರ ಕೇಂದ್ರ, ಕೋಲಾರ - ೫೬೩ ೧೦೧

# ಫಲಜ್ಯೋತಿಷವು ವಿಜ್ಞಾನವೇ?

ವ್ಯಕ್ತಿಯ ಭವಿಷ್ಯವನ್ನು ಆಕಾಶಕಾಯಗಳು, ಮುಖ್ಯವಾಗಿ ನವಗ್ರಹಗಳು, ನಿಯಂತ್ರಿಸುವುವೆಂಬ ನಂಬಿಕೆಯ ಸುತ್ತ ಮಡುಗಟ್ಟಿರುವ ಕಿಟ್ಟಕ್ಕೆ ಫಲಜ್ಯೋತಿಷ (astrology) ಎಂದು ಹೆಸರು. 'ಫಲ' ಎಂದರೆ ಭವಿಷ್ಯ ಕುರಿತ ನುಡಿ. 'ಜ್ಯೋತಿಷ' ಪದವು ಜ್ಯೋತಿಶ್ಶಾಸ್ತ್ರದ (ಜ್ಯೋತಿರ್ವಿಜ್ಞಾನ, ಖಗೋಳ ವಿಜ್ಞಾನ, astronomy) ಹ್ರಸ್ವರೂಪ.

ಮಾನವಮತಿ ಸಾಧಾರಣವಾಗಿ ಅವೈಚಾರಿಕ ನಂಬಿಕೆಗಳ ಮತ್ತು ವೈಚಾರಿಕ ಹೊಳಹುಗಳ ಮಿಶ್ರಣ. ಯಾವುದೇ 'ಕಾರ್ಯ'ದ ಹಿನ್ನೆಲೆಯಲ್ಲಿ ಒಂದು 'ಕಾರಣ' ವರ್ತಿಸುತ್ತದೆ ಮತ್ತು ಪ್ರತಿಯೊಂದು 'ಕಾರಣ'ದ ಪರಿಣಾಮವಾಗಿ ಒಂದು 'ಕಾರ್ಯ' ಘಟಿಸುತ್ತದೆ ಎಂದು ಅರಿತು ತದನುಸಾರ ನಿರ್ಧಾರ ತಳೆಯುವ ಮನಃಸ್ಥಿತಿಯೇ ವೈಚಾರಿಕತೆ. ಹೀಗಲ್ಲದೆ ಎಲ್ಲವೂ ದೈವೇಚ್ಛೆ, ವಿಧಿಲೀಲೆ ಅಥವಾ ಕರ್ಮಫಲ ಎಂದು ನಂಬುವ ಮನಃಸ್ಥಿತಿ ಅವೈಚಾರಿಕತೆ. ವೈಚಾರಿಕತೆ ಸದಾ ಕ್ರಿಯಾಶೀಲವಾಗಿರುತ್ತದೆ. ಅವೈಚಾರಿಕತೆಯಾದರೋ ನಿಷ್ಕ್ರಿಯತೆ ಅಥವಾ ಪಲಾಯನವಾದವನ್ನು ಪ್ರೇರಿಸುತ್ತದೆ.

ಗಗನ ವೈಚಿತ್ರ್ಯಗಳನ್ನೂ ಭೂ ವೈಪರೀತ್ಯಗಳನ್ನೂ ಗಮನಿಸಿದ ಆದಿಮಾನವನಲ್ಲಿ ಉಭಯ ಸ್ಥಿತಿಗಳೂ ಜಾಗೃತವಾದುವು. ಕುತೂಹಲ, ವೀಕ್ಷಣೆ, ಊಹನೆ, ಪರೀಕ್ಷಣೆ ಮುಂತಾದವುಗಳಿಂದ ರಚಿತವಾದ ಪ್ರಾಯೋಗಿಕ ಮಾರ್ಗವನ್ನು ವೈಚಾರಿಕತೆ ಅನಾವರಣಿಸಿತು. ಫಲವಾಗಿ ಖಗೋಳ ವಿಜ್ಞಾನ, ವೈಜ್ಞಾನಿಕ ವಿಧಾನ ಮತ್ತು ವೈಜ್ಞಾನಿಕ ಮನೋಧರ್ಮ ಅರಳಿದುವು. ಹೀಗಲ್ಲದೇ ಅವೈಚಾರಿಕತೆಯು ಭಯ, ಪವಾಡ, ಕಲ್ಪನೆ, ಅಂಧವಿಶ್ವಾಸ ಮುಂತಾದವುಗಳಿಂದ ನಿರ್ಮಿತವಾದ ಮಸಕು ದಾರಿಯನ್ನು ತೆರೆದಿಟ್ಟಿತು. ಫಲವಾಗಿ ಫಲಜ್ಯೋತಿಷ, ತರ್ಕ ಚಮತ್ಕಾರ ಮತ್ತು ಮೂಢನಂಬಿಕೆ ಬಾಯಿ ಕಳೆದುವು. ಹೀಗೆ ವಿಚಾರಮೂಲ ಖಗೋಳ ವಿಜ್ಞಾನವೂ ಅವಿಚಾರ ಪ್ರೇರಿತ ಫಲಜ್ಯೋತಿಷವೂ ಪ್ರಾಚೀನ ಕಾಲದಿಂದಲೇ ಮಾನವನ ಅವಿಭಾಜ್ಯ ಅಂಗಗಳಾಗಿ ಬೆಳೆದುಬಂದಿವೆ.

ಈ ಸಂಬಂಧದಲ್ಲಿ ಖಗೋಳವಿಜ್ಞಾನವನ್ನು ''ಊರ್ಧ್ವಮೂಲಮಧಃಶಾಖಮಶ್ವತ್ಥಂ'' (ಅರಿವೆಂಬ ಅರಳೀಮರದ ಬೇರುಗಳು ಬಾನಿನಲ್ಲಿದ್ದು ವಿಜ್ಞಾನವೆಂಬ ಕೊಂಬೆರೆಂಬೆಗಳು ವರ್ತಮಾನದಲ್ಲಿ ಸದಾ ಮಾನವ ಸಂಗಾತಿಗಳಾಗಿವೆ ಎಂಬುದು ಇಂಗಿತ) ಎಂದು ಭಾವಿಸಿದರೆ ಫಲಜ್ಯೋತಿಷವನ್ನು ಈ ವೃಕ್ಷಕ್ಕೆ ತಾಗಿರುವ ಬಂದಣಿಕೆ ಎಂದು ಹೇಳಬಹುದು. ಫಲಜ್ಯೋತಿಷವು ಖಗೋಳ ವಿಜ್ಞಾನದಿಂದ ಸಮೃದ್ಧವಾಗಿ ಮಾಹಿತಿ, ಸಂಗತಿ, ನಿಯಮ, ಸೂತ್ರ ಮುಂತಾದವನ್ನು ಹೀರಿ ಸ್ವಾಂಗೀಕರಿಸಿಕೊಂಡು ವಿಜ್ಞಾನ ವೇಷದಲ್ಲಿ ವಿಜೃಂಭಿಸುತ್ತಿದೆ. ಇಂಥಲ್ಲಿ ಇಂದಿನ ಒಬ್ಬ ಸುಶಿಕ್ಷಿತ ವ್ಯಕ್ತಿ ಈ ವಾಲಿ-ಸುಗ್ರೀವರ (astrology, astronomy ಉಚ್ಚಾರಣಾ ಸಾಮೀಪ್ಯ ಗಮನಿಸಬೇಕು) ನಡುವಿನ ವ್ಯತ್ಯಾಸವರಿಯದೆ, ಮಾತಿನ ಮೋಡಿಯಿಂದ ಸುಲಭಗ್ರಾಹ್ಯವಾದ ಫಲಜ್ಯೋತಿಷಕ್ಕೆ ಶರಣಾಗುವುದು ವಿರಳವಲ್ಲ.

ಖಗೋಳ ವಿಜ್ಞಾನವನ್ನು ವಿಜ್ಞಾನಗಳ ಮಾತೆ ಎಂದು ಸಕಾರಣವಾಗಿ ವರ್ಣಿಸುವುದುಂಟು. ಏಕೆಂದರೆ ಇರುವ ಈ ಲೋಕಕ್ಕಿಂತ ಇಲ್ಲದ ಆ ಲೋಕ ಮಾನವಮತಿಯನ್ನು ಎಲ್ಲ ಕಾಲಗಳಲ್ಲಿಯೂ ಅತಿಶಯವಾಗಿ ಆಕರ್ಷಿಸಿದೆ : ''ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ ?'' (ಗೋಪಾಲಕೃಷ್ಣ ಅಡಿಗ)

ವಿಜ್ಞಾನದ ಸುದೀರ್ಘ ವಿಕಾಸದಲ್ಲಿ ಅದರ ಆಧಾರ ಭಾವನೆಗಳು, ಅದು ಸತ್ಯಶೋಧನೆ ನಡೆಸುವ ಬಗೆ, ವಿಜ್ಞಾನದ ವಿವಿಧ ವಿಭಾಗಗಳ ಅಂತರ ಸಂಬಂಧ ಮತ್ತು ಏಕತೆ ಮುಂತಾದವು ಖಚಿತವಾಗಿವೆ. ಆಧಾರಭಾವನೆಗಳು ಮೂರು :

೧. ವಿಶ್ವದಲ್ಲಿ ಕ್ರಮವಿದೆ.
೨. ಮಾನವಮತಿ ಈ ಕ್ರಮವನ್ನು ಗ್ರಹಿಸಿ, ಅರ್ಥವಿಸಿ, ವ್ಯಾಖ್ಯಾನಿಸಬಲ್ಲದು.
೩. ''ದೇವರು ನವುರು, ಎಂದೂ ಕುಹಕಿ ಅಲ್ಲ.''

ಮೂರನೆಯದು ಐನ್‌ಸ್ಟೈನರ ಪ್ರಸಿದ್ಧ ಸೂಕ್ತಿ: ನಿಸರ್ಗಕ್ಕೆ ಪ್ರೀತಿ-ದ್ವೇಷ, ಧೈರ್ಯ-ಭಯ, ಪ್ರದರ್ಶನ-ಹಿಂಜರಿಕೆ ಮುಂತಾದ ಮಾನವ ರಾಗಭಾವಗಳಿಲ್ಲ ಎಂಬುದು ಇಂಗಿತ. ಅವನವನ ಪ್ರಯತ್ನಕ್ಕೆ ಅವನವನ ಹಾದಿ ಪ್ರಕಾರ ಫಲ ಎಂದರ್ಥ. ವಿಶ್ವರಹಸ್ಯವನ್ನು ಅನ್ವೇಷಿಸಿ ಅರಿಯಲು ಮುಂದಾಗುವ ವ್ಯಕ್ತಿಯ ಬಗ್ಗೆ ನಿಸರ್ಗದ ಧೋರಣೆ ಪೂರ್ಣ ತಟಸ್ಥ ಮತ್ತು ದಿವ್ಯ ನಿರ್ಲಿಪ್ತ.

ವಿಶ್ವಸಂಯಂತ್ರದ ವಿಧಿ ನಿಯಮಗಳನ್ನು ಶೋಧಿಸುವುದು ವಿಜ್ಞಾನದ ಉದ್ದೇಶ. ಇದರ ಸಾಧನೆಗೆ ಅದು ಅನುಸರಿಸುವ ಪಥದಲ್ಲಿ ಒಂದು ಕ್ರಮ ಕಾಣುತ್ತೇವೆ : ಸಮಸ್ಯಾ ನಿರೂಪಣೆ, ಮಾಹಿತಿ ಸಂಗ್ರಹಣೆ ವಿಶ್ಲೇಷಣೆ ಮತ್ತು ಊಹಾಮಂಡನೆ ಮತ್ತು ಮೂಲ ಸಮಸ್ಯೆಗೆ ಈ ಊಹೆಯನ್ನು ಅನ್ವಯಿಸಿ ಇದರ ತಪಾಸಣೆ. ಇಂಥ ಪುನರಪಿ ತಪಾಸಣೆಗಳಲ್ಲಿ ಉತ್ತೀರ್ಣವಾಗುವ ಅಂತಿಮ ಊಹೆಯೇ ದತ್ತ ಸಮಸ್ಯೆಯ ಪರಿಹಾರ – ಸದ್ಯಕ್ಕೆ ! ಏಕೆಂದರೆ ಭೌತ ವಿಶ್ವದಲ್ಲಿ ಶಾಶ್ವತ ಸಮಸ್ಯೆಯೂ ಇಲ್ಲ, ಪರಿಹಾರವೂ ಇಲ್ಲ :

*ಸಂದೇಹವೀಕ್ಷತಿಯೊಳಿನ್ನಿಲ್ಲವೆಂದಲ್ಲ*
*ಇಂದು ನಂಬಿಹುದೆ ಮುಂದೆಂದುಮೆಂದಲ್ಲ*
*ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು*
*ಇಂದಿಗೀ ಮತವುಚಿತ ಮಂಕುತಿಮ್ಮ.*

ಸತ್ಯಶೋಧನಾರ್ಥ ವಿಜ್ಞಾನ ಅನುಸರಿಸುವ ಈ ಕ್ರಮಬದ್ಧ ನಡೆಗೆ ವೈಜ್ಞಾನಿಕ ವಿಧಾನವೆಂದೂ ಈ ನಡೆತದ ವೇಳೆ ವ್ಯಕ್ತಿಯ ಮನಸ್ಸು ತಳೆಯುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮವೆಂದೂ ಹೆಸರು. ಮೂಲತಃ ಮಾನವಮತಿ - ನಿಸರ್ಗ ಅಂತರಕ್ರಿಯೆಯು ಕಾರ್ಯ - ಕಾರಣ ಪಾತಳಿಯಲ್ಲಿ ತಾರ್ಕಿಕವಾಗಿ ಜರಗಿದಾಗ ವಿಜ್ಞಾನ ಮೈದಳೆದುದಾದರೂ ವೈಜ್ಞಾನಿಕ ವಿಧಾನವು ಸಮಸ್ತ ಮಾನವ ಸಮಸ್ಯೆಗಳ ಪರಿಹಾರಕ್ಕೂ ಅನ್ವಯ ಯೋಗ್ಯವಾಗಿದೆ. ಇಷ್ಟು ಹಿನ್ನೆಲೆಯಿಂದ ಈಗ ಫಲಜ್ಯೋತಿಷವು ವಿಜ್ಞಾನವೇ ಎಂಬ ಮೂಲಭೂತ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸೋಣ.

ವ್ಯಕ್ತಿಯ ಜೀವನ ವೃತ್ತಾಂತ, ವಿಶೇಷವಾಗಿ ಭವಿಷ್ಯ, ಆತನ ಜಾತಕದಲ್ಲಿ ನಿಹಿತವಾಗಿದೆ, ನುರಿತ ಜೋಯಿಸ ಈ ಜಾತಕವನ್ನು ಪರಿಶೀಲಿಸಿ, ವ್ಯಕ್ತಿಗೆ ಮುಂದಾಗಲಿರುವುದನ್ನು ಇಂದೇ ಕಣಿ ನುಡಿಯ ಬಲ್ಲ ಮತ್ತು ದುಷ್ಟ ಗ್ರಹಗಳ ಅಪವಿತ್ರ ಮೈತ್ರಿಯಿಂದ ಆತನ ಮೇಲೆ ಕೆಡೆಯಲಿರುವ ಅಪಘಾತಗಳನ್ನು ಯುಕ್ತ ಮುನ್ನೆಚ್ಚರಿಕೆ ವಹಿಸಿ ನಿವಾರಿಸಬಹುದು – ಫಲಜ್ಯೋತಿಷದ ಹೂರಣವಿದು.

ಜೋಯಿಸ ನುಡಿಯುವ ಭವಿಷ್ಯ ಸ್ಥೂಲವಾಗಿ ಈ ಧಾಟಿಯಲ್ಲಿರುವುದು : ಮುಂದಿನ ತಿಂಗಳ ಕೊನೆಯ ದಿನದಂದು ಶನಿ ಮೀನರಾಶಿಯನ್ನು



ನನಗಿಲ್ಲಿ ಭವಿಷ್ಯವಿಲ್ಲಾ ಅಂತ ಗೊತ್ತಾದ ಮೇಲೇ ನಾನಿಲ್ಲಿ ಇನ್ನೊಬ್ಬರಿಗೆ ಭವಿಷ್ಯ ಹೇಳಲು ಕುಳಿತಿದ್ದೇನೆ

ಜಿ. ಟಿ. ನಾರಾಯಣರಾವ್

ಪ್ರವೇಶಿಸುತ್ತಾನೆ; ಅಲ್ಲಿ ಆ ಮೊದಲೇ ತಂಗಿರುವ ರಾಹುವಿಗೂ ಶನಿಗೂ ಎಣ್ಣೆ ಸೀಗೆ; ಎಂದೇ ಈ ಜಾತಕನಿಗೆ ಅನಿಷ್ಟ ಕಾದಿದೆ; ಯುಕ್ತ ಶಾಂತಿ ಹೋಮ ದಾನಾದಿಗಳ ಮೂಲಕ ಅನಿಷ್ಟ ನಿವಾರಣೆ ಸಾಧ್ಯ.

ಇದನ್ನು ವೈಜ್ಞಾನಿಕ ವಿಧಾನದಿಂದ ತಿಳಿಯಲು ಪ್ರಯತ್ನಿಸೋಣ. ನಿಶ್ಚಲ ಭೂಮಿಯಲ್ಲಿ ನಿಂತಿರುವಂತೆ ಅನ್ನಿಸುವ ನಮಗೆ ಕಾಣುವ ಗಗನದೃಶ್ಯವಿದು : ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ ಮತ್ತು ಶನಿ ಎಂಬ ೭ ಭೌತ ಆಕಾಶಕಾಯಗಳು ಮತ್ತು ರಾಹು ಹಾಗೂ ಕೇತು ಎಂಬ ೨ ಕಾಲ್ಪನಿಕ ಬಿಂದುಗಳು (ಇವುಗಳ ಒಟ್ಟು ಹೆಸರು ಫಲಜ್ಯೋತಿಷದ ಪರಿಭಾಷೆಯಲ್ಲಿ 'ನವಗ್ರಹ'ಗಳು; ವಾಸ್ತವವಾಗಿ ಸೂರ್ಯ ಒಂದು ನಕ್ಷತ್ರ, ನಮ್ಮ ನಕ್ಷತ್ರ, ಚಂದ್ರ ಒಂದು ಉಪಗ್ರಹ, ನಮ್ಮ ಉಪಗ್ರಹ, ರಾಹು ಮತ್ತು ಕೇತುಗಳಿಗೆ ಭೌತ ಅಸ್ತಿತ್ವವಿಲ್ಲ, ಉಳಿದ ೫ ಮಾತ್ರ ಋಜುಗ್ರಹಗಳು, ಇವುಗಳ ಯಾದಿಗೆ ಭೂಮಿ, ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋ ಗ್ರಹಗಳನ್ನು ಸೇರಿಸಬೇಕು) ನಮ್ಮ ಸುತ್ತ ನಿರಂತರವಾಗಿ ಪರಿಭ್ರಮಿಸುತ್ತಿವೆ; ಪರಿಭ್ರಮಣ ದಿಶೆ ಪಶ್ಚಿಮ-ಪೂರ್ವ; ಇವುಗಳ ಕಕ್ಷೆಗಳು, ಸ್ಥಿರ ನಕ್ಷತ್ರ ಚಿತ್ರಗಳ ಮುನ್ನೆಲೆಯಲ್ಲಿ ಒಂದು ಇಕ್ಕಟ್ಟು ಪಟ್ಟಿಗೆ ಸೀಮಿತವಾಗಿರುವಂತೆ ಭಾಸವಾಗುತ್ತವೆ; ಎಂದೇ ಇದರ ನೇರ ಅದೇ ದಿಶೆಯಲ್ಲಿ ಮೇಷದಿಂದ ಮೀನದವರೆಗಿನ ೧೨ ರಾಶಿಗಳನ್ನು ಗುರುತಿಸಿದೆ; ಈ ಪಟ್ಟಿಗೆ ರಾಶಿಚಕ್ರವೆಂದು ಹೆಸರು.

ರಾಶಿಗಳಿಗೂ ರಾಶಿಚಕ್ರಕ್ಕೂ ಭೌತ ಅಸ್ತಿತ್ವ ಇಲ್ಲ! ''ಶನಿಯು ಮೀನ ರಾಶಿಯನ್ನು ಪ್ರವೇಶಿಸುವುದು'' ಎಂದರೆ ಭೌತಕಾಯವಾದ ಶನಿಗ್ರಹವು ಮೀನ ರಾಶಿಯೆಂಬ ಕಾಲ್ಪನಿಕ ರಾಶಿಚಕ್ರ ಖಂಡದತ್ತ ಸರಿಯುತ್ತಿದೆ ಎಂದರ್ಥ. ವ್ಯಕ್ತಿಯು ಕುರ್ಚಿಯಲ್ಲಿ ಕೂರಲು ತೊಡಗುವುದಕ್ಕೆ ಸದೃಶವಾದ ಭೌತ ಘಟನೆ ಇದಲ್ಲ.

ಗಗನ ವಿಸ್ಮಯಗಳಾದ ಗ್ರಹಣಗಳ ಕಾರಣವಾಗಿ ರಾಹು ಮತ್ತು ಕೇತು ಎಂಬ ಒಂದು ಜೊತೆ ವ್ಯಾಸೀಯ ವಿರುದ್ಧ ಬಿಂದುಗಳಿಗೆ (ನಮ್ಮ ನೆಲೆ ಇಲ್ಲಿಯ ಕೇಂದ್ರ) ಪ್ರಾಮುಖ್ಯ ಒದಗಿದೆ, ಅಷ್ಟೆ. ಇವುಗಳಿಗೆ ಭೌತ ಅಸ್ತಿತ್ವವಿಲ್ಲ. ಆದ್ದರಿಂದ ''ರಾಹು ಮೀನರಾಶಿಯಲ್ಲಿ ತಂಗಿದೆ'' ಎಂದರೆ ನಮಗೆ ಭಾಸವಾಗುವಂತೆ ಕಾಲ್ಪನಿಕ ಬಿಂದು ರಾಹುವು ಕಾಲ್ಪನಿಕ ಮೀನರಾಶಿಯ ದಿಶೆಯಲ್ಲಿದೆ ಎಂದರ್ಥ.

ಅಂದಮೇಲೆ ಮೀನ ರಾಶಿಯಲ್ಲಿ ಶನಿ-ರಾಹು ವಾಸ್ತವ್ಯಕ್ಕೆ ಭೌತ ಪ್ರಾಮುಖ್ಯ ಏನೂ ಇಲ್ಲ ಎಂಬುದು ಸ್ಪಷ್ಟ. ತೀರ ವಿರಳವಾಗಿ ''ಅಷ್ಟಗ್ರಹಯೋಗ'' ಸಂಭವಿಸುವುದುಂಟು – ನಮಗೆ ಕಾಣುವಂತೆ ಸೂರ್ಯನಿಂದ ಶನಿಯವರೆಗಿನ ೭ ಭೌತಕಾಯಗಳೂ ರಾಹು ಅಥವಾ ಕೇತು ಎಂಬ ಕಾಲ್ಪನಿಕ ಬಿಂದುವೂ ಒಂದೇ ರಾಶಿಯ ದಿಶೆಯಲ್ಲಿರುವುದು. ಗಗನದ ಅಸೀಮ ಅಗಾಧತೆ ಮತ್ತು ನಮ್ಮ (ಖುದ್ದು ಭೂಮಿಯ ಕೂಡ) ಅನಂತ ಸೂಕ್ಷ್ಮತೆ ಎರಡೂ ಸೇರಿ ಇಂಥ ಒಂದು ಭ್ರಮೆ ನಮ್ಮ ಮನದಲ್ಲಿ ಮೂಡುತ್ತದೆ, ಅಷ್ಟೆ. ಆ ಕಾಯಗಳ ನಡುವೆ ಯಾವ ತಿಮುಕೂ ಇರದು, ತಿಕ್ಕಾಟವೂ ನಡೆಯದು. ಇನ್ನು ಬಿಡಿ ವ್ಯಕ್ತಿಯ ಮೇಲೆ ಹಾಗಿರಲಿ, ಸಾಕ್ಷಾತ್ ಭೂಮಿಯ ಮೇಲೂ ಅಷ್ಟಗ್ರಹಯೋಗದ ಪರಿಣಾಮ ಸೊನ್ನೆ! ಪರಸ್ಪರ ಗುರುತ್ವಾಕರ್ಷಣ ಬಲಗಳ ಗಣನೆಯಿಂದಲೂ ಇದನ್ನು ಸಾಧಿಸಬಹುದು.

ಇನ್ನು ಜಾತಕ ಅಂದರೇನೆಂದು ಪರಿಶೀಲಿಸೋಣ. ಇದು ಯಾವುದೇ ಸ್ಥಳ-ಕ್ಷಣ ಕುರಿತಂತೆ ರಾಶಿಚಕ್ರ ಮತ್ತು ಇದರಲ್ಲಿ 'ನವಗ್ರಹ'ಗಳ ವಿನ್ಯಾಸ ಇವುಗಳ ಸಂಕ್ಷಿಪ್ತ ಸ್ತಬ್ಧ ಚಿತ್ರ. ಪ್ರತಿಯೊಂದು ಶಿಶು ಜನನವೂ ದೇಶ-ಕಾಲದಲ್ಲಿ ಏಕೈಕ ಘಟನೆ. ಆದ್ದರಿಂದ ''ತೊಟ್ಟಿಲುಗಳೆಷ್ಟೊ ಜಾತಕಗಳಷ್ಟು ಧರೆಯೊಳಗೆ !'' ಹೀಗೆ ಜಾತಕವೊಂದು ಖಚಿತ ವೈಜ್ಞಾನಿಕ ದಾಖಲೆ. ಸಂದ ಯುಗಗಳಲ್ಲಿ ಕವಡೆ ಜೋಯಿಸ ದೀರ್ಘಕಾಲ ಗುಣುಗುಣಿಸಿ ತಯಾರಿಸುತ್ತಿದ್ದ ಜಾತಕವನ್ನು ವರ್ತಮಾನ ದಿನಗಳಲ್ಲಿ ಗಣಕ ಪರಿಕರ್ಮಿ ತಾತ್‌ಕ್ಷಣಿಕವಾಗಿ ಮುದ್ರಿಸಿಕೊಡಬಲ್ಲ. ಜಾತಕ ರಚನೆ ನಿಸ್ಸಂದಿಗ್ಧವಾಗಿ ಖಗೋಳ ವಿಜ್ಞಾನಾಧಾರಿತವಾದದ್ದು. ಅಂದಮಾತ್ರಕ್ಕೆ ಜಾತಕದಿಂದ ಸ್ಫುರಿಸುವ 'ಫಲ' ಮಾತ್ರ ವೈಜ್ಞಾನಿಕವಾಗಿರಬೇಕಾಗಿಲ್ಲ.

ಫಲ ಭಾಗ ಕುರಿತಂತೆ ಕೇವಲ ಎರಡು ವಾಸ್ತವ ನಿದರ್ಶನಗಳನ್ನು ಪರಿಶೀಲಿಸೋಣ. ''ಈ ಮದುವೆಯಿಂದ ಶಿಶು ಜನನವಾದಾಗ ವರನ ತಂದೆ ಸಾಯುವನು'' ಎಂದು ಜೋಯಿಸ ಭಾವೀ ವರನ ತಾಯಿಗೆ ''ಆಶ್ವಾಸಿಸುತ್ತಾನೆ.'' ಉದ್ವಿಗ್ನ ತಾಯಿ ಈ ಮದುವೆ ಆಗಕೂಡದೆಂದು ಹಠ ಹಿಡಿಯುತ್ತಾಳೆ. ಕೋಪೋದ್ರಿಕ್ತ ಪುತ್ರ ಬಂದೂಕಿಗೆ ಶರಣು ಹೋಗಿ ತಾಯಿ, ತಂದೆ, ಅಲ್ಲಿದ್ದ ಕುಟುಂಬ ಸದಸ್ಯರಿಗೆ ಗುಂಡು ಹೊಡೆದು ಸಾಯಿಸುತ್ತಾನೆ, ತಾನೂ ಗುಂಡು ಹೊಡೆದುಕೊಂಡು ಮಡಿಯುತ್ತಾನೆ (ಹೇಗೂ ಜಾತಕ ಸತ್ಯವಾಯಿತಲ್ಲ - ರಾಜ ಮರಣ ಅಪ್ಪಿದನಷ್ಟೆ!).

''ಈಗ ನಿಮಗೆ ಶನಿದಶೆ. ಇದು ಮುಗಿಯುವ ಮೊದಲು, ಅಂದರೆ ಇನ್ನು ೩ ವರ್ಷ ಪರ್ಯಂತ, ನಿಮ್ಮ ಉದ್ಯಮದಲ್ಲಿ ಏನೂ ಸುಧಾರಣೆ ತರಬೇಡಿ. ಬಳಿಕ ನೀವು ಮುಟ್ಟಿದ್ದು ಚಿನ್ನವಾಗುತ್ತದೆ.'' ಆಗಲೇ ತನ್ನ ಅದಕ್ಷತೆ ಹಾಗೂ ಅವಿವೇಕಗಳ ಕಾರಣವಾಗಿ ಸಾಕಷ್ಟು ಸಾಲದಲ್ಲಿ ಮುಳುಗಿದ್ದ ಉದ್ಯಮಿ ಶನಿದಶೆ(!) ಮುಗಿಯುವ ಮೊದಲೇ ಆತ್ಮಹತ್ಯೆಗೆ ಬಲಿಯಾದ (ಸ್ವರ್ಗದಲ್ಲಿ ಆತನಿಗೆ ಸುವರ್ಣದಶೆ ಪ್ರಾಪ್ತವಾದದ್ದು ಖರೆ !).

ಗ್ರಹಗತಿಯ ತಿದ್ದುವನೆ ಜೋಯಿಸನು ಜಾತಕದಿ ?
ವಿಹಿತಮಾಗಿಹುದದರ ಗತಿ ಸೃಷ್ಟಿ ವಿಧಿಯಿಂ
ಸಹಿಸಿದಲ್ಲದೆ ಮುಗಿಯದಾವ ದಶೆ ಬಂದೊಡಂ
ಸಹನೆ ವಜ್ರದ ಕವಚ ಮಂಕುತಿಮ್ಮ.

ಜೋಯಿಸನ ತಂತ್ರಗಳು ಮುಖ್ಯವಾಗಿ ೫ : ಗಿರಾಕಿಯ ಅವ್ಯಕ್ತ ಭಯವನ್ನು ಭುಗಿಲೆಬ್ಬಿಸುವುದು, ಸುಪ್ತ ಮಹತ್ವಾಕಾಂಕ್ಷೆಗೆ ತನಿ ಎರೆಯುವುದು. ಮನೋ[illegible]

## ಅಭಿನಂದನೆಗಳು

**ಎರಡು** ರೀತಿಗಳಲ್ಲಿ ಚಪ್ಪಲಿ ಸವೆಸುವ ಜನ ನಮ್ಮಲ್ಲಿದ್ದಾರೆ : ಪ್ರಶಸ್ತಿಗಳನ್ನೋ ಉನ್ನತ ಸ್ಥಾನಗಳನ್ನೋ ತಮಗೆ ದೊರಕಿಸಿಕೊಳ್ಳಲು ಭಟ್ಟಂಗಿಗಳಂತೆ ವಿಧಾನಸೌಧದಲ್ಲಿ ಕಂಡಕಂಡವರನ್ನೆಲ್ಲಾ ಭೇಟಿಯಾಗಿ ಅವರ ಕೃಪಾಕಟಾಕ್ಷಕ್ಕೆ ಪಾತ್ರರಾಗಲು ಒದ್ದಾಡುವ ಜನದ್ದು ಒಂದು ವಿಭಾಗ. ಅದು ಸ್ವಲ್ಪ ದೊಡ್ಡ ವಿಭಾಗವೇ ಇರಬೇಕೆಂದು ತೋರುತ್ತದೆ. ಚಪ್ಪಲಿ ಅಂಗಡಿಗಳಿಗೆ ಅವರು ಭೇಟಿ ನೀಡುವ ದಾಖಲೆಗಳನ್ನು ಪರಿಶೀಲಿಸಿದರೆ ಅದು ತಿಳಿಯುತ್ತದೆ. ಅಂಥವರು ಕೆಲವರು ರಾಜ್ಯೋತ್ಸವ ಪ್ರಶಸ್ತಿಗಳನ್ನು ಗಿಟ್ಟಿಸಿಕೊಳ್ಳಬಹುದು. ಆಮೇಲೆ, ಬೇರೆಯವರು ಸಾಕಷ್ಟು ಕ್ರಾಂತಿಕ್ರಿಯಾಚೇತನಗಳಲ್ಲವೆಂದು ಅವರನ್ನು ಮೂದಲಿಸಬಹುದು. ಇನ್ನೊಂದು ಸಣ್ಣ ಗುಂಪು. ಅವರು ಚಪ್ಪಲಿ ಸವೆಸುವುದು ವಿಧಾನಸೌಧದ ಮಹಡಿಗಳಲ್ಲಿ ಅಂಡಲೆಯುವುದರಿಂದ ಅಲ್ಲ, ಮಠಾಧಿಪತಿಗಳ ಚರಣಾರವಿಂದಗಳಲ್ಲಿ ತಲೆಯಿಟ್ಟು ಆಶೀರ್ವಾದ ಪಡೆಯಲು ಅಲ್ಲ. ಪ್ರತಿಭಟನೆಗಳಲ್ಲಿ ಪಾಲ್ಗೊಳ್ಳುತ್ತಾ ಜನರೊಡನೆ ಹೆಜ್ಜೆ ಹಾಕುವ ಈ ಮಂದಿಗೆ ಸಾರ್ವಜನಿಕ ಹಿತಕ್ಕಾಗಿ ಪಾಲ್ಗೊಂಡದ್ದೇ ಪ್ರಶಸ್ತಿ. ಸವೆದ ಚಪ್ಪಲಿಗಳಲ್ಲೇ ನಡೆದಾಡುವವರು ಇವರು.

ಇದನ್ನು ಪ್ರಸ್ತಾಪಿಸಿದ್ದು ಒಂದು ಉದ್ದೇಶದಿಂದ: ಇಂದು, ನಾಳೆ, ಎಂದು ಕುತೂಹಲ ಮೂಡಿಸುತ್ತಾ ಸರ್ಕಾರವು ಕಡೆಗೂ ವಿವಿಧ ಅಕಾಡೆಮಿಗಳಿಗೆ ಅಧ್ಯಕ್ಷರನ್ನು, ಸದಸ್ಯರನ್ನು ಆಯ್ಕೆ ಮಾಡಿ ಪಟ್ಟಿಗಳನ್ನು ಪ್ರಕಟಿಸಿದೆ. ಅದಕ್ಕೂ ಜಾತಿ-ಜಿಲ್ಲೆ ಪ್ರಾತಿನಿಧ್ಯ ಹದವಾಗಿ ನೀಡಲಾಗಿದೆಯೆಂದು ಸಚಿವೆ ಹೇಳಿಕೊಂಡಿದ್ದಾರೆ. ಆ ಮಾನದಂಡ ಅನಿವಾರ್ಯವೇ ಎಂಬ ಪ್ರಶ್ನೆ ಅಪ್ರಸ್ತುತವಲ್ಲ.

ಈ ಬಾರಿಯ ಸದಸ್ಯರಲ್ಲಿ ಹಲವರು ಎರಡನೆ ರೀತಿಯಲ್ಲಿ ಚಪ್ಪಲಿಗಳನ್ನು ಸವೆಸುವವರಿದ್ದಾರೆಂಬುದು ನಮಗೆ ಹರ್ಷದ ಸಂಗತಿ. ಅಲ್ಲದೆ 'ಹೊಸತು' ಬಳಗದವರು, ಹಿತೈಷಿಗಳು, ಲೇಖಕರು ಅನೇಕರು ಈ ಬಾರಿಯ ಅಕಾಡೆಮಿಗಳಲ್ಲಿ ಸದಸ್ಯರಾಗಿದ್ದಾರೆ. ಅವರಾರೂ ತಮ್ಮ ಬಗೆಗೆ ಯೋಗ್ಯತಾ ಪತ್ರಗಳನ್ನು ಹಿಡಿದುಕೊಂಡು ಸಚಿವರಲ್ಲಿ ಅಧಿಕಾರಗಳಲ್ಲಿ ಮುಗಿಬೀಳುವವರಲ್ಲ ಎಂಬುದು ನಮಗೆ ಹೆಮ್ಮೆಯ ವಿಷಯ. ಈ ಎಲ್ಲ ಸದಸ್ಯರ ಹೆಸರುಗಳನ್ನು ಪ್ರತ್ಯೇಕವಾಗಿ ಉಲ್ಲೇಖಿಸದೆ ಅವರೆಲ್ಲರನ್ನೂ 'ಹೊಸತು' ಅಭಿನಂದಿಸುತ್ತದೆ, ಅವರಿಂದ ಗುಣಾತ್ಮಕ ಬದಲಾವಣೆಗಳನ್ನು ನಿರೀಕ್ಷಿಸುತ್ತದೆಂಬುದನ್ನು ವಿನಯದಿಂದ ನೆನಪು ಮಾಡಿಕೊಡುತ್ತದೆ. ಅಂತೆಯೇ, ವಿಧಾನ ಪರಿಷತ್ತಿಗೆ ನಾಮಕರಣಗೊಂಡಿರುವ ಡಾ|| ಎಲ್. ಹನುಮಂತಯ್ಯನವರನ್ನು 'ಹೊಸತು' ಅಭಿನಂದಿಸುತ್ತದೆ.

ಪ್ರಾಚೀನ ಗ್ರಂಥಗಳನ್ನೂ ದೈವಿಕ ಬಲಗಳನ್ನೂ ಉಲ್ಲೇಖಿಸುವುದು ಮತ್ತು ವ್ಯಾಖ್ಯಾನ ಚಮತ್ಕಾರ. ಇವೆಲ್ಲವುಗಳ ತಳದಲ್ಲಿರುವುದು ಹಿಂಗದ ಸ್ವಾರ್ಥ ಲಾಲಸೆ: ಕೊಳ್ಳೆಯಿಂದ ತಾನು (ಜೋಯಿಸ) ಹೇಗೆ ಗರಿಷ್ಠ ಲಾಭ ಹಿಂಡುವುದು ಎಂಬ ಅಸಲೀ ವ್ಯಾಪಾರ ಧೋರಣೆ!

ಭವಿಷ್ಯ ನುಡಿಯಲು ಜೋಯಿಸನಿಗಿರುವ ಆಧಾರ ಮತ್ತು ಅಧಿಕಾರ ಏನು? ಪ್ರಾಚೀನ ಗ್ರಂಥಗಳು, ಋಷಿ ವಾಕ್ಯಗಳು, ಪೂರ್ವ ನಿದರ್ಶನಗಳು, ಕಾಕತಾಲೀಯತೆ, ಇತ್ಯಾದಿ – ಇವು ಆಧಾರ. ಜೋಯಿಸನಲ್ಲಿಗೆ ಕಣಿ ಕೇಳಲು ಹೋಗುವ ವ್ಯಕ್ತಿ ಜೋಯಿಸನಲ್ಲಿಟ್ಟಿರುವ ಅಂಧ ವಿಶ್ವಾಸ, ಅಸೀಮ ಭಕ್ತಿ, ಆರಾಧನಾ ದೃಷ್ಟಿ, ಶರಣಾಗತಿ ಮನೋಭಾವ, ಇತ್ಯಾದಿ – ಇವು ಅಧಿಕಾರ.

ಈ ಆಧಾರವನ್ನಾಗಲೀ ಅಧಿಕಾರವನ್ನಾಗಲೀ ವೈಜ್ಞಾನಿಕ ವಿಧಾನದಿಂದ ತಪಾಸಿಸಲು ಸಾಧ್ಯವಿದೆಯೇ? ಸುತರಾಂ ಇಲ್ಲ. ಭೌತ ಅಸ್ತಿತ್ವರಹಿತ ರಾಶಿಗಳಲ್ಲಿ 'ನವಗ್ರಹ'ಗಳ ವಿನ್ಯಾಸವೆಂಬ ಭ್ರಮೆ, ಇವು ತಮ್ಮ ಸ್ಥಾನ ಕಾರಣವಾಗಿ ಬಿಡಿ ವ್ಯಕ್ತಿಯ ವರ್ತಮಾನ ಭವಿಷ್ಯಗಳನ್ನು ರೂಪಿಸುವುವೆಂಬ ಭ್ರಮೆ, 'ನವಗ್ರಹ'ಗಳನ್ನು ಶಾಂತಿಗೊಳಿಸಿ(?) ತನ್ನ ದಂದುಗಗಳನ್ನು ನೀಗಿಕೊಳ್ಳಬಹುದೆಂಬ ಭ್ರಮೆ, ಈ ಎಲ್ಲ ಸಂಗತಿಗಳೂ ಪ್ರಾಚೀನ ಗ್ರಂಥಗಳಲ್ಲಿ (ಫಾಸಿಲುಗಳು!) ಗರ್ಭಿತವಾಗಿದ್ದು ಇವನ್ನು ಜೋಯಿಸ ತನ್ನ ಮಂತ್ರ ಹಾಗೂ ಆಧ್ಯಾತ್ಮಿಕ ಬಲದಿಂದ (!) ಉತ್ಖನಿಸಿ ನುಡಿಯಬಲ್ಲನೆಂಬ ಭ್ರಮೆ ಮತ್ತು ವ್ಯಕ್ತಿಯು ಸೃಷ್ಟೀಶನ ಕೈಗೊಂಬೆ, ಭಗವಂತನ ಇಚ್ಛೆ 'ನವಗ್ರಹ'ಗಳಲ್ಲಿ ನಿಹಿತವಾಗಿದೆ, ಅದನ್ನು ಪೂರ್ವಭಾವಿಯಾಗಿ ಇಣುಕಿ ನೋಡಿ ತನ್ನ ಭವಿಷ್ಯವನ್ನು ನಿಯಂತ್ರಿಸಿಕೊಳ್ಳಬಲ್ಲನೆಂಬ ಭ್ರಮೆ — ಈ ಪಂಚ ಭ್ರಮೆಗಳೇ ಫಲಜ್ಯೋತಿಷದ ಆಧಾರ ಸ್ತಂಭಗಳು. ನಿಸರ್ಗದಲ್ಲಿ ಆಧಾರವಿಲ್ಲದ, ಯಾವುದೇ ಋಜುಪ್ರಯೋಗಕ್ಕೆ ಒಳಪಡದ, ಕಾರ್ಯ-ಕಾರಣ ಸಂಬಂಧವನ್ನು ಎಲ್ಲಿಯೂ ಸ್ಥಾಪಿಸಲಾಗದ, ಸುಭದ್ರ ತಾರ್ಕಿಕ ಸಿದ್ಧಾಂತಕ್ಕೆ ಅಳವಡದ, ಪುನರಾವರ್ತನ ಶೀಲವಲ್ಲದ ಮತ್ತು ಸ್ವಯಂಚಿಕಿತ್ಸಕವಲ್ಲದ (nonself-correcting) ಫಲಜ್ಯೋತಿಷವು ವಿಜ್ಞಾನವೇ? ಸಾಹಿತ್ಯವೇ? ಮಾನವಿಕವೇ?

೧೫-೧೬ನೆಯ ಶತಮಾನದಷ್ಟು ಪೂರ್ವದಲ್ಲೇ ಭೂಕೇಂದ್ರ ವಾದವು ಅಸಂಬದ್ಧವೆಂದು ನಿರಾಕರಿಸಲ್ಪಟ್ಟು ಸೂರ್ಯಕೇಂದ್ರ ಸಿದ್ಧಾಂತ ಪ್ರತಿಷ್ಠಾಪಿತವಾಯಿತು. ಅಂದರೆ, ಭೂಮಿಯು ಸ್ಥಿರವಲ್ಲ, ವಿಶ್ವದ ಕೇಂದ್ರವಲ್ಲ! ಬದಲು, ಸೂರ್ಯ ಕೇಂದ್ರದಲ್ಲಿದ್ದು ಬುಧ, ಶುಕ್ರ, ಭೂಮಿ, ಕುಜ, ಗುರು, ಶನಿ (ತರುವಾಯದ ವರ್ಷಗಳಲ್ಲಿ ಆವಿಷ್ಕೃತವಾದ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೋ) ಗ್ರಹಗಳು ಸೂರ್ಯನನ್ನು ಪರಿಭ್ರಮಿಸುತ್ತಿವೆ ಎಂಬ ವಾಸ್ತವ ಚಿತ್ರ ಸಂದೇಹಾತೀತವಾಗಿ ಸಾಧಿತವಾಯಿತು. ಹೀಗೆ ಫಲಜ್ಯೋತಿಷದ ಸಾಕ್ಷಾತ್ ಅಡಿಪಾಯವೇ ವಿಜ್ಞಾನದ ಪ್ರವಾಹದಲ್ಲಿ ಕೊಚ್ಚಿಹೋಗಿದೆ.

ಹಾಗಾದರೆ ಅನಾದಿಕಾಲದಿಂದಲೂ ಫಲಜ್ಯೋತಿಷವೇಕೆ ಇಷ್ಟು ಜನಪ್ರಿಯವಾಗಿದೆ? ಹೌದು, ಪ್ರಾಚೀನ ಯುಗಗಳಿಂದಲೂ ಮನುಕುಲದ ನಿತ್ಯ ಸಂಗಾತಿಗಳಾಗಿ ಬಂದಿರುವ ಎರಡು ಪಿಡುಗುಗಳಿವೆ: ದೇಹಕ್ಕೆ ಅಂಟಿರುವ ಜಾಡ್ಯ – ವ್ಯಭಿಚಾರ; ಮನಕ್ಕೆ ಹಿಡಿದಿರುವ ಮೌಢ್ಯ – ಫಲಜ್ಯೋತಿಷ.

೨೦ನೆಯ ಶತಮಾನದ ೧೮೭ ಮಂದಿ ಪ್ರಪಂಚ ಪ್ರಸಿದ್ಧ ವಿಜ್ಞಾನಿಗಳು (ಇವರಲ್ಲಿ ಭಾರತ ಸಂಜಾತ ಖಭೌತ ವಿಜ್ಞಾನಿ ಎಸ್. ಚಂದ್ರಶೇಖರ್ (೧೯೧೦-೯೫), ಇವರೂ ಸೇರಿದಂತೆ ೧೯ ನೊಬೆಲ್ ಪ್ರಶಸ್ತಿ ಪುರಸ್ಕೃತರಿದ್ದಾರೆ) ೧೯೭೫ರಲ್ಲಿ ನೀಡಿರುವ ಪತ್ರಿಕಾ ಪ್ರಕಟಣೆ ಇಂದು (೨೦೦೧) ಹಿಂದೆಂದಿಗಿಂತಲೂ ಅಧಿಕ ಪ್ರಸ್ತುತವಾಗಿದೆ.

* * *

ಫಲಜ್ಯೋತಿಷಕ್ಕೆ ಇಂದು ಪ್ರಪಂಚದ ಅತಿಯಾದ ಕಡೆಗಳಲ್ಲಿ ತೀರ ಅತಿಯಾದ ಪುರಸ್ಕಾರ ಲಭಿಸುತ್ತಿರುವುದು ಕಂಡು ವಿವಿಧ ಕ್ಷೇತ್ರಗಳಲ್ಲಿರುವ ವಿಜ್ಞಾನಿಗಳು ಆತಂಕಗೊಂಡಿದ್ದಾರೆ. ಫಲಜ್ಯೋತಿಷಿಗಳು ಖಾಸಗಿಯಾಗಿ ಮತ್ತು ಸಾರ್ವಜನಿಕವಾಗಿ ನುಡಿಯುವ ಭವಿಷ್ಯವನ್ನೂ ನೀಡುವ ಸಲಹೆಯನ್ನೂ ಜನ ಪ್ರಶ್ನೆಗೆ ಒಳಪಡಿಸದೆ ಅಂಗೀಕರಿಸುವುದರ ವಿರುದ್ಧ ನಾವು – ಈ ಕೆಳಗೆ ರುಜು ಹಾಕಿರುವ ಖಗೋಳ ವಿಜ್ಞಾನಿಗಳು, ಖಭೌತ ವಿಜ್ಞಾನಿಗಳು ಹಾಗೂ ಇತರ ಕ್ಷೇತ್ರಗಳಲ್ಲಿಯ ವಿಜ್ಞಾನಿಗಳು – ಸಾರ್ವಜನಿಕರಿಗೆ ಎಚ್ಚರಿಕೆ ನೀಡಬಯಸುತ್ತೇವೆ. ಫಲಜ್ಯೋತಿಷವನ್ನು ನಂಬಬೇಕೆಂದಿರುವವರು, ಅದರ ಸಿದ್ಧಾಂತಗಳಿಗೆ ಯಾವುದೇ ವೈಜ್ಞಾನಿಕ ಅಡಿಪಾಯ ಇಲ್ಲ ಎಂಬುದನ್ನು ಮನಗಾಣಬೇಕು.

ಪ್ರಾಚೀನ ಕಾಲದಲ್ಲಿ ಜನ ಜಗತ್ತಿನ ಬಗ್ಗೆ ತಳೆದಿದ್ದ ನಿಗೂಢ ಐಂದ್ರಜಾಲಿಕ ಕಲ್ಪನೆಯ ಅವಿಭಾಜ್ಯ ಘಟಕವಾಗಿ ಫಲಜ್ಯೋತಿಷವೂ ಇತ್ತು. ಎಂದೇ ಅಂದಿನವರು ಫಲಜ್ಯೋತಿಷಿಗಳು ನುಡಿದ ಭವಿಷ್ಯವನ್ನೂ ನೀಡಿದ ಸಲಹೆಯನ್ನೂ ನಂಬಿದರು. ಆಕಾಶಕಾಯಗಳು ದೇವತೆಗಳ ನೆಲೆವನೆಗಳು ಅಥವಾ ಅವು ದೇವತೆಗಳಿಂದ ಪ್ರಸರಿಸಲ್ಪಡುವ ಶಕುನಗಳು ಮತ್ತು ಈ ಕಾರಣದಿಂದ ಅವು ಭೂಮಿಯಲ್ಲಿಯ ಘಟನೆಗಳೊಡನೆ ನಿಕಟವಾಗಿ ಬೆಸುಗೆಗೊಂಡಿವೆ ಎಂದು ಭಾವಿಸಿದರು. ಭೂಮಿಯಿಂದ ಗ್ರಹಗಳಿಗೆ ಇರುವ ಹಿರಿದೂರಗಳ ಅಂದಾಜೇ ಅವರಿಗಿರಲಿಲ್ಲ. ಈಗ ಆ ದೂರಗಳನ್ನು ಗಣಿಸಬಹುದು, ಗಣಿಸಲಾಗಿದೆ ಕೂಡ. ಆದ್ದರಿಂದ ದೂರದ ಗ್ರಹಗಳೂ ಇವುಗಳಿಂದ ಅವೆಷ್ಟೋ ಅಧಿಕ ದೂರಗಳಲ್ಲಿ ಹರಡಿಹೋಗಿರುವ ನಕ್ಷತ್ರಗಳೂ ಭೂಮಿಯಲ್ಲಿ ಉತ್ಪಾದಿಸುವ ಗುರುತ್ವಾಕರ್ಷಣೀಯ ಮತ್ತು ಇತರ ಪರಿಣಾಮಗಳು ಎಷ್ಟು ಅನಂತಾಲ್ಪ ಎಂಬುದನ್ನು ಈಗ ಅರಿಯಬಲ್ಲೆವು. ಜನನ ಕ್ಷಣದಲ್ಲಿ ನಕ್ಷತ್ರಗಳು ಮತ್ತು ಗ್ರಹಗಳು ನಮ್ಮ ಮೇಲೆ ಬೀರುವ ಬಲಗಳು ಯಾವುದೇ ರೀತಿಯಲ್ಲಿ ನಮ್ಮ ಭವಿಷ್ಯವನ್ನು ರೂಪಿಸಬಲ್ಲವೆಂದು ಊಹಿಸುವುದು ಕೂಡ ಶುದ್ಧಾಂಗ ಅವಿವೇಕ. ದೂರದ ಆಕಾಶಕಾಯಗಳ ಸ್ಥಾನಗಳು ಕೆಲವು ದಿವಸಗಳನ್ನು ಇಲ್ಲವೇ ಅವಧಿಗಳನ್ನು ವಿಶಿಷ್ಟ ಕೆಲಸಗಳಿಗೆ ಅಧಿಕ ಪ್ರಶಸ್ತವಾಗಿಸುವುವೆಂಬುದಾಗಲೀ ಒಬ್ಬ ವ್ಯಕ್ತಿಯ ಜನನ ತಾರೆ ಆತ ಇತರರೊಂದಿಗೆ ಸರಿಹೊಂದುವುದನ್ನು ಅಥವಾ ಹೊಂದದಿರುವುದನ್ನು ನಿರ್ಧರಿಸುವುದೆಂಬುದಾಗಲೀ ಖಂಡಿತ ನಿಜವಲ್ಲ.

ಫಲಜ್ಯೋತಿಷವನ್ನು ಜನ ಏಕೆ ನಂಬುತ್ತಾರೆ? ಇಂದಿನ ಅನಿಶ್ಚಿತ ಸನ್ನಿವೇಶಗಳಲ್ಲಿ ಯುಕ್ತ ನಿರ್ಧಾರ ತಳೆಯಲು ಯೋಗ್ಯ ಮಾರ್ಗದರ್ಶನ ಲಾಭ ತಮಗೆ ಅಗತ್ಯವೆಂಬುದು ಬಹುಮಂದಿಯ ಆಶಯ. ತಮ್ಮ ನಿಯಂತ್ರಣಕ್ಕೆ ಅಧೀನವಾಗಿರುವ ನಾಕ್ಷತ್ರಿಕ ಬಲಗಳಿಂದ ಪೂರ್ವನಿರ್ಧರಿತವಾದ ಅದೃಷ್ಟದಲ್ಲಿ ಭರವಸೆ ಇಡುವುದು ಅವರ ಅಪೇಕ್ಷೆ. ಪ್ರತಿ ವ್ಯಕ್ತಿಯೂ ಪ್ರಪಂಚವನ್ನು ಎದುರಿಸಲೇಬೇಕು; ಪ್ರತಿಯೊಬ್ಬನ ಭವಿಷ್ಯವೂ ಅವನ ಕೈಯ್ಯಲ್ಲಿದೆ. ಈ ಸಂಗತಿಗಳನ್ನು ಎಲ್ಲರೂ ತಿಳಿದಿರುವುದು ಅತ್ಯಗತ್ಯ.

ವರ್ತಮಾನ ದಿನಗಳಲ್ಲಿ ಜ್ಞಾನ ಮತ್ತು ವಿದ್ಯೆ ವ್ಯಾಪಕವಾಗಿ ಪಸರಿಸಿವೆ. ಅಂದಮೇಲೆ ಇಂದ್ರಜಾಲ ಮತ್ತು ಮೂಢ ಭಾವನೆಗಳ ಮೇಲೆ ನಿಂತಿರುವ ನಂಬಿಕೆಗಳ ಪೊಳ್ಳುತನವನ್ನು ಎತ್ತಿ ತೋರಿಸುವ ಅಗತ್ಯವೇನಿದೆ ಎಂದು ಒಬ್ಬ ಕೇಳಬಹುದು. ಆದರೆ ನಿಜಸ್ಥಿತಿ ಹೀಗಿಲ್ಲ: ಫಲಜ್ಯೋತಿಷವು ಆಧುನಿಕ ಸಮಾಜದಲ್ಲಿ ವ್ಯಾಪಕ ಪ್ರಸಾರ ಪಡೆದಿದೆ. ಫಲಜ್ಯೋತಿಷಿಗಳು ಒದಗಿಸುವ ಯಾದಿ, ಭವಿಷ್ಯವಾಣಿ ಮತ್ತು ಜಾತಕಗಳನ್ನು ಸಮೂಹ ಮಾಧ್ಯಮಗಳು ಮತ್ತು ಅನ್ಯತ್ರ ವಿಶ್ವಾಸಾರ್ಹ ದೈನಿಕಗಳು ಸಾಪ್ತಾಹಿಕಗಳು ಹಾಗೂ ಪುಸ್ತಕ ಪ್ರಕಾಶನಗಳು ಯಾವುದೇ ತೆರನಾದ ವಿಮರ್ಶೆಗೆ ಒಳಪಡಿಸದೆ ಸಂತತವಾಗಿ ಪ್ರಕಟಿಸುತ್ತಿರುವುದು ಕಂಡು ನಮಗೆ ವಿಶೇಷ-ಚಿಂತೆ ಆಗಿದೆ. ಇದರ ದುಷ್ಟ ಉಪೋತ್ಪನ್ನವಾಗಿ ವಿಚಾರಹೀನತೆ ಮತ್ತು ಅಂಧಶ್ರದ್ಧೆ ಪ್ರಬಲಿಸುವುದು ಖಾತ್ರಿ. ಫಲಜ್ಯೋತಿಷಿಗಳೆಂಬ ಢೋಂಗಿ ಮಂದಿಯ ಡೌಲು, ಅಬ್ಬರ, ಬೊಬ್ಬೆಗಳನ್ನು ನೇರವಾಗಿಯೂ ಶಕ್ತಿಯುತವಾಗಿಯೂ ವಿರೋಧಿಸಲು ಕಾಲ ಮಾಗಿದೆ ಎಂದು ಭಾವಿಸಿದ್ದೇವೆ.

ಫಲಜ್ಯೋತಿಷದಲ್ಲಿ ವಿಶ್ವಾಸವಿರುವ ಜನರಿಗೆ ಒಂದು ಸಂಗತಿ ಮನವರಿಕೆ ಮಾಡಿಕೊಡಬೇಕು: ಅವರ ನಂಬಿಕೆಗಳಿಗೆ ಆಧಾರವಾಗಿ ತಪಾಸಣೆಗೆ ಒಳಪಡಿಸಿದ ಯಾವುದೇ ವೈಜ್ಞಾನಿಕ ಸಾಕ್ಷ್ಯವಿಲ್ಲ; ನಿಜಕ್ಕೂ ಪ್ರಬಲ ವ್ಯತಿರಿಕ್ತ ಪುರಾವೆ ಉಂಟು.

* * *

ಈ ಸಂದೇಶ ಪ್ರಕಟವಾಗಿ ಕಾಲು ಶತಮಾನವೇ ಸಂದಿದೆ (೨೦೦೧). ವರ್ತಮಾನ ಪರಿಸ್ಥಿತಿ ಏನು? ಅಧಿಕ ಶೋಚನೀಯ. ವ್ಯಕ್ತಿಗಳು ಕುರಿಗಳಾದಾಗ ಜೋಯಿಸರು ಹುಲಿಗಳಾಗಿ ನರಭಕ್ಷಕರಾಗುತ್ತಾರೆ!

*ವಾಸ್ತವದ ನೈಜತೆಗೆ ಕುರುಡಾದ ಮೂರ್ಖರಿಗೆ*
*ಉತ್ತರಕುಮಾರಗೋತ್ರದ ನುಡಿಕನಸಿಗರಿಗೆ*
*ಸತ್ಯವನ್ನೆದುರಿಸುವ ಕೆಚ್ಚಿರದ ಹೇಡಿಗಳಿ-*
*ಗುತ್ತಮ ಶ್ರೀರಕ್ಷೆ ಜಾತಕವೂ ಅತ್ರಿಸೂನು*

**ಜಿ. ಟಿ. ನಾರಾಯಣರಾವ್**
೮, 'ಅತ್ರಿ', ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತೀಪುರ, ಮೈಸೂರು - ೫೭೦ ೦೦೯

# ಬದುಕುವ ಕಲೆ



**'ಮ**ನುಷ್ಯ ಸುಖವಾಗಿರಬೇಕಾದರೆ ಹೇಗಿರಬೇಕು ?' ಎನ್ನುವ ಪ್ರಶ್ನೆಯೊಂದು ಒಂದು ದಿನ ನನ್ನ ತಲೆ ಹೊಕ್ಕಿತು. 'ಸೋಮಾರಿ ಮನಸ್ಸು ಸೈತಾನನ ಕಾರಾಗಾರ' ಎನ್ನುವುದು ಸುಳ್ಳಲ್ಲ. ಪುರುಸೊತ್ತಾಗಿರುವಾಗ ಹೀಗೆ ಯಾವುದಾದರೊಂದು ಹುಳ ತಲೆಯಲ್ಲಿ ಬಿಟ್ಟುಕೊಂಡು ಆ ಕುರಿತು ಮನಸ್ಸಿನಲ್ಲೇ ತರ್ಕ, ವಿತರ್ಕಗಳಲ್ಲಿ ತೊಡಗುವುದು ನನ್ನ ದುರಭ್ಯಾಸ, ದೌರ್ಬಲ್ಯ.

'ಸಂದ ನಿನ್ನೆಯ, ಬರುವ ನಾಳೆಯ ಕುರಿತು ಯೋಚಿಸುವ ಗೊಡವೆ ಬಿಟ್ಟು ಇವತ್ತಿನ ವರ್ತಮಾನದಲ್ಲಿ ಬದುಕಬೇಕು', 'ನೆರೆಹೊರೆಯವರೊಡನೆ ಜಗಳ ಕಾಯುವ ಬುದ್ಧಿ ಬಿಡಬೇಕು', 'ಇದ್ದುದರಲ್ಲಿ ತೃಪ್ತಿ' ಇತ್ಯಾದಿ ಇತ್ಯಾದಿ ನಾನಾ ಉತ್ತರಗಳು ಹೊಳೆದವೆನ್ನಿ. ಇವುಗಳಲ್ಲಿ ಎಲ್ಲಕ್ಕಿಂತಾ ಹೆಚ್ಚು ಸಮಂಜಸವೆಂದು ನನಗೆ ಕಂಡದ್ದರ ಕುರಿತಾಗಿ ತಮ್ಮೊಂದಿಗೆ ಹಂಚಿಕೊಳ್ಳಬೇಕೆಂಬ ಆಶಯವೇ ನನ್ನ ಈ ಲೇಖನದ ಉದ್ದೇಶ. ನನ್ನ ಅನಿಸಿಕೆ ಮೇಲ್ನೋಟಕ್ಕೆ ಹಗುರ ಮನೋವೃತ್ತಿಯಿಂದ ಪ್ರೇರಿತವಾಗಿದ್ದೆಂದು ಗೋಚರಿಸಬಹುದಾದರೂ ಸ್ವಲ್ಪ ಯೋಚನೆ ಮಾಡಿದರೆ ಇದರಲ್ಲಿ ಅಡಗಿರುವ ಸತ್ಯ ಪ್ರಾಜ್ಞರಾದ ತಮಗೆ ಒಪ್ಪಿತವಾಗದೆ ಹೋಗಲಾರದು ಎನ್ನುವುದು ನನ್ನ ನಂಬಿಕೆ. ಸತ್ಯ ಹೇಳಲು ನನಗೆ ಯಾವುದೇ ಹಿಂಜರಿಕೆ ಇಲ್ಲ. ಆದ್ದರಿಂದ ಮುಚ್ಚುಮರೆ ಏಕೆ ? ಮೇಲಿನ ಪ್ರಶ್ನೆಗೆ ಸೂಕ್ತ ಉತ್ತರವನ್ನು, ಅಥವಾ ಸೂಕ್ತವೆಂದು ನಾನಂದುಕೊಂಡಿದ್ದನ್ನು ನಾನು ಕಂಡುಕೊಂಡಿದ್ದರ ಹಿನ್ನೆಲೆಯನ್ನು ಚುಟುಕಾಗಿ ಹೇಳಿಬಿಡುತ್ತೇನೆ. ಈ ಪ್ರಶ್ನೆಯ ಕುರಿತಾಗಿಯೇ ಯೋಚಿಸುತ್ತಾ, ಅನುದ್ದೇಶಪೂರ್ವಕವಾಗಿ ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತಿದ್ದೆ. ಮಟ ಮಟ ಮಧ್ಯಾಹ್ನ. ಹೊರಗೆ ನೆತ್ತಿ ಸುಡುವ ಬಿಸಿಲು. ಬಿಸಿಲಿಗೆ ಹೆದರಿಕೊಂಡಂತೆ ಎಂಬಂತೆ ವಿರಳವಾಗಿದ್ದ ಜನಸಂಚಾರ. ಈ ಬಿಸಿಲನ್ನು ಕಿಂಚಿತ್ತೂ ಗಣನೆಗೆ ತೆಗೆದುಕೊಳ್ಳದೆ ಎಮ್ಮೆಯೊಂದು ನಿಧಾನವಾಗಿ ನನ್ನ ಕಣ್ಣೆದುರು ಸಾಗಿಹೋಯ್ತು. ಆ ಕ್ಷಣದಲ್ಲಿ ವರನಟರ ಜನಪ್ರಿಯ ಎಮ್ಮೆಯ ಹಾಡು ಮನಸ್ಸಿನಲ್ಲಿ ಮಿಂಚಿತು. ನನ್ನ ಪ್ರಶ್ನೆಗೆ ಉತ್ತರ ಝಗ್ಗನೆ ಹೊಳೆಯಿತು. ಜ್ಞಾನೋದಯವಾದಂತೆ ಮನಸ್ಸಿಗೆ ರೋಮಾಂಚನವಾಯಿತು. 'ದಪ್ಪ ಚರ್ಮ, ಸುಖದ ಮರ್ಮ' ಎನ್ನುವ ಪ್ರಾಸಬದ್ಧವಾದ ಹೇಳಿಕೆ ತನ್ನಷ್ಟಕ್ಕೆ ಬಾಯಿಂದ ಉದುರಿಬಿತ್ತು. ಇದನ್ನು ವಿಶದೀಕರಿಸಿ ಹೇಳುವ ಆವಶ್ಯಕತೆ ಇಲ್ಲದಿದ್ದರೂ ಹಾಗೆ ಹೇಳಬೇಕು ಎನ್ನುವ ಉತ್ಸಾಹದ್ದು ಮೇಲುಗೈಯಾದ್ದರಿಂದ ನಾಲ್ಕು ಸಾಲು ಬರೆಯುತ್ತಿದ್ದೇನೆ. ನಿಮ್ಮ ಅಭಿಪ್ರಾಯ ಅಥವಾ ಅನುಭವ ಭಿನ್ನವಾಗಿದ್ದರೆ ನನ್ನ ಆಕ್ಷೇಪಣೆ ಇಲ್ಲ. ಲೋಕೋ ಭಿನ್ನರುಚಿಃ.

ಮೊದಲಿಗೆ ಸಾರ್ವಜನಿಕ ಕ್ಷೇತ್ರದಲ್ಲಿ ಸಕ್ರಿಯರಾಗಿರುವವರ ವಿಷಯವನ್ನು ತೆಗೆದುಕೊಳ್ಳೋಣ. ರಾಜಕಾರಣಕ್ಕೆ ಇಳಿಯುವವರು ಸೂಕ್ಷ್ಮ ಮನಸ್ಸಿನವರಾಗಿದ್ದರೆ ಮೂರು ದಿನ ಅಲ್ಲಿ ಬಾಳಲಾದೀತೇ ? ಟೀಕೆಗಳು, ನಿಂದೆಗಳು, ಪ್ರಹಾರಗಳು ಯಾವುದಕ್ಕೂ ಜಗ್ಗದೆ ಎದೆಯೊಡ್ಡಿ ನಿಲ್ಲುವಂತಾ ದಪ್ಪ ಚರ್ಮ ಅವರಿಗೆ ಅನಿವಾರ್ಯ. ಯಾರು ಏನೇ ಹೇಳಲಿ, ಯಾವ ಪತ್ರಿಕೆ ಬೇಕಾದ್ದು ಪ್ರಕಟಿಸಲಿ, ತಮಗಲ್ಲ ಎನ್ನುವಂತೆ ಕೊಡವಿಕೊಂಡು ಪ್ರತಿ ಟೀಕೆಗಳನ್ನು, ಹೇಳಿಕೆಯನ್ನು ತಿರುಚಿದ್ದಾರೆಂಬಂತಾ ಮಾತುಗಳನ್ನು, ಗಟ್ಟಿದನಿಯಲ್ಲಿ ಹೇಳಿಕೊಂಡು ಅಡ್ಡಾಡುವ ತಾಕತ್ತು ಬೇಕು. ಅಂತವರು ನಾಲ್ಕು ಕಾಲ ಅಲ್ಲಿ ಬಾಳಿಯಾರು. ಇದೇ ಮಾತು ಬಣ್ಣದ ಲೋಕಕ್ಕೂ ಅನ್ವಯಿಸುತ್ತದೆ. ನಟನಟಿಯರ ಬಗ್ಗೆ ಗಾಸಿಪ್ಪುಗಳು ಸರ್ವೇಸಾಮಾನ್ಯ. ಅವರನ್ನು 'ಬೇರೊಂದೇ ಲೋಕದ ಜನ' ಎನ್ನುವಂತೆ ಆರಾಧಿಸುವ ಮಂದಿಗೆ ಅವರ ಕುರಿತ ಸಣ್ಣದೊಂದು ವಿವರ ಕೂಡಾ ಕುತೂಹಲಕರ. ನಮ್ಮಂತಾ ಹುಲುಮನುಜರಂತೆ ಅವರು ವರ್ತಿಸುತ್ತಿದ್ದಾರೆಂದರೆ ಕಚಗುಳಿ. ಅವರ ಪ್ರೇಮ, ಮದುವೆ, ವಿಚ್ಛೇದನದಂತಾ ಸುದ್ದಿಗಳು ಕೆಲವೊಮ್ಮೆ ಪತ್ರಿಕೆಯ ಮುಖಪುಟವನ್ನು ಅಲಂಕರಿಸುವಷ್ಟು ಪ್ರಾಮುಖ್ಯತೆ ಪಡೆಯುವುದೂ ಉಂಟು. ಶ್ರೀಸಾಮಾನ್ಯನಿಗೆ ಅಚ್ಚಿನಲ್ಲಿ ಬಂದದ್ದೆಲ್ಲಾ ಪರಮ ಸತ್ಯ. ಈ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಹಲವು ರೋಚಕ ಸುದ್ದಿಗಳು ಸಿನಿಮಾ ಜಗತ್ತಿನ ಪತ್ರಿಕೆಗಳಲ್ಲಿ ಪ್ರಕಟವಾಗಿ ಅವನನ್ನು ಪುಳಕಿತಗೊಳಿಸುತ್ತವೆ. ಸಂಬಂಧಪಟ್ಟವರು ಎಲ್ಲದಕ್ಕೂ ಉತ್ತರಿಸುವುದು ಸಾಧ್ಯವಾಗುವಂಥದ್ದಲ್ಲ. ಅಲ್ಲದೆ, ಹೀಗೆ 'ಸುದ್ದಿಯಲ್ಲಿರುವುದು' ಅವರಿಗೂ ಪ್ರಿಯ ಎನ್ನುವ ಹೇಳಿಕೆ ಉಂಟೇ ಉಂಟು. ಸುದ್ದಿ ಎಂತಾದ್ದು ಎನ್ನುವುದರ ಮೇಲೆ ಬಹುಶಃ ಈ ಧೋರಣೆ ನಿರ್ಭರಗೊಂಡಿರಬಹುದು. ಸುದ್ದಿ ಚಾರಿತ್ರ್ಯವಧೆ ಮಾಡುವಂತಾದ್ದಾದರೆ ಅವರು ಪ್ರತಿರೋಧ ಸೂಚಿಸದೆ ಸುಮ್ಮನಿರಲಾರರು. ಒಮ್ಮೆ ಪ್ರಸಾರವಾದ ಅಥವಾ ಪ್ರಕಟಗೊಂಡ ಸುದ್ದಿಯ ಕುರಿತಾದ ಪ್ರತಿರೋಧ ಸಂಬಂಧಪಟ್ಟವರಿಂದಲೇ ಬಂದದ್ದಾದರೂ ಸಹ ಯಾರ ಕಿವಿಯನ್ನೂ ತಲುಪದೆ ಅರಣ್ಯರೋದನವಾಗಲೂ ಬಹುದು. ಯಾರು ಏನೇ ಬರೆಯಲಿ ಆ ಕುರಿತು ದಿವ್ಯ ನಿರ್ಲಕ್ಷ್ಯ ತಳೆದು ತಮಗಲ್ಲ ಎನ್ನುವಂತಿರಬೇಕಾದ್ದು ಇವರಂತವರಿಗೆ ಅನಿವಾರ್ಯ ಎನ್ನುವುದು ನನ್ನ ತಿಳುವಳಿಕೆ. ಸಾಹಿತ್ಯ ಕ್ಷೇತ್ರಕ್ಕೂ ಈ ಮಾತು ಸಲ್ಲುತ್ತದೆ. ಹೊಗಳಿಕೆ ಮಾತ್ರ ಬರಲಿ, ತೆಗಳಿಕೆ ಹತ್ತಿರ ಸುಳಿಯದಿರಲಿ ಎನ್ನುವ ನಿರೀಕ್ಷೆ ಇಲ್ಲಿ ಯಾರೂ ಇಟ್ಟುಕೊಳ್ಳುವಂತಿಲ್ಲ. ಒಬ್ಬರಿಗೆ ಪ್ರಿಯವಾಗಿದ್ದು ಇನ್ನೊಬ್ಬರಿಗೆ ಕಹಿ ಎನಿಸಬಹುದು. ಹೀಗೆ ಪ್ರಿಯ ಅಥವಾ ಅಪ್ರಿಯವಾಗಲು ನಾನಾ ಕಾರಣಗಳಿರಬಹುದು. ಕೆಲವು ಬರಹಗಾರರು ಈ ಥರದ ಗಣನೆಗೆ ಕೂಡಾ ಅರ್ಹರಲ್ಲವೆನ್ನುವಷ್ಟು ಮೂಲೆಗೆ ಒತ್ತರಿಸಲ್ಪಡಬಹುದು. ಒಂದೊಮ್ಮೆ ಇದು ನಿಜವಾದ ಮೌಲ್ಯಮಾಪನ ಕೂಡಾ ಆಗಿರಬಹುದು. ಬರೆಯಬೇಕೆಂಬ, ತನ್ಮೂಲಕ ಗುರ್ತಿಸಲ್ಪಡಬೇಕೆಂಬ ಚಪಲ ನಮಗೆ ಇದ್ದುದೇ ಆದಲ್ಲಿ ವಿಮರ್ಶೆಯ ಬಾಣದ ಮೊನಚು ಚರ್ಮವನ್ನು ಚುಚ್ಚದಿರುವಷ್ಟು ಚರ್ಮ ದಡ್ಡು ಬೀಳಬೇಕು. 'ನನ್ನ ಕೃತಿಗಳ ಕುರಿತು ಆರೋಗ್ಯಪೂರ್ಣ ಚರ್ಚೆ ನಡೆದಿಲ್ಲ' ಎನ್ನುವ ಸ್ವಾನುಕಂಪವನ್ನು ಬಿಟ್ಟು, 'ನನಗೆ ಬರುವುದು ಇಷ್ಟು. ನಾನು ಬರೆಯುವುದು ಹೀಗೆ. ನಿಮಗೆ ಇಷ್ಟವಾಗುತ್ತದೆಯೋ, ಬಿಡುತ್ತದೆಯೋ, ಅದರೊಡನೆ ನನ್ನ ಸಂಬಂಧ ಇಲ್ಲ....' ಎನ್ನುವ ನಿರ್ಲಿಪ್ತ ಮನೋಭಾವ ಬೆಳೆಸಿಕೊಳ್ಳಬೇಕು. ಹಾಗಿಲ್ಲದಿದ್ದಲ್ಲಿ ಮನೋವ್ಯಥೆ ತಪ್ಪಿದ್ದಲ್ಲ.

ಇದುವರೆಗೆ ಹೇಳಿದ್ದು ಸ್ವಲ್ಪ ಗಂಭೀರವಾಯ್ತು ಎನಿಸಿದರೆ ಕೊಂಚ ಲಘುವಾದ ವಿಷಯಕ್ಕೆ ಬರೋಣ.

**ವಸುಮತಿ ಉಡುಪ**

ತಮ್ಮೆಲ್ಲರ ಅನುಭವಕ್ಕೂ ಬಂದೇ ಇರುವ ಒಂದು ಸಮಾನ ಸಂಗತಿಯ ಬಗ್ಗೆ ಕೊಂಚ ಗಮನಹರಿಸೋಣ. ಮೊನ್ನೆ ಮೊನ್ನೆ ಒಂದು ಮದುವೆ ಮನೆಗೆ ಆದರದಿಂದ ಆಹ್ವಾನಿಸಲ್ಪಟ್ಟು ಅನಿವಾರ್ಯವಾಗಿ ಹೋಗಬೇಕಾದ ಪ್ರಸಂಗ ಬಂತು. ಆಗಲೇ ಒಂದು ಘಂಟೆಯ ಹತ್ತಿರ ಹತ್ತಿರ. ಹೊಟ್ಟೆ ಸಣ್ಣಗೆ ತಾಳ ಹಾಕುತ್ತಿತ್ತು. ಇಂತಾ ಸಮಾರಂಭಗಳಲ್ಲಿ ಪೊಗದಸ್ತಾಗಿ ಉಣ್ಣಬೇಕೆಂದೇ ಬೆಳಿಗ್ಗೆ ಲಘು ಉಪಾಹಾರ ಸ್ವೀಕರಿಸಿ ಹಸಿದ ಹೆಬ್ಬುಲಿಯಂತೆ ಬರುವವರ ಕುರಿತು ನನಗೆ ಮಾಹಿತಿ ಉಂಟು. ಸಣ್ಣ ಮೊಬಲಗಿನ ಕವರಾದರೆ ಮೇಲೆ ಹೆಸರು ಬರೆಯದೆ, ದೊಡ್ಡ ಮೊತ್ತದ್ದಾದರೆ ತಪ್ಪದೆ ಹೆಸರು ನಮೂದಿಸಿ, ಸರತಿಯ ಸಾಲಲ್ಲಿ ನಿಂತು ಮದುಮಕ್ಕಳಿಗೆ ಓದಿಸಿ, ಅವರ ಜೊತೆ ವಿಡಿಯೋಕ್ಕೆ ಮುಖ ಮಾಡಿ ಒಂದು ನಗೆ ಬರಿಸಿಕೊಂಡು, ನಂತರ ತರಾತುರಿಯಿಂದ ಊಟಕ್ಕೆ ಎಲೆ ಹಿಡಿಯುವ ಧಾವಂತ. ಉಡುಗೊರೆ ಕೊಡುವುದರ ಬಗ್ಗೆ ಕಟ್ಟಾ ವಿರೋಧಿಗಳೂ ಇದ್ದಾರೆ, ಆ ವಿಷಯ ಬಿಡಿ. ಆಗಲೇ ಮೊದಲ ಪಂಕ್ತಿ ಊಟಕ್ಕೆ ಕೂತಿತ್ತು. ಎರಡನೆಯದಕ್ಕಾಗಿ ಜನಜಂಗುಳಿ ಮಹಡಿಯ ಮೇಲಿದ್ದ ಭೋಜನಶಾಲೆಗೆ ಹೋಗುವ ದಾರಿಯಲ್ಲಿ ಇಡಿಕಿರಿದು ತುಂಬಿತ್ತು. ಮೈ ಬೆವರಿಟ್ಟರೂ ನಾನೂ 'ಗುಂಪಿನಲ್ಲಿ ಗೋವಿಂದ' ಆದೆ. ಎಲ್ಲರಲ್ಲೂ ಯಾವುದೋ ಸ್ಪರ್ಧೆಗೆ ಸಿದ್ಧರಾಗಿ ಕಾದು ನಿಂತವರ ಉದ್ವೇಗ, ಎದೆಗುದಿ. ಹಿಂದಿದ್ದವರು ಮುಂದೆ ನಿಂತವರನ್ನು ಗುರ್ತಿಸಿ, 'ಏ, ನಿಂಗೆ ಎಲೆ ಸಿಕ್ಕಿದ್ರೆ ನನಗೆ ಎರಡು ಜಾಗ ಹಿಡ್ದಿಡು' ಎಂದು ವಿನಂತಿಸುವ ಗೌಜು. ಎಲ್ಲರ ಕಣ್ಣು ಮಹಡಿಯ ಮೇಲೆ. ಯಾವಾಗ ಒಂದು ಜನ ಉಂಡ ಎಂಜಲು ಕೈ ಮುಂದೆ ಮಾಡಿಕೊಂಡು ಬಾಗಿಲ ಹೊರಗೆ ತಲೆ ಹಾಕಿತೋ ಇಲ್ಲಿ ವಿದ್ಯುತ್‌ಸಂಚಾರ. 'ಆಯ್ತು, ಆಯ್ತು' ಎನ್ನುತ್ತಾ ಎಲ್ಲಾ ಒಟ್ಟಿಗೆ ನುಗ್ಗಿದರು. ಆ ಕಡೆ ಮಹಡಿಯಿಂದ ಇಳಿದು ಬರುವವರು, ಈ ಕಡೆಯಿಂದ ಮೇಲೆ ಹೋಗುವವರು, 'ತಾಳ್ರೀ, ಸ್ವಲ್ಪ ಜಾಗ ಬಿಡ್ರೀ, ಅನ್ನ ಕಾಣ್ದೋರ ಹಾಗೆ ಮಾಡ್ತೀರಲ್ಲ ?' ಎಂದು ಗಡದ್ದು ಉಂಡು ಬರುತ್ತಿದ್ದವರೊಬ್ಬರ ಗದರಿಕೆ. ನಡುವೆ ಸಿಕ್ಕು ಚಟ್ನಿಯಾದ ಮಕ್ಕಳು ಮರಿಗಳ ಅಳು. ವಾಸ್ತವವಾಗಿ ಅನ್ನ ಕಾಣದ ಕಂಗಾಲರು ಅಲ್ಲಿ ಯಾರೂ ಇಲ್ಲ. ಆದರೂ ತಳ್ಳಾಟ. ಹಿಂದೆ ಬರುವಂತಿಲ್ಲ. ಮುಂದಕ್ಕಾದರೆ ನಮ್ಮ ಪ್ರಯತ್ನವೇ ಬೇಕಿಲ್ಲದೆ ತಳ್ಳಿಸಿಕೊಂಡು ಹೋಗಬಹುದು. ಅಲ್ಲೋ, ಇನ್ನೂ ಎಂಜಲು ಎಲೆ ತೆಗೆಯುವ ಮುಂಚೆ ಜನ ಜಾಗ ಹಿಡಿದು ಕೂತುಬಿಟ್ಟಿದ್ದಾರೆ. ಕರ್ಚೀಫು, ಟವೆಲ್ಲು ಹರಡಿ ಉದ್ದಾನುದ್ದಕ್ಕೆ ಕೆಲವು ಸೀಟುಗಳು ಕಾದಿರಿಸಲ್ಪಟ್ಟಿವೆ. ಇಂಥಾ ಕಡೆಗಳಲ್ಲಿ ಊಟ ಗಿಟ್ಟಿಸಬೇಕೆಂದರೆ ಎಗ್ಗು, ಸಿಗ್ಗುಗಳಿಲ್ಲದೆ ಮುನ್ನುಗ್ಗುವ ಭಂಡತನ ಬೇಕು ಅಥವಾ ಘಂಟೆ ನಾಲ್ಕಾದರೂ ಕಾದು ಕೂತು ಹೋಳಿಲ್ಲದ ಹುಳಿ, ನೀರು ಮಜ್ಜಿಗೆ ಮುಂತಾದ ಉಳಿದದ್ದು ಪಳಿದದ್ದನ್ನು ಉಂಡು ತೃಪ್ತಿ ಪಡಬೇಕು ಅಥವಾ ಎರಡೂ ಬೇಡವೆಂದರೆ ಮರ್ಯಾದೆಯಾಗಿ ನಮ್ಮ ನಮ್ಮ ಮನೆಗಳಿಗೆ ಹೋಗಿ ಊಟ ಮಾಡಬೇಕು. ನಾನೇನು ಮಾಡಿದೆ ಎನ್ನುವುದು ಗುಟ್ಟು, ಊಹಿಸಿ. ಇನ್ನು ಇಪತ್ತ್ನ

ಶೋಕಿಯಾದ ಬಫೆಯ ಬಗ್ಗೆ ಕೂಡಾ ನನ್ನ ಕೆಲವು ತಕರಾರುಗಳುಂಟು. ಕೈಯಲ್ಲಿ ತಟ್ಟೆ ಹಿಡಿದು ಮುಂದೆ ಮುಂದೆ ಹೋಗುತ್ತಿದ್ದರೆ, 'ಅಮ್ಮಾ, ತಾಯಿ...' ಎಂದು ಬಾಯಲ್ಲೊಂದು ಹೇಳದೆ ಮುನ್ನಡೆಯುತ್ತಿದ್ದೇವೆ ಎಂದು ಕೆಲವರಿಗಾದರೂ ಅನಿಸೀತು. ನಿಂತೇ ಉಣ್ಣಬೇಕು, ಮಾತ್ರವಲ್ಲ, ತಿರುಗಿ ಇನ್ನೇನಾದರೂ ಬೇಕಾದರೆ ಎರಡನೆಯ ಸಲ, ಮೂರನೆಯ ಸಲ, ಹೋಗಿ ಹಾಕಿಸಿಕೊಂಡು ಬರುವಲ್ಲಿ ಸಂಕೋಚ ಅಡ್ಡಬರಬಹುದು. ಅದಕ್ಕೇ ಹೇಳಿದ್ದು, ಹೊಟ್ಟೆ ತುಂಬಬೇಕಾದರೆ ದಾಕ್ಷಿಣ್ಯ ಇರಬಾರದು. ಸಲಾಸಲ ಹೋಗಿ ತಟ್ಟೆ ಮುಂದೆ ಮಾಡುವಾಗ ಬಡಿಸುವವನು ಸ್ವಲ್ಪ ಹೆಚ್ಚು ನಮ್ಮನ್ನು ಗಮನಿಸಿದ ಅನ್ನುವ ಊಹೆಯಿಂದ ದಣಿಯಬಾರದು. ಊಟದ ಪಂಕ್ತಿ ಹಿಡಿಯುವುದಿರಲಿ, ಬಸ್ಸಿನ ಸೀಟು ಹಿಡಿಯುವುದಿರಲಿ, ಪರಿಚಿತರು ಯಾರಾದರೂ ನಮ್ಮನ್ನು ನೋಡಿದರೆ ಎನ್ನುವ ಆತಂಕ, ನಮ್ಮ ಬಗೆಗೆ ನಾವೇನೋ ದೊಡ್ಡ ಮನುಷ್ಯರು, ನಯಾ ನಾಜೂಕಿನವರು ಎನ್ನುವ ಭ್ರಮೆ ಕೂಡದೇ ಕೂಡದು. ಸೂಕ್ಷ್ಮವಾಗಿದ್ದರೆ ಯಾರೂ ನಮ್ಮನ್ನು ಮುಂದೆ ಕರೆದು ಮಣೆ ಹಾಕಿ ಕೂರಿಸುವುದಿಲ್ಲ. 'ಯಾರೇನೆಂದರೆ ನನಗೇನು ?' ಎನ್ನುವ ದಪ್ಪ ಚರ್ಮ ಬೆಳೆಸಿಕೊಳ್ಳದಿದ್ದರೆ ಹಿಂದೆ ಉಳಿಯುವುದು ತಪ್ಪಿದ್ದಲ್ಲ. ನಮ್ಮಲ್ಲಿ ಸಣ್ಣ ಪುಟ್ಟ ವಿಷಯಗಳಿಗೂ ಕೊರಗು ಹಚ್ಚಿಕೊಂಡು ನರಳುವವರ, ಕೆಲವೊಮ್ಮೆ ಪ್ರಾಣ ಕಳೆದುಕೊಳ್ಳುವವರ ಸಂಖ್ಯೆ ಕಡಿಮೆ ಪ್ರಮಾಣದ್ದೇನಲ್ಲ. ಉದಾಹರಣೆಗೆ, ಟೆಸ್ಟಿನಲ್ಲಿ ಒಂದು ಮಾರ್ಕು ಕಡಿಮೆ ತೆಗೆದು ಮಗು ಸೆಕೆಂಡ್ ರ್‍ಯಾಂಕ್ ಬಂದರೆ ಗುಡ್ಡ ಜರಿದು ತಲೆಯ ಮೇಲೆ ಬಿದ್ದಂತೆ ಚಿಂತೆ ಹಚ್ಚಿಕೊಳ್ಳುವವರುಂಟು. ಪಾಪದ ಮಗುವೊಂದು ಇದೇ ಕಾರಣದಿಂದ ವಿಷ ಕುಡಿದು ಸತ್ತದ್ದೂ ಇದೆ. ಎಸ್ಸೆಸ್ಸೆಲ್ಸಿ, ಪಿಯುಸಿಯ ಫಲಿತಾಂಶ ಪ್ರಕಟವಾದ ನಂತರದ ಕೆಲ ದಿನಗಳಲ್ಲಿ ಪತ್ರಿಕೆಗಳಲ್ಲಿ ದಿವಸಾ ಎನ್ನುವಂತೆ ಫೇಲಾಗಿ ಆತ್ಮಹತ್ಯೆ ಮಾಡಿಕೊಂಡವರ ಸುದ್ದಿ ಪ್ರಕಟವಾಗುತ್ತಿರುತ್ತದೆ. ಮನೆ ಬಿಟ್ಟು ಓಡಿಹೋದವರನ್ನು ತಿರುಗಿ ಬರುವಂತೆ ಓಲೈಸುವ ಪತ್ರಗಳಿಗೂ ಬರಗಾಲವಿಲ್ಲ. ಪರೀಕ್ಷೆಯ ಸೋಲು, ಪ್ರೇಮ ಪ್ರಕರಣ, ನಿರುದ್ಯೋಗ ಮುಂತಾದ ಕಾರಣಗಳಿಂದ ಜೀವನದಲ್ಲಿ ಜಿಗುಪ್ಸೆ ತಳೆಯುವ ಮಂದಿ ಕೊಂಚ ದೃಢ ಮನಸ್ಸು ಬೆಳೆಸಿಕೊಂಡು ಭವಿಷ್ಯದ ಬಗ್ಗೆ ಆಶಾಭಾವನೆ ತಳೆದರೆ ಮುಂದೆ ಒಳ್ಳೆಯ ದಿನಗಳು ಬಾರದೆ ಇರುವುದಿಲ್ಲ. ಬದುಕು ನಾವೆಂದುಕೊಂಡಷ್ಟು ಕ್ರೂರವಾದದ್ದಲ್ಲ. ಯಾವ ಒಂದು ಸ್ಥಿತಿಯೂ ಬದಲಾಗದೆ ಹಾಗೇ ಉಳಿಯುವುದಿಲ್ಲ. ಚಕ್ರ ತಿರುಗುತ್ತಿರುತ್ತದೆ ಎನ್ನುವುದು ಗಮನದಲ್ಲಿರಬೇಕು. ಯಾರೇನೆನ್ನುತ್ತಾರೆ ಅನ್ನುವ ಕುರಿತಾದ ಅತಿರಂಜಿತ ಕಲ್ಪನೆ ಆರೋಗ್ಯಪೂರ್ಣವಾದದ್ದಲ್ಲ. 'ನಮ್ಮ ಬದುಕು ನಮ್ಮದು' ಎನ್ನುವ ವಿಶ್ವಾಸ ಇರಬೇಕು. ಬದುಕಬೇಕೆನ್ನುವವರಿಗೆ ನೂರು ದಾರಿ. ಧಾರಾವಾಹಿಯೊಂದರ ಶೀರ್ಷಿಕೆಯ ಹಾಡಿಗೂ ತಲೆ ಕೆಡಿಸಿಕೊಳ್ಳುವಷ್ಟು ನಾವು ಸೂಕ್ಷ್ಮವಾಗಿದ್ದರೆ ಬದುಕನ್ನು ಎದುರಿಸಲಾದೀತೇ ? ವ್ಯಂಗ್ಯದ ಮಾತಾಡುವವರೆದುರು ಸಡ್ಡು ಹೊಡೆದು ನಿಲ್ಲಬೇಕು. ಸಾಧಿಸಿ ತೋರಿಸಬೇಕು. ಈ ಥರದ ಸಕಾರಾತ್ಮಕ ಭಾವನೆಯೇ ಬಹಳಷ್ಟು ಶಕ್ತಿ ಕೊಡುತ್ತದೆ. ಹಾಸ್ಯದ, ವ್ಯಂಗ್ಯದ, ಬೇಕೆಂದೇ ಕೆಣಕುವ ಮಾತುಗಳನ್ನು ನಿರ್ಲಕ್ಷಿಸುವುದು ಯಾವತ್ತೂ ಅಪೇಕ್ಷಣೀಯ. ಕಾಲೇಜು ಉಪನ್ಯಾಸಕರ ಉದಾಹರಣೆ ತೆಗೆದುಕೊಂಡರೆ ಒಬ್ಬೊಬ್ಬರಿಗೂ ಒಂದೊಂದು ಅಡ್ಡ ಹೆಸರು. ಅವರು ನಡೆಯುವ, ನುಡಿಯುವ, ಕ್ರಿಯೆಗಳ ಅಣಕಾಟ. ಹದಿವಯಸ್ಸಿನ ಈ ಚೇಷ್ಟೆಗಳಿಗೆ ಸಿಟ್ಟಾದರೆ ಬಿ.ಪಿ. ಏರೀತಷ್ಟೇ ವಿನಾ ಹುಡುಗರ ಬಾಯಿ ಮುಚ್ಚಲಾದೀತೇ ? ಇಂಥವು ಸಹಜ ಎನ್ನುವಂತೆ ನಕ್ಕು ಅವನ್ನು ಸ್ವೀಕರಿಸಿಬಿಟ್ಟರೆ ನಿಶ್ಚಿಂತೆ. ಬಂಧುಬಳಗದವರಲ್ಲಿ ಒಬ್ಬರು ಏನೋ ಹೇಳಿದರೆಂದು ಇನ್ನೊಬ್ಬರು ಅದನ್ನು ತಂದು ತಲುಪಿಸುವ ಕ್ರಿಯೆ ಸರ್ವೇಸಾಮಾನ್ಯ. ಆ ಸುದ್ದಿಯ ಬಾಲ ಹಿಡಿದು ಬಡಿದಾಡಲು ಹೋದರೆ ವೃಥಾ ಮನಸ್ತಾಪ, ನಿದ್ದೆಗೇಡು. ಅವಗಣನೆಯೊಂದೇ ಇದಕ್ಕೆ ಮದ್ದು. 'ಅವರು ನನ್ನನ್ನೇ ನೋಡಿ ಏನೋ ಆಡಿಕೊಂಡು ನಕ್ಕರು' ಎನ್ನುವ ಸಂಶಯ ಹಚ್ಚಿಕೊಂಡು ನರಳುವ ಮಂದಿಯೂ ನಮ್ಮ ನಡುವೆ ಇದ್ದಾರೆ. ಪ್ರತಿಯೊಂದು ವಿಷಯಕ್ಕೂ 'ಅವರು ಏನೆಂದಾರು ? ಇವರು ಏನೆಂದಾರು ?' ಎಂದು ಮೀನಾಮೇಷ ಎಣಿಸುವ ಜನ ಏನನ್ನೂ ಸಾಧಿಸಲಾರರು. ಈ ಥರದ ಅತಿರೇಕಗಳು ಕೀಳರಿಮೆಯ ದ್ಯೋತಕಗಳೆನ್ನುವ ವಾದವೂ ಇದೆ. ದಪ್ಪಚರ್ಮದವರು ಮನೋರೋಗಿಗಳಾಗುವ ಸಂಭವ ಕಡಿಮೆ. ಯಾವ ಸಂಗತಿಗೂ ಅವರು ಅನಗತ್ಯ ಮಹತ್ವ ಕೊಟ್ಟು ಅದನ್ನೇ ಮೆಲಕು ಹಾಕುತ್ತಾ ತಲೆ ಕೆಡಿಸಿಕೊಳ್ಳುವುದಿಲ್ಲ. ಹೀಗೆ ಹೇಳುತ್ತಾ ಹೋದರೆ ಲೇಖನ ಹನುಮಂತನ ಬಾಲವಾಗುವ ಸಾಧ್ಯತೆ ಇರುವುದರಿಂದ ಇಷ್ಟಕ್ಕೆ ಕೈದು ಮಾಡುತ್ತೇನೆ. ನೆರೆಮನೆಯ ಹುಡುಗಿಯೊಂದು ಒಮ್ಮೆ ಸ್ಕೂಲಿನಿಂದ ಅಳುತ್ತಾ ಮನೆಗೆ ಬಂತು.

'ಯಾಕೆ ಪುಟ್ಟಿ ? ಏನಾಯ್ತು ?' ಎಂದು ಅಮ್ಮ ರಮಿಸಿ ಕೇಳಿದರು.

'ನಂಗೆ ಬೆಕ್ಕಿನ ಕಣ್ಣು ಅಂತ ಎಲ್ಲಾ ಆಡ್ಕೊಂಡು ನಗ್ತಾರೆ, ಚಾಳಿಸ್ತಾರೆ' ಅಂತು ಹುಡುಗಿ.

'ನಿಂಗೆ ಬೆಕ್ಕಿನ ಕಣ್ಣಿರೋದು ಹೌದಲ್ವಾ ಪುಟ್ಟೀ ? ಆಡ್ಕೊಳ್ಲಿ ಬಿಡು, ಅದಕ್ಕೆಲ್ಲಾ ಅಳ್ತಾರಾ ? ಹೌದು, ನಂಗೆ ಬೆಕ್ಕಿನ ಕಣ್ಣು ಅಂದ್ಬಿಡು' ಅಮ್ಮ ಮಗಳನ್ನಪ್ಪಿ ಮುದ್ದಿಟ್ಟರು. ಮಗು ಅಳು ನಿಲ್ಲಿಸಿ ನಕ್ಕಿತು. ಅದರ ಅಮ್ಮ ಬೇರೆ ಮಕ್ಕಳ ಮೇಲೆ ಚೂರೂ ಅಸಮಾಧಾನ ತೋರಿಸದೆ ತಮ್ಮ ಮಗಳಿಗೆ ಸಾಂತ್ವನ ಹೇಳಿದ ಕ್ರಮ ಅನುಕರಣೀಯ ಎನಿಸಿತು. ಹೇಗೆ ಬದುಕಬೇಕೆಂಬ ಪಾಠವನ್ನು ಬಾಲ್ಯದಿಂದಲೇ ಆಕೆ ಕಲಿಸಿಕೊಡುತ್ತಿದ್ದಾರೆ ಅನ್ನಿಸಿ ಆಕೆಯ ಬಗ್ಗೆ ಮೆಚ್ಚುಗೆ ಮೂಡಿತು. 'ಆಡ್ಕೊಳ್ಲಿ ಬಿಡಿ, ಅದ್ರಿಂದೇನಾಗುತ್ತೆ ?' ಎನ್ನುವ ದಪ್ಪ ಚರ್ಮ ಎಲ್ಲರಿಗೂ ಅತ್ಯಗತ್ಯವಾದದ್ದು ಅನ್ನಿಸಿತು.

ಮಮತಿ ಉಡುಪ
'ಗೌರಿ', ೪ನೇ ಕ್ರಾಸ್, ಎ, ಗಾಂಧಿನಗರ ಬಡಾವಣೆ
ಶಿವಮೊಗ್ಗ - ೫೭೭೨೦೧



# ಮರೆಯಬಾರದು ಒಲವ

ನನಗೀಗ ಮೂವತ್ತು ವರ್ಷ. ನಮ್ಮ ದೇಶಕ್ಕೂ ಅದೇ ವಯಸ್ಸು. ಒಂದು ರಾಷ್ಟ್ರಕ್ಕೆ ಮೂವತ್ತು ಇನ್ನೂ ಚಿಕ್ಕ ವಯಸ್ಸು. ಆದರೆ ಮೂವತ್ತರ ಒಂದು ಹುಡುಗಿ ನಮ್ಮ ಸಮಾಜದಲ್ಲಿ ಮೂಲೆ ಪಾಲಾದಂತೆಯೇ.

ನಿಜ ಹೇಳಬೇಕಾದರೆ ನನಗೊಬ್ಬ ಅರ್ಹ ವರನಿದ್ದಾನೆ. ನೀವು ಗ್ರೀಕ್ ಶಿಲ್ಪಿ ಮೈರಾನನ ಡಿಸ್ಕೊಬಲಸನ್ನು ನೋಡಿದ್ದೀರಾ ? ಕ್ರಿಯೋಲಿನ್ ಆ ಡಿಸ್ಕಸ್ ಎಸೆಯುವವನ ತದ್ರೂಪ. ಚಳಿಗಾಲದಲ್ಲಿ ಅವನು ಧರಿಸುವ ದಪ್ಪ ಬಟ್ಟೆಗಳು ಕೂಡಾ ಅವನ ದೇಹದಾರ್ಢ್ಯವನ್ನು ಮುಚ್ಚಲಾರವು. ಕಂಚಿನಿಂದ ಕಡೆದಂತಿರುವ ಆಕೃತಿ, ವಿಶಾಲ ಹಣೆ ಮತ್ತು ದೊಡ್ಡ ಕಣ್ಣುಗಳು - ಅವನು ವ್ಯಕ್ತಿತ್ವ ಮಾತ್ರದಿಂದಲೇ ಅನೇಕ ಹುಡುಗಿಯರನ್ನು ಆಕರ್ಷಿಸಬಲ್ಲ.

ಆದರೆ ನಾನು ಅವನನ್ನು ಮದುವೆಯಾಗುವ ಬಗ್ಗೆ ನಿರ್ಧರಿಸಲಾರೆ. ನನ್ನನ್ನು ಅವನತ್ತ, ಅವನನ್ನು ನನ್ನತ್ತ ಆಕರ್ಷಿಸುವ ಅಂಶವೇನೆಂಬುದು ನನಗೆ ಸ್ಪಷ್ಟವಾಗಿಲ್ಲ.

ನನಗೆ ಗೊತ್ತಿದೆ; ಮಂದಿ ನನ್ನ ಬೆನ್ನ ಹಿಂದೆ ಆಡಿಕೊಳ್ಳುತ್ತಾರೆ: 'ಅಷ್ಟು ಆಯ್ಕೆ ಮಾಡುವುದಕ್ಕೆ ಅವಳು ತನ್ನನ್ನೇನೆಂದುಕೊಂಡಿದ್ದಾಳೆ ?'

ಅವರ ದೃಷ್ಟಿಯಲ್ಲಿ ನಾನು ಯಾರಿಗೂ ಒಲಿಯದ ಒಂದು ಸಾಮಾನ್ಯ ವ್ಯಕ್ತಿ. ಇಂಥ ನಡತೆಯನ್ನು ಅವರು ಅಪರಾಧವೆಂದು ತಿಳಿಯುತ್ತಾರೆ.

ಹಾಗೆ ನೋಡಿದರೆ ನಾನು ದೋಷಗಳನ್ನು ಹುಡುಕಬಾರದು. ವ್ಯಾವಹಾರಿಕ ಉತ್ಪಾದನೆ ಇನ್ನೂ ಜೀವಂತವಿರುವ ಸಮಾಜದಲ್ಲಿ ಮದುವೆಯೂ ಒಂದು ವಿನಿಮಯ ವ್ಯಾಪಾರವೇ.

ಕ್ರಿಯೋಲಿನ್‌ನನ್ನು ನಾನು ಸುಮಾರು ಎರಡು ವರ್ಷಗಳಿಂದಲೂ ಬಲ್ಲೆ. ಆದರೆ ಅವನು ಮಾತು ಇಷ್ಟವಿಲ್ಲದೇ ಸುಮ್ಮನಿದ್ದಾನೋ ಅಥವಾ ಅವನಿಗೆ ಹೇಳುವುದಕ್ಕೆ ಏನೂ ಇಲ್ಲವೋ ಎಂಬುದು ನನಗಿನ್ನೂ ಗೊತ್ತಾಗಿಲ್ಲ. ಒಮ್ಮೊಮ್ಮೆ ಅವನ ಬುದ್ಧಿಮತ್ತೆಯನ್ನು ಪರೀಕ್ಷಿಸುವವರಂತೆ ನಾನು ಅದರ ಇದರ ಬಗ್ಗೆ ಅಭಿಪ್ರಾಯ ಕೇಳಿದರೆ ಅವನು 'ಚೆನ್ನಾಗಿದೆ' ಅಥವಾ 'ಚೆನ್ನಾಗಿಲ್ಲ' ಎಂದು ಕಿಂಡರ್ ಗಾರ್ಟನ್ ಮಕ್ಕಳಂತೆ ಉತ್ತರ ಹೇಳುತ್ತಾನೆ.

ಒಮ್ಮೆ ನಾನು ಕೇಳಿದೆ: 'ಕ್ರಿಯೋಲಿನ್, ನೀನ್ಯಾಕೆ ನನ್ನ ಪ್ರೀತಿಸ್ತಿ ?'

ಅವನು ಈ ಪ್ರಶ್ನೆಗೆಷ್ಟು ಗಂಭೀರವಾಗಿ ಯೋಚಿಸಿದನೆಂದರೆ ನನಗದೊಂದು ಯುಗವೇ ಅನ್ನಿಸಿತು. ಅವನ ಮಾಮೂಲಾಗಿ ಸಮತಟ್ಟಾಗಿರುವ ಆದರೆ ಈಗ ನಿರಿಗೆ ಮೂಡಿದ ಹಣೆಯಿಂದ ಅವನ ತಲೆಯೊಳಗಿನ ಕೋಶಗಳು ಆಳವಾಗಿ ಚಿಂತಿಸುವತ್ತ ಕಾರ್ಯಪ್ರವೃತ್ತವಾಗಿವೆಯೆಂಬುದು ಕಾಣಿಸುತ್ತಿತ್ತು. ಅವನನ್ನು ಇಕ್ಕಟ್ಟಿಗೆ ಹಾಕಿದ್ದಕ್ಕೆ ನನಗೆ ನಾಚಿಕೆಯಾಯಿತು.

ಕೊನೆಗೂ ಅವನು ಮುಗ್ಧ ಕಣ್ಣುಗಳನ್ನೆತ್ತಿ ನನಗೆಂದ, 'ನೀನು ಒಳ್ಳೆಯವಳು, ಅದಕ್ಕೆ !'

ಒಂಟಿತನ ನನ್ನ ಹೃದಯದಲ್ಲಿ ಹರಿಯಿತು. ನಾನೆಂದೆ - 'ಧನ್ಯವಾದ, ಕ್ರಿಯೋಲಿನ್ !'

**ಮೂಲ ಚೀನಿ : ಜಾಂಗ್ ಜೈ**

ನಾವು ಮದುವೆಯಾದರೆ ಗಂಡಹೆಂಡತಿಯರಾಗಿ ನಮ್ಮ ಜವಾಬ್ದಾರಿಯನ್ನು ನಿರ್ವಹಿಸಬಲ್ಲೆವೇ ಎಂದು ನಾನು ಆಶ್ಚರ್ಯಪಡದಿರಲಾಗಲಿಲ್ಲ. ನಿರ್ವಹಿಸ ಬಹುದು. ಏಕೆಂದರೆ ಕಾನೂನು ಮತ್ತು ನೈತಿಕತೆ ನಮ್ಮನ್ನೊಟ್ಟಿಗಿಟ್ಟೀತು. ಆದರೆ ಕಾನೂನು ಮತ್ತು ನೈತಿಕತೆಗೆ ಮಾತ್ರ ಬದ್ಧರಾಗಿರುವುದು ಎಂಥ ದುರಂತ ! ಇದಕ್ಕಿಂತ ಗಟ್ಟಿಯಾದ ಕೊಂಡಿ ಯಿಲ್ಲವೇ ನಮ್ಮನ್ನು ಜೋಡಿಸುವುದಕ್ಕೆ ?

ಇಂಥ ಯೋಚನೆಗಳು ಮನಸ್ಸನ್ನು ಹಾದು ಹೋದಾಗ ನನ್ನೊಳಗೆ ನಾನು ಮದುವೆಯ ಹರೆಯದ ಹುಡುಗಿ ಅನ್ನಿಸುವುದಕ್ಕಿಂತ ಹೆಚ್ಚಾಗಿ ಒಬ್ಬಳು ಹಿರಿಯ ಸಮಾಜ ವಿಜ್ಞಾನಿಯೆಂದನ್ನಿಸುತ್ತದೆ.

ಬಹುಶಃ ನಾನು ತುಂಬಾ ಚಿಂತಿಸುತ್ತಿದ್ದೇನೆ. ನಾವು ಎಲ್ಲ ವಿವಾಹಿತರಂತೆ ಬದುಕಬಹುದು. ಮಕ್ಕಳನ್ನು ಬೆಳೆಸಬಹುದು. ಕಾನೂನಿನ ಕಣ್ಣಲ್ಲಿ ಒಬ್ಬರಿಗೊಬ್ಬರು ನಿಷ್ಠರಾಗಿರಬಹುದು... ಈ ಇಪ್ಪತ್ತನೇ ಶತಮಾನದ ಏಳನೇ ದಶಕದಲ್ಲಿ ಬದುಕುತ್ತಿದ್ದರೂ ಜನ ಇನ್ನೂ ಮದುವೆಯನ್ನು ಮಿಲಿಯ ವರ್ಷಗಳ ಹಿಂದೆ ಕಾಣುತ್ತಿದ್ದಂತೆಯೇ, ವ್ಯವಹಾರದಲ್ಲಿಯಂತೆ ಪ್ರೀತಿ ಮತ್ತು ಮದುವೆಯನ್ನು ಪ್ರತ್ಯೇಕಿಸಿ ಮತ್ತು ಮನುಷ್ಯಕುಲವನ್ನು ಬೆಳೆಸುವ ಸಾಧನದಂತೆ ಕಾಣುತ್ತಿದ್ದಾರೆ. ಇದೇ ಮಾಮೂಲಾಗಿರುವಾಗ ನಾವೂ ಅದನ್ನೇಕೆ ಅನುಸರಿಸಬಾರದು ?

ಆದರೆ ನನಗಿನ್ನೂ ಯಾವ ನಿರ್ಧಾರಕ್ಕೂ ಬರಲಾಗಿಲ್ಲ. ನನಗಿನ್ನೂ ನೆನಪಿದೆ, ನಾನು ಮಗುವಾಗಿದ್ದಾಗ ವಿನಾಕಾರಣ ಇಡೀ ರಾತ್ರಿ ಮನೆಯವರಿಗೆಲ್ಲ ರಂಪವಾಗುವ ಹಾಗೆ ನಿದ್ರಿಸದೇ ಅಳುತ್ತಿದ್ದೆ. ಅವಿದ್ಯಾವಂತೆಯಾಗಿದ್ದರೂ ಬುದ್ಧಿ ಸೂಕ್ಷ್ಮವಿದ್ದ ನನ್ನ ಹಳೇ ಆಯಾ ಯಾವುದೋ ಕ್ಷುದ್ರ ದೆವ್ವ ನನಗೆ ಕಾಟ ನೀಡುತ್ತಿದೆಯೆನ್ನುತ್ತಿದ್ದಳು. ಈ ತೀರ್ಮಾನ ಸರಿಯಿರಬಹುದೆಂದು ಅನ್ನಿಸುತ್ತದೆ, ಏಕೆಂದರೆ ಈ ಹಳೆಯ ದೋಷ ನನ್ನಲ್ಲಿನ್ನೂ ಇದೆ. ನನಗೆ ಸಮಸ್ಯೆಯೇ ಅಲ್ಲದ ಸಂಗತಿಗಳನ್ನು ನಾನು ಹಚ್ಚಿಕೊಳ್ಳುತ್ತೇನೆ ಮತ್ತು ಈ ಕಾರಣದಿಂದ ಉಳಿದವರನ್ನು ಚಿಂತೆಗೀಡುಮಾಡುತ್ತೇನೆ. ಸ್ವಭಾವ ಬದಲಾಗುವುದಿಲ್ಲ.

ಅಮ್ಮನ ಬಗ್ಗೆಯೂ ಯೋಚಿಸುತ್ತೇನೆ. ಅವಳೀಗ ಬದುಕಿದ್ದಿದ್ದರೆ ನಾನು ಕ್ರಿಯೋಲಿನ್‌ನ ಬಗ್ಗೆ ಹೊಂದಿದ ಅಭಿಪ್ರಾಯ ಮತ್ತು ಅವನನ್ನು ಮದುವೆಯಾಗುವ ಬಗ್ಗೆ ನನ್ನ ಅನಿಶ್ಚಿತತೆಯ ಕುರಿತು ಏನು ಹೇಳುತ್ತಿದ್ದಳೋ ?

ಅಮ್ಮನ ಬಗ್ಗೆ ಯೋಚನೆ ಮರುಕಳಿಸುತ್ತದೆ. ಅವಳ ಸಾವಿನ ನಂತರ ಅವಳ ಭೂತ ನನ್ನನ್ನು ಕಾಡುವುದಕ್ಕೆ ಅವಳೇನೂ ಬಹಳ ಕಟ್ಟುನಿಟ್ಟಿನ ಶಿಸ್ತಿನವಳಾಗಿರಲಿಲ್ಲ. ಅವಳು ನನಗೆ ಅಮ್ಮ ಮಾತ್ರವಾಗಿರಲಿಲ್ಲ. ನನ್ನ ಹತ್ತಿರದ ಸ್ನೇಹಿತೆಯೂ ಆಗಿದ್ದಳು. ಅವಳನ್ನೆಷ್ಟು ಪ್ರೀತಿಸಿದ್ದೆನೆಂದರೆ ಅವಳಿಲ್ಲವೆಂಬ ಯೋಚನೆಯೇ ನನ್ನ ಹೃದಯದಲ್ಲಿ ನೋವು ತರುತ್ತದೆ.

ಅವಳೆಂದೂ ನನಗೆ ಭಾಷಣ ಬಿಗಿಯುತ್ತಿರಲಿಲ್ಲ.

ಶಾಂತವಾಗಿ ಅವಳ ಆಳವಾದ ಗಡಸು ಧ್ವನಿಯಲ್ಲಿ ಅವಳ ಸೋಲು-ಗೆಲುವುಗಳ ಕುರಿತು ಹೇಳುತ್ತಿದ್ದಳು. ನಾನು ಅವಳ ಅನುಭವದಿಂದ ಕಲಿಯಬೇಕೆಂಬಂತೆ. ಅವಳ ಬದುಕಿನಲ್ಲಿ ಗೆಲುವುಗಳು ಹೆಚ್ಚಿದ್ದಂತೆ ಅನ್ನಿಸುವುದಿಲ್ಲ - ಅವಳ ಬದುಕು ಸೋಲುಗಳಿಂದ ತುಂಬಿತ್ತು.

ಅವಳ ಕೊನೆಯ ದಿನಗಳಲ್ಲಿ ಅವಳು ನನ್ನನ್ನು ತನ್ನ ಸುಂದರ, ಏನನ್ನೋ ಹೇಳುವಂತಿದ್ದ , ಕಣ್ಣುಗಳಿಂದ ನಾನು ಹೇಗೆ ಬದುಕಬಲ್ಲೆ ಮತ್ತು ನನಗೇನೋ ಹೇಳಬೇಕಾಗಿದೆ, ಆದರೆ ಹೇಳುವುದಕ್ಕೆ ಹಿಂಜರಿಯುವವಂತೆ, ನೋಡುತ್ತಿದ್ದಳು. ಅವಳು ನನ್ನ ಜಾರಿಕೆಯ ಒರಟು ದಾರಿಗಳ ಕುರಿತು ಚಿಂತಿಸುತ್ತಿದ್ದಿರಬೇಕು. ಥಕ್ಕನೆ ಹೇಳಿದಳು, 'ಶಾನ್ ಶಾನ್, ನಿನಗೆ ಏನು ಬೇಕೆಂಬ ಸ್ಪಷ್ಟ ಕಲ್ಪನೆಯಿಲ್ಲದಿದ್ರೆ ಮದುವೆಗೆ ಅವಸರ ಮಾಡಬೇಡ - ನಿನ್ನಿಷ್ಟಕ್ಕೆ ನೀನು ಬದುಕು !'

ಉಳಿದವರಿಗೆ ಇದೊಂದು ತಾಯಿ ಮಗಳಿಗೆ ಹೇಳುವ ವಿಚಿತ್ರ ಉಪದೇಶವಾಗಿ ಕಂಡೀತು. ಆದರೆ ನನಗೆ ಇದರಲ್ಲಿ ಅವಳ ಕಹಿ ಅನುಭವಗಳು ಆಕಾರಗೊಂಡಿದ್ದುವು. ಅವಳು ನನ್ನನ್ನಾಗಲೀ, ಬದುಕಿನ ಬಗ್ಗೆ ನನಗಿರುವ ತಿಳುವಳಿಕೆಯನ್ನಾಗಲೀ ಕಡಿಮೆ ಬೆಲೆ ಕಟ್ಟಿದ್ದಾಳೆಂದು ಅನ್ನಿಸುವುದಿಲ್ಲ. ಅವಳು ನನ್ನನ್ನು ಪ್ರೀತಿಸಿದ್ದಳು ಮತ್ತು ನಾನು ದುಃಖಿಯಾಗಿರುವುದು ಅವಳಿಗೆ ಬೇಕಿರಲಿಲ್ಲ.

'ನನಗೆ ಮದುವೆ ಬೇಕಿಲ್ಲ, ಅಮ್ಮ!' ನಾನೆಂದೆ. ನಾಚಿಕೆಯಿಂದಾಗಲೀ ಲಜ್ಜೆಯಿಂದಾಗಲೀ ಅಲ್ಲ. ಒಂದು ಹುಡುಗಿ ಲಜ್ಜೆಯಿಂದಿರುವಂತೆ ಏಕೆ ತೋರಿಸಬೇಕೆಂದು ನನಗೆ ಯೋಚಿಸುವುದೇ ಸಾಧ್ಯವಿಲ್ಲ. ಸಾಮಾನ್ಯವಾಗಿ ಹುಡುಗಿಯರಿಗೆ ಪರಿಚಯಿಸದ ವಿಚಾರಗಳನ್ನೆಲ್ಲ ಅವಳು ನನಗೆಂದೋ ಕಲಿಸಿದ್ದಳು.

'ನಿನಗೆ ಸರಿಯಾದವನು ಸಿಕ್ಕಿದರೆ ಮದುವೆಯಾಗು. ಸರಿಯಾದವನು ಸಿಕ್ಕಿದರೆ ಮಾತ್ರ !'

'ಅಂತಹ ಮನುಷ್ಯನೇ ಇಲ್ಲವೆನಿಸುತ್ತದೆ !'

'ಅದು ಸುಳ್ಳು, ಆದರೆ ಕಷ್ಟವಿದೆ. ಪ್ರಪಂಚ ಎಷ್ಟು ವಿಶಾಲವಿದೆಯೆಂದರೆ ನೀನು ಅಂಥವನನ್ನು ಸಂಧಿಸದೇ ಇರಬಹುದು.' ನನಗೆ ಮದುವೆಯಾಗುತ್ತದೋ ಇಲ್ಲವೋ ಎಂಬುದಕ್ಕಿಂತ ಮದುವೆಯ ಗುಣಮಟ್ಟದ ಬಗ್ಗೆ ಅವಳು ಚಿಂತಿತಳಾಗಿದ್ದಳು.

'ನೀನು ಗಂಡನಿಲ್ಲದೆಯೂ ಚೆನ್ನಾಗಿ ಬದುಕಿಲ್ವ ?'

'ಯಾರು ಹೇಳ್ತಾರೆ ಹಾಗೆ ?'

'ನನಗೆ ಹಾಗನ್ನಿಸುತ್ತದೆ'

'ನನಗೆ ಬೇರೆ ಆಯ್ಕೆಯೇ ಇರಲಿಲ್ಲ...' ಅವಳು ಮಾತನ್ನು ತುಂಡುಮಾಡಿ ಯೋಚನೆಯಲ್ಲಿಳಿದಳು, ಅವಳ ಮುಖ ಉದ್ವಿಗ್ನವಾಗಿತ್ತು. ಆ ಮುಖ ನನಗೆ ನನ್ನ ಪುಸ್ತಕದೊಳಗೆ ಒತ್ತಿಟ್ಟ ಒಂದು ಒಣ ಹೂವನ್ನು ನೆನಪಿಸಿತು.

'ಯಾಕೆ ನಿನಗೆ ಬೇರೆ ಆಯ್ಕೆ ಇರಲಿಲ್ವ ?'

'ನೀನು ತುಂಬಾ ಪ್ರಶ್ನೆ ಹಾಕ್ತೆ' ಅವಳು ಮಾತು ತಪ್ಪಿಸಿದಳು. ನನ್ನಲ್ಲಿ ಹೇಳುವುದಕ್ಕೆ ನಾಚಿಕೆಯಿಂದಲ್ಲ. ಆದರೆ ನಾನೆಲ್ಲಿ ತಪ್ಪು ನಿರ್ಣಯವನ್ನು ತಲುಪುತ್ತೇನೋ ಎಂಬಂತೆ. ಅಲ್ಲದೆ, ಪ್ರತಿಯೊಬ್ಬನೂ ತನ್ನ ಸಮಾಧಿಯವರೆಗೆ ರಹಸ್ಯಗಳನ್ನು ಬಚ್ಚಿಡುತ್ತಾನೆ. ಸ್ವಲ್ಪ ಮುಖಭಂಗವಾದವಳಂತನ್ನಿಸಿ ನಾನು ಮೊಂಡುತನದಿಂದ ಕೇಳಿದೆ,

'ನೀನು ಅಪ್ಪನನ್ನು ಪ್ರೀತಿಸಿಲ್ವ ?'

'ಇಲ್ಲ , ನಾನು ಅವರನ್ನು ಪ್ರೀತಿಸಿಲ್ಲ'

'ಅವನು ನಿನ್ನನ್ನು ಪ್ರೀತಿಸಿದ್ನಾ ?'

'ಇಲ್ಲ , ಅವರು ಪ್ರೀತಿಸಿಲ್ಲ'

'ಮತ್ಯಾಕೆ ಮದುವೆಯಾದ್ರಿ ?'

ಅವಳು ಈ ರಹಸ್ಯವನ್ನು ವಿವರಿಸುವುದಕ್ಕೆ ತಕ್ಕುದಾದ ಶಬ್ದಗಳನ್ನು ಹುಡುಕುವಂತೆ ಒಮ್ಮೆ ಮೌನವಾಗಿ ನಂತರ ಕಟುವಾಗಿ ಹೇಳಿದಳು, 'ನೀನು ಚಿಕ್ಕವಳಿರುವಾಗ ನಿನಗೇನು ಬೇಕೆಂದು ನಿನಗೆ ಗೊತ್ತೇ ಇರುವುದಿಲ್ಲ. ಜನ ನಿನ್ನ ಮದುವೆ ಬಗ್ಗೆ ಮಾತನಾಡಬಹುದು. ನಿನಗೆ ವಯಸ್ಸಾದಂತೆಲ್ಲ ಅನುಭವ ಬಂದಂತೆಲ್ಲ ನಿನ್ನ ನಿಜವಾದ ಅವಶ್ಯಕತೆಗಳನ್ನು ನೀನು ಕಂಡುಕೊಳ್ಳುತ್ತೀ. ಅಷ್ಟರಲ್ಲಿ ನೀನು ಪಶ್ಚಾತ್ತಾಪ ಪಡಬೇಕಾದಷ್ಟು ಮೂರ್ಖ ಸಂಗತಿಗಳನ್ನು ಮಾಡಿರುತ್ತೀ. ಹೊಸ ಬದುಕಿನ ಆರಂಭಕ್ಕೆ ಮತ್ತು ಸರಿಯಾದ ಬದುಕಿಗೆ ನೀನು ಯಾವ ಬೆಲೆಯನ್ನೂ ತೆರಲು ಸಿದ್ಧವಿರುತ್ತೀ. ಪಡೆದದ್ದರಲ್ಲೇ ತೃಪ್ತಿ ಪಡೆಯುವವರು ಯಾವಾಗಲೂ ಸಂತೋಷವಾಗಿರುತ್ತಾರೆಂದು ಹೇಳ್ತಾರೆ, ಆದರೆ ನನಗೆ ಆ ಸಂತೋಷವನ್ನು ಅನುಭವಿಸುವುದು ಸಾಧ್ಯವೇ ಇಲ್ಲ'. ತನ್ನನ್ನೇ ಅಣಕವಾಡುವವರಂತೆ ಅವಳು ಸೇರಿಸಿದಳು: 'ಒಂದು ಪಾಪಿ ಆದರ್ಶವಾದಿ ಇದ್ದರೆ, ಅದೇ ನಾನು'.

ನಾನು ಅವಳಿಂದಲೇ ಎಲ್ಲವನ್ನು ಪಡೆದೆನೇ ? ಕ್ಷುದ್ರ ದೆವ್ವವನ್ನು ಆಕರ್ಷಿಸುವ ಗುಣ ನಮಗಿಬ್ಬರಿಗೂ ಇತ್ತೇ ?

'ನೀನೇಕೆ ಮತ್ತೆ ಮದುವೆಯಾಗಬಾರದು ?'

'ನನಗನ್ನಿಸ್ತಿದೆ, ನನಗೇನು ಬೇಕೆಂಬುದೇ ನನಗಿನ್ನೂ ಗೊತ್ತಿಲ್ಲ ಅಂತ'. ಅವಳು ನನಗೆ ಸತ್ಯವನ್ನು ಹೇಳುತ್ತಿಲ್ಲವೆಂಬಂತೆ ಕಾಣಿಸುತ್ತಿದ್ದಳು.

ನನಗೆ ಅಪ್ಪನ ನೆನಪು ಬರುವುದಿಲ್ಲ. ನಾನು ಚಿಕ್ಕವಳಿರುವಾಗಲೇ ಅವರು

## ವಿನೋದ ಗಣಿತ

### ಜೂನ್ ತಿಂಗಳ ಪ್ರಶ್ನೆಗೆ ಉತ್ತರ :

ಯಾವುದಾದರೊಂದು ಘಟ್ಟದಲ್ಲಿ ಎಡಪಕ್ಷಗಳ ಸಂಖ್ಯೆ 'ಎ' ಆಗಿರಲಿ. ಬಲಪಕ್ಷಗಳ ಸಂಖ್ಯೆ 'ಬ' ಆಗಿರಲಿ. ಎಡಬಿಡಂಗಿ ಪಕ್ಷಗಳ ಸಂಖ್ಯೆ 'ಮ' ಆಗಿರಲಿ. ಪಕ್ಷಗಳ ನಡುವೆ ವಿಲೀನೀಕರಣ ಆದಂತೆ ಈ ಸಂಖ್ಯೆಗಳು ವ್ಯತ್ಯಾಸಗೊಳ್ಳುತ್ತಿರುತ್ತವೆ. ಅದೇ ರೀತಿ ಈ ಸಂಖ್ಯೆಗಳನ್ನು ಒಂದರೊಡನೆ ಒಂದನ್ನು ಕಳೆದಾಗ ಬರುವ ಸಂಖ್ಯೆಗಳೂ ವ್ಯತ್ಯಾಸಗೊಳ್ಳುತ್ತಿರುತ್ತವೆ. ಉದಾ : 'ಎ'ನಿಂದ 'ಬ' ಕಳೆದಾಗ ಬರುವ ಸಂಖ್ಯೆಯನ್ನು (ಋಣ ಪೂರ್ಣಾಂಕಗಳು ಉದ್ಭವಿಸುವ ಸಾಧ್ಯತೆಗಳೂ ಉಂಟು) 'ಕ' ಎಂದು ಕರೆಯೋಣ. ಅಂದರೆ : ಕ = ಎ - ಬ, 'ಎ' ಅಥವಾ 'ಬ'ನಲ್ಲಿ ಕಂಡುಬರುವ ವ್ಯತ್ಯಾಸಗಳು ಸಹಜವಾಗಿ 'ಕ'ನಲ್ಲೂ ಕಂಡುಬರುತ್ತದೆ. ಆದರೆ ಈ ನಿರಂತರ ವ್ಯತ್ಯಾಸದ ನಡುವೆಯೂ 'ಕ'ನ ಒಂದು ಗುಣವು ಮಾತ್ರ ಸ್ಥಿರವಾಗಿ ಉಳಿದುಕೊಂಡು ಬರುತ್ತದೆ. 'ಕ' ಆರಂಭದಲ್ಲಿ ಒಂದು ಬೆಸ ಸಂಖ್ಯೆ (ಅಥವಾ ಸಮ ಸಂಖ್ಯೆ)ಯಾಗಿದ್ದರೆ ಅದು ಬೆಸ ಸಂಖ್ಯೆ (ಅಥವಾ ಸಮ ಸಂಖ್ಯೆ) ಯಾಗಿಯೇ ಉಳಿಯುತ್ತದೆ. (ಇಲ್ಲಿ ಸಮ ಮತ್ತು ಬೆಸ ಸಂಖ್ಯೆಗಳ ಪರಿಕಲ್ಪನೆಯನ್ನು ಋಣಾತ್ಮಕ ಪೂರ್ಣಾಂಕಗಳಿಗೂ ಅನ್ವಯಿಸಲಾಗುತ್ತದೆ. ಉದಾ : -೧, -೨, -೩, ಗಳೆಲ್ಲಾ ಬೆಸ ಸಂಖ್ಯೆಗಳು). ಈ ಸ್ಥಿರತೆಯ ಅಂಶವನ್ನು ಕಂಡುಕೊಳ್ಳುವುದು ಸುಲಭ: ಯಾವುದಾದರೂ ಎರಡು ಪಕ್ಷಗಳು ವಿಲೀನಗೊಂಡಾಗ ಆ ಎರಡು ಪಕ್ಷಗಳ ಸಂಖ್ಯೆಯಲ್ಲಿ ತಲಾ ೧ ರಂತೆ ಕಡಿಮೆಯಾಗುವುದರ ಜೊತೆಗೆ ಮೂರನೇ ಪಕ್ಷದ ಸಂಖ್ಯೆ ೧ ಹೆಚ್ಚಾಗುತ್ತದೆ ಎಂಬುದನ್ನು ಗಮನಿಸಿದರೆ ಸಾಕು.

ಉದಾ : ಎಡಪಕ್ಷವೊಂದು ಬಲಪಕ್ಷದೊಡನೆ ವಿಲೀನಗೊಂಡರೆ 'ಕ'ನಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಎಡಪಕ್ಷವೊಂದು ಎಡಬಿಡಂಗಿ ಪಕ್ಷದೊಡನೆ ವಿಲೀನಗೊಂಡರೆ 'ಕ' ನಲ್ಲಿ ೨ ಕಡಿಮೆಯಾಗುತ್ತದೆ. ಬಲಪಕ್ಷವು ಎಡಬಿಡಂಗಿ ಪಕ್ಷದೊಡನೆ ವಿಲೀನಗೊಂಡಾಗ 'ಕ'ನಲ್ಲಿ ೨ ವೃದ್ಧಿಯಾಗುತ್ತದೆ. ಈ ಎಲ್ಲ ಸಂದರ್ಭಗಳಲ್ಲಿಯೂ 'ಕ' ಸಮಸಂಖ್ಯೆಯಾಗಿದ್ದಲ್ಲಿ ಅದು ಕೊನೆಯವರೆಗೂ ಸಮಸಂಖ್ಯೆಯಾಗಿಯೇ ಉಳಿಯುತ್ತದೆ. ಹಾಗೆಯೇ ಬೆಸಸಂಖ್ಯೆಯಾಗಿದ್ದಾಗಲೂ. ನಮ್ಮ ಪ್ರಶ್ನೆಯಲ್ಲಿ , ಆರಂಭದಲ್ಲಿ :-

ಎ-ಬ=೨೫; ಬ-ಮ=೭; ಮ-ಎ=೧೮.

ಇವು ಕ್ರಮವಾಗಿ ಬೆಸ, ಬೆಸ, ಸಮಸಂಖ್ಯೆಗಳಾಗಿವೆ. ಈ ಲಕ್ಷಣ ಕೊನೆಯವರೆಗೆ ಉಳಿದು ಬರಬೇಕಾದರೆ (ಏಕೈಕ ಪಕ್ಷ ಉದಿಸುವವರೆಗೆ) ಕೊನೆಯಲ್ಲಿ

ಎ=೦; ಬ=೧; ಮ=೦,

ಆಗಿರುವುದೊಂದೇ ದಾರಿ !

### ಈ ತಿಂಗಳ ಹೊಸ ಪ್ರಶ್ನೆ

ಈ ಕೆಳಗೆ ವಿಧಿಸಿದ ನಿಯಮಗಳನ್ನು ಪಾಲಿಸುವ ಧನ ಪೂರ್ಣಾಂಕಗಳ ಸಮೂಹ ಒಂದನ್ನು ಕಂಡುಹಿಡಿಯಿರಿ.

೧. ಸಮೂಹದಲ್ಲಿರುವ ಸಂಖ್ಯೆಗಳು ಪರಸ್ಪರ ವಿಭಿನ್ನವಾಗಿರಬೇಕು.

೨. ೧ ರಿಂದ ೧೦೦ರವರೆಗಿನ ಯಾವುದೇ ನಿರ್ದಿಷ್ಟ ಸಂಖ್ಯೆಯನ್ನು ಆ ಸಮೂಹದಿಂದ ಸಂದರ್ಭಾನುಸಾರ ಹೆಕ್ಕಿದ ಕೆಲವು ಸಂಖ್ಯೆಗಳ ಮೊತ್ತವನ್ನಾಗಿ (ಒಂದು ಸಂಖ್ಯೆಯನ್ನು ಒಮ್ಮೆ ಮಾತ್ರ ಉಪಯೋಗಿಸಿ) ಬರೆಯಲು ಸಾಧ್ಯವಾಗಬೇಕು.

೩. (೧) ಮತ್ತು (೨)ನೇ ನಿಯಮಗಳನ್ನು ಪಾಲಿಸುವುದರ ಜೊತೆಗೆ ಆ ಸಮೂಹದ ಗಾತ್ರ (ಸಮೂಹದಲ್ಲಿ ಎಷ್ಟು ಪೂರ್ಣಾಂಕಗಳಿವೆ ಎಂಬುದನ್ನು ಸೂಚಿಸುವ ಸಂಖ್ಯೆ) ಕನಿಷ್ಠತಮವಾಗಿರಬೇಕು.

ಉದಾ : ೧ ರಿಂದ ೧೦೦ ರವರೆಗಿನ ಎಲ್ಲ ಸಂಖ್ಯೆಗಳನ್ನು ಒಳಗೊಂಡಿರುವ ಸಮೂಹ (೧) ಮತ್ತು (೨)ನ್ನು ಪಾಲಿಸುತ್ತದೆ. ಆದರೆ ನಿಯಮ (೩) ನ್ನು ಪಾಲಿಸುವುದಿಲ್ಲ.

❑❑❑

ಪ್ರತ್ಯೇಕವಾದರು. ಅಪ್ಪ ಒಬ್ಬ ಸುಂದರ ಪುರುಷನೆಂದು ಅಮ್ಮ ಹೇಳುತ್ತಿದ್ದುದು ನೆನಪಿದೆ. ಅವಳಿಗೆ ಬಾಹ್ಯ ಸೌಂದರ್ಯದ ಆಧಾರದಲ್ಲಿ ತೀರ್ಮಾನಿಸಿ ನಿರರ್ಥಕ ಆಯ್ಕೆ ಮಾಡಿದೆನೆನ್ನಿಸಿತ್ತು. ಅಮ್ಮ ಹೇಳುತ್ತಿದ್ದಳು : 'ರಾತ್ರಿ ನಿದ್ರೆ ಬಾರದಿದ್ದಾಗ ನಾನು ಎಂಥ ತಪ್ಪು ಮಾಡಿದೆನೆಂಬುದನ್ನು ನೆನಪು ಮಾಡಿಕೊಂಡು ನನ್ನನ್ನು ನಾನು ಸಮಾಧಾನ ಮಾಡಿ ಕೊಳ್ಳುತ್ತಿದ್ದೆ. ಕೆಲವೊಮ್ಮೆ ನಾಚಿಕೆಯಿಂದ ಮುಖವನ್ನಡಗಿಸುವಷ್ಟು ಕಹಿ ಆ ನೆನಪು - ಯಾವುದೋ ಕಣ್ಣುಗಳು ನನ್ನನ್ನು ಕತ್ತಲಿನಲ್ಲಿ ಕಾದುನೋಡುತ್ತಿವೆಯೆಂಬಂತೆ. ಇಷ್ಟು ಕಹಿಯಾದರೂ, ಪ್ರಾಯಶ್ಚಿತ್ತದಲ್ಲೇ ಒಂದು ಆನಂದ ಪಡೆಯುತ್ತೇನೆ.'

ಅವಳು ಮರುಮದುವೆಯಾಗಲಿಲ್ಲವೆಂದು ನನಗೆ ದುಃಖವಾಗಿತ್ತು. ಅವಳು ಎಷ್ಟು ಬೆರಗಿನ ವ್ಯಕ್ತಿತ್ವವೆಂದರೆ, ಅವಳದು ತಾನು ಪ್ರೀತಿಸಿದವನನ್ನು ಮದುವೆಯಾಗಿದ್ದರೆ ನಮ್ಮ ಸಂಸಾರ ಎಷ್ಟು ಸುಂದರವಾಗಿರುತ್ತಿತ್ತೆಂದು ನಾನು ಊಹಿಸಬಲ್ಲೆ. ಅವಳು ಸುಂದರಿಯಲ್ಲ ದಿದ್ದರೂ, ರೇಖಾಚಿತ್ರದಂತೆ ಕಣ್ಸೆಳೆಯುವ ಚೆಲುವಿತ್ತು ಅವಳಲ್ಲಿ. ಅವಳು ಒಳ್ಳೆಯ ಲೇಖಕಿಯೂ ಹೌದು. ಅವಳನ್ನು ಬಲ್ಲ ಇನ್ನೊಬ್ಬ ಲೇಖಕ ಅವಳನ್ನು ತಮಾಷೆ ಮಾಡುತ್ತ ಹೇಳುತ್ತಿದ್ದ : 'ನಿನ್ನ ಕೃತಿಗಳನ್ನು ಓದಿದರೇ ನಿನ್ನನ್ನು ಪ್ರೀತಿಸಬೇಕೆನ್ನಿಸೀತು !'

ಅದಕ್ಕವಳು ಪ್ರತಿಕ್ರಿಯಿಸಿದ್ದಳು, 'ಅವನು ಪ್ರೀತಿಸುವ ವಸ್ತು ಒಂದು ಬಿಳಿ ಕೂದಲಿನ ಮುದುಕಿಯೆಂದು ಗೊತ್ತಾದರೆ ಅವನು ಭಯದಿಂದ ಓಡಬೇಕು.'

ಅವಳ ವಯಸ್ಸಿಗೆ ಅವಳಿಗೇನು ಬೇಕೆಂಬುದು ಅವಳಿಗೆ ಗೊತ್ತಿದ್ದೀತು; ಆದ್ದರಿಂದ ಇದೊಂದು ಹಾರಿಕೆ, ಅಷ್ಟೆ. ಅವಳ ವೈಶಿಷ್ಟ್ಯ ನನಗೊಂದು ಸಮಸ್ಯೆಯೇ ಆಗಿದ್ದುದ್ದರಿಂದ ಹೀಗೆ ಹೇಳುತ್ತೇನೆ.

ದೃಷ್ಟಾಂತಕ್ಕೆ ಹೇಳುವುದಾದರೆ, ಅವಳು ಬೈಜಿಂಗಿನಿಂದ ಪ್ರವಾಸ ಹೋದರೆ ಯಾವಾಗಲೂ ಅವಳು ತನ್ನೊಡನೆ ೧೯೫೪ರಿಂದ ೧೯೫೫ರವರೆಗೆ ಪ್ರಕಟವಾದ ಚೆಕಾವನ ಕತೆಗಳ ಇಪ್ಪತ್ತೇಳು ಸಂಪುಟಗಳನ್ನು ಒಯ್ಯುತ್ತಿದ್ದಳು. ಅವಳು ನನಗೆ ಹೆದರಿಸಿದ್ದಳು. 'ಈ ಪುಸ್ತಕಗಳನ್ನು ಮುಟ್ಟಬೇಡ, ನಿನಗೆ ಚೆಕಾವನನ್ನು ಓದಬೇಕಾದರೆ ನಾನು ನಿನಗೆ ತಂದು ಕೊಟ್ಟಿದ್ದೇನಲ್ಲ - ಆ ಸಂಪುಟಗಳನ್ನೋದು'. ಅವಳು ನನಗೆ ಜಾಗ್ರತೆ ಹೇಳಬೇಕಾದ್ದಿರಲಿಲ್ಲ. ನನ್ನದೇ ಸಂಪುಟಗಳಿರುವಾಗ ನಾನು ಅವಳದ್ದೇಕೆ ಮುಟ್ಟಬೇಕು ? ಸಾಲದ್ದಕ್ಕೆ, ಅವಳು ಮತ್ತೆ ಮತ್ತೆ ನನಗೆ ಇದನ್ನು ಹೇಳಿದ್ದಳು. ಆದರೂ ಅವಳು ತನ್ನ ಜಾಗ್ರತೆಯಲ್ಲಿದ್ದಳು. ಅವಳು ಆ ಪುಸ್ತಕಗಳಿಂದ ಸಮ್ಮೋಹಗೊಂಡಂತಿದ್ದಳು.

ಹೀಗಾಗಿ ನಮ್ಮ ಮನೆಯಲ್ಲಿ ಚೆಕಾವನ ಕಥೆಗಳ ಎರಡು ಪ್ರತಿಗಳಿದ್ದುವು. ಚೆಕಾವನನ್ನು ಪ್ರೀತಿಸಿದ್ದವೆಂದು ಮಾತ್ರವಲ್ಲ, ನನ್ನ ಹಾಗಿರುವ ಚೆಕಾವನ ಅಭಿಮಾನಿಗಳನ್ನು ನಿಭಾಯಿಸುವುದಕ್ಕೆ ಯಾರಾದರೂ ಒಂದು ಸಂಪುಟವನ್ನು ಕೇಳಿದರೆ, ಅವಳು ನನ್ನ ಪ್ರತಿಯನ್ನು ನೀಡುತ್ತಿದ್ದಳು. ಒಮ್ಮೆ, ಅವಳಿಲ್ಲದಿದ್ದಾಗ ನನ್ನೊಬ್ಬ ಆತ್ಮೀಯ ಗೆಳತಿ ಅವಳ ಪ್ರತಿಯಿಂದ ಒಂದು ಸಂಪುಟವನ್ನು ಒಯ್ದಳು. ಇದು ಅವಳಿಗೆ ಗೊತ್ತಾದಾಗ ಅವಳು ಅದನ್ನು ಹುಡುಕಾಡಿ, ತಕ್ಷಣ ನನ್ನ ಪ್ರತಿಯಿಂದ ಆ ಸಂಪುಟವನ್ನು ಕೊಂಡುಹೋದಳು.

ನನಗೆ ನೆನಪು ಬರುವಲ್ಲಿಂದಲೇ ಆ ಪುಸ್ತಕಗಳು ಅವಳ ಕಪಾಟಿನಲ್ಲಿದ್ದುವು. ಚೆಕಾವ್ ದೊಡ್ಡ ಲೇಖಕ ನಿಜ, ಆದರೂ ಅವನನ್ನು ಓದಿ ಓದಿ ಅವಳು ಬಳಲಲಿಲ್ಲವೆಂಬುದೇ ನನಗೆ ಒಗಟಾಗಿತ್ತು. ಕಳೆದ ಇಪ್ಪತ್ತು ವರ್ಷಗಳಿಗೂ ಮಿಕ್ಕಿ ಅವನನ್ನು ಪ್ರತೀ ದಿನ ಏಕೆ ಓದಬೇಕು ?

ಕೆಲವು ಬಾರಿ ಓದಿ ಸುಸ್ತಾದಾಗ, ಅವಳು ಒಂದು ಕಪ್ ಸ್ಟ್ರಾಂಗ್ ಚಹವನ್ನು ಸುರಿದು ಕೊಂಡು ಕಪಾಟಿನೆದುರು ಆ ಪುಸ್ತಕಗಳನ್ನೇ ನೋಡುತ್ತ ಕುಳಿತಿರುತ್ತಿದ್ದಳು. ನಾನು ಅವಳ ಕೋಣೆಗೆ ಹೋದರೆ ಅವಳು ಗಲಿಬಿಲಿಗೊಂಡು ಒಂದೋ ಚಹವನ್ನು ಚೆಲ್ಲಿಕೊಳ್ಳುತ್ತಿದ್ದಳು ಇಲ್ಲವೇ ಒಬ್ಬಳು ಚಿಕ್ಕ ಹುಡುಗಿ ತನ್ನ ಪ್ರೇಮಿಯನ್ನು ಕಂಡಂತೆ ಬಿಳಿಚಿಕೊಳ್ಳುತ್ತಿದ್ದಳು.

ನನಗೆ ಆಶ್ಚರ್ಯವಾಗುತ್ತಿತ್ತು. ಅವಳೇನಾದರೂ ಚೆಕಾವನನ್ನು ಪ್ರೀತಿಸಿದ್ದಳೇ ? ಅವನಿನ್ನೂ ಬದುಕಿದ್ದರೆ ಖಂಡಿತ ಪ್ರೀತಿಸುತ್ತಿದ್ದಳು. ಅವಳು ಸಾವಿನ ಮುಂಚಿನ ಕ್ಷಣಗಳಲ್ಲಿ ಮನಸ್ಸನ್ನು ಹರಿಬಿಟ್ಟು ಕೊನೆಯದಾಗಿ ನನಗೆ ಹೇಳಿದ್ದು ಅವನ್ನೇ.... 'ಆ ಪ್ರತಿ....' ಅವಳಿಗೆ ಅದರ ಪೂರ್ಣ ಶೀರ್ಷಿಕೆಯನ್ನು ಹೇಳುವ ಶಕ್ತಿಯಿರಲಿಲ್ಲ. ಅವಳೇನು ಉದ್ದೇಶಿಸಿದ್ದಳೆಂದು ನನಗೆ ತಿಳಿದಿತ್ತು. 'ಮತ್ತು ನನ್ನ ದಿನಚರಿ... ಮರೆಯಬಾರದು ಒಲವ.... ಅದನ್ನು ನನ್ನ ಜೊತೆಗೇ ಸಮಾಧಿ ಮಾಡು.'

ಚೆಕಾವನ ಕೃತಿಗಳ ಮಟ್ಟಿಗೆ ಅವಳ ಕೊನೆಯ ಸೂಚನೆಯನ್ನು ನಡೆಸಿದೆ, ಆದರೆ ಅವಳ ದಿನಚರಿಯನ್ನು ನಾಶಮಾಡಲು ಮನಸ್ಸು ಬರಲಿಲ್ಲ. ನನಗನ್ನಿಸಿತು, ಅದನ್ನೇನಾದರೂ ಪ್ರಕಟಿಸಿದರೆ, ಅದು ಅವಳ ಕೃತಿಗಳಲ್ಲೇ ಅತ್ಯಂತ ಕಾಡುವಂಥಾ ಕೃತಿಯಾಗಿರುತ್ತಿತ್ತು. ಆದರೆ ಸಹಜವಾಗಿಯೇ ಪ್ರಕಟಣೆಯ ಪ್ರಶ್ನೆ ಬರಲಿಲ್ಲ.

ಮೊದಲು ನಾನು ಅವಳ ದಿನಚರಿಯ ದಾಖಲೆಗಳು ಕರಡು ಬರಹಗಳೆಂದು ಭಾವಿಸಿದೆ. ಅವು ಕಥೆಗಳಂತಾಗಲೀ, ಪ್ರಬಂಧಗಳಂತಾಗಲೀ, ದಿನಚರಿ ಅಥವಾ ಪತ್ರಗಳಂತಾಗಲೀ ಓದಿಸಲಿಲ್ಲ. ಆದರೆ ಇಡೀ ಓದಿನ ನಂತರ ನನ್ನ ಸಾಮಾನ್ಯ ನೆನಪಿನ ಮೂಲಕ, ಒಂದು ಅಸ್ಪಷ್ಟ ಚಿತ್ರವನ್ನು ಪಡೆದೆ. ಯೋಚಿಸಿದ ನಂತರ, ನನ್ನ ಕೈಯಲ್ಲಿದ್ದುದು ಅದೇನೋ ನಿರ್ಜೀವ ಅಕ್ಷರ ಮಾಲೆಯಲ್ಲ ಎಂದು ಅರಿವಾಯಿತು. ಅದು ಒಂದು ಆತಂಕದ, ಪ್ರೀತಿಯ ಹೃದಯದ ಭಾವ ವಾಗಿತ್ತು. ಇಪ್ಪತ್ತು ವರ್ಷಗಳಿಗೂ ಮಿಕ್ಕಿ ಅವಳ ಹೃದಯವನ್ನು ಒಬ್ಬ ಮನುಷ್ಯ ಆವರಿಸಿದ್ದ ಆದರೆ ಅವನು ಅವಳವನಾಗಿರಲಿಲ್ಲ. ಈ ದಿನಚರಿಗಳನ್ನು ಅವನ ಪ್ರತೀಕವಾಗಿ ಅವಳು ಉಪಯೋಗಿಸಿದಳು, ತನ್ನ ಭಾವನೆಗಳನ್ನು ದಿನದಿನ, ವರುಷಾನುವರುಷ ಅವನಿಗೆ ಅಲ್ಲಿ ಸುರಿದಿದ್ದಳು.

ಅವಳು ಎಷ್ಟೋ ಒಳ್ಳೆಯ ಆಹ್ವಾನವನ್ನು ತಿರಸ್ಕರಿಸಿದ್ದು, ಅವಳ ಬಗ್ಗೆ ಎಂಥ ಮಾತುಕತೆ ಟೀಕೆಗಳಿಗೂ ಕಿವುಡಾದ್ದು ನನಗೆ ಆಶ್ಚರ್ಯವೆನಿಸಲಿಲ್ಲ. ಅವಳ ಹೃದಯ ಆಗಲೇ ತುಂಬಿತ್ತು. ಅಲ್ಲಿ ಬೇರಾರಿಗೂ ಜಾಗವಿರಲಿಲ್ಲ. 'ಯಾವ ಸರೋವರವೂ ಸಾಗರದೊಂದಿಗೆ ಹೋಲಿಸಿ ಕೊಳ್ಳದು, ಯಾವ ಮೋಡವೂ ಮೌಂಟ್‌ವು ಶಿಖರದ ಮೇಲಿನ ಮೋಡದೊಂದಿಗೆ.....' ಆ ಸಾಲುಗಳನ್ನು ನೆನಪಿಸಿಕೊಂಡು ನಾನು ನಿಜಜೀವನದಲ್ಲಿ ಇಷ್ಟು ಗಾಢವಾಗಿ ಯಾರೂ ಪ್ರೀತಿಸಲಾರರು ಎಂದುಕೊಂಡೆ. ಯಾರೂ ನನ್ನನ್ನು ಅಷ್ಟು ಪ್ರೀತಿಸಲಾರರು.

ಮೂವತ್ತರ ದಶಕದ ಕೊನೆಗೆ, ಈ ಮನುಷ್ಯ ಶಾಂಘೈಯಲ್ಲಿ ಪಕ್ಷಕ್ಕಾಗಿ ಭೂಗತ ಚಟುವಟಿಕೆಗಳನ್ನು ನಡೆಸುತ್ತಿದ್ದಾಗ, ಅವನನ್ನು ರಕ್ಷಿಸಲಿಕ್ಕಾಗಿ ಒಬ್ಬ ಕೂಲಿಕಾರ ತನ್ನ ಜೀವವನ್ನೇ ಬಲಿಕೊಟ್ಟನೆಂದೂ, ಆತ ತನ್ನ ಅಸಹಾಯಕ ಪತ್ನಿ ಮತ್ತು ಮಗಳನ್ನು ಬಿಟ್ಟು ಹೋದನೆಂದೂ ತಿಳಿದೆ. ಕರ್ತವ್ಯದ ದೃಷ್ಟಿಯಿಂದ ಮತ್ತು ಸತ್ತವನ ಕುರಿತು ಕೃತಜ್ಞತೆಯಿಂದ ಮತ್ತು ದುಡಿಯುವ ವರ್ಗದ ಭಾವನೆಗಳಿಂದ ಅವನು ನಿಸ್ಸಂಕೋಚವಾಗಿ ಆ ಹುಡುಗಿಯನ್ನು ಮದುವೆಯಾಗಿದ್ದ. 'ಪ್ರೀತಿ'ಗಾಗಿ ಮದುವೆಯಾಗಿ 'ಪ್ರೀತಿ'ಯಿಂದಾಗುವ ಮುಗಿವಿಲ್ಲದ ಕಷ್ಟಗಳನ್ನು ಕಂಡಾಗ ಅವನಿಗನ್ನಿಸಿರಬಹುದು: 'ಬದುಕಿದೆ ದೇವರೇ, ನಾನು ಪ್ರೀತಿಗಾಗಿ ಮದುವೆಯಾಗದಿದ್ದರೂ ಚೆನ್ನಾಗಿದ್ದೇವೆ, ಪರಸ್ಪರ ನೆರವಾಗಬಲ್ಲೆವು'. ವರುಷಗಳವರೆಗೆ, ಅವರಿಬ್ಬರೂ ಅತ್ಯಂತ ಕಷ್ಟಕಾಲದಲ್ಲೂ ಗಂಡಹೆಂಡತಿಯಾಗಿ ಬಾಳಿದರು.

ಅವನು ನನ್ನ ಅಮ್ಮನ ಸಹೋದ್ಯೋಗಿಯಾಗಿದ್ದಿರಬೇಕು. ನಾನೆಂದಾದರೂ ಅವನನ್ನು ಕಂಡಿದ್ದೇನೆ ? ಅವನು ನಮ್ಮ ಮನೆಗೆ ಬಂದಿರಲಿಕ್ಕಿಲ್ಲ ; ಯಾರವನು ?

೧೯೬೨ರ ಬೇಸಿಗೆಯಲ್ಲಿ ಅಮ್ಮ ನನ್ನನ್ನು ಒಂದು ಸಂಗೀತಕ್ಕೆ ಕರೆದುಕೊಂಡುಹೋದಳು. ಕಲಾಮಂದಿರ ನಮ್ಮ ಮನೆಗೆ ಸನಿಹದಲ್ಲೇ ಇತ್ತು. ನಾವು ನಡೆದೇಹೋದೆವು. ಒಂದು ಕಪ್ಪು ಲಿಮೌಸಿನ್ ಶಬ್ದ ಮಾಡದೆ ಬಂದು ಮೆಟ್ಟಲಿನ ಬಳಿ ನಿಂತಿತು. ಅದರೊಳಗಿನಿಂದ ಒಬ್ಬ ಕಪ್ಪು ಸೂಟು, ಬಿಳೀ ಕೂದಲಿನ ವಯಸ್ಕ ಹೊರಗಿಳಿದ. ಎಂಥ ಹೊಳೆವ ಬಿಳೀ ಕೂದಲು ! ಕಠಿಣ, ಸೂಕ್ಷ್ಮ ದೃಷ್ಟಿ, ವಿಶಿಷ್ಟ ಪಾರದರ್ಶಕ ಪ್ರಾಮಾಣಿಕತನ - ಇವನ್ನು ಅವನಲ್ಲಿ ಕಂಡೆ. ಅವನ ತಣ್ಣಗಿನ - ಬೆಳಕು ಮಿಂಚುವ - ಕೋರೈಸುವ ಕಣ್ಣುಗಳು ಮಿಂಚನ್ನೂ ಖಡ್ಗಯುದ್ಧವನ್ನೂ ನೆನಪಿಸುತ್ತಿದ್ದುವು. ಒಂದು ಹೆಂಗಸಿನ ಕುರಿತಾಗಿ ಇರಬಲ್ಲ ಧ್ಯಾನಸ್ಥ ಪ್ರೀತಿ ಮಾತ್ರ ಅವನ ತಣ್ಣನೆಯ ಕಣ್ಣುಗಳಿಗೆ ಆ ಮಾರ್ದವತೆಯನ್ನು ನೀಡಿ ತುಂಬಬಲ್ಲವು.

ಅವನು ಅಮ್ಮನ ಕಡೆಗೆ ನಡೆಯುತ್ತ ಬಂದು ಹೇಳಿದ : 'ಹ್ಯಾಗಿದ್ದಿ, ಕಾಮ್ರೇಡ್ ಜೋಂಗ್ ಯು ? ಎಷ್ಟು ಅಪರೂಪ.'

'ನೀವು ಹ್ಯಾಗಿದ್ದೀರಿ ?' ನನ್ನ ಕೈಯನ್ನು ಹಿಡಿದಿದ್ದ ಅಮ್ಮನ ಕೈ ಮಂಜುಗಡ್ಡೆಯಂತ ತಣ್ಣಗಾಗಿ ಸ್ವಲ್ಪ ನಡುಗಿತು.

ಅವರು ಪರಸ್ಪರರನ್ನು ನೋಡದೆಯೂ ಮುಖಾಮುಖಿಯಾಗಿ ನಿಂತರು. ಇಬ್ಬರೂ ಗಲಿಬಿಲಿಗೊಂಡವರಂತೆಯೂ ಮರಗಟ್ಟಿದವರಂತೆಯೂ ನಿಂತರು. ಅಮ್ಮ ತನ್ನ ಕಣ್ಣುಗಳನ್ನು ರಸ್ತೆಯ ಬದಿಯ ಮರಗಳಲ್ಲಿ ನೆಟ್ಟು ನಿಂತಳು. ಅವನು ನನ್ನ ಕಡೆ ನೋಡಿದ. 'ಎಷ್ಟು ದೊಡ್ಡವಳಾಗಿದ್ದಾಳೆ, ಒಳ್ಳೇದು - ಅಮ್ಮನನ್ನೇ ಹೋಲುತ್ತಿ.'

ಅಮ್ಮನ ಕೈ ಕುಲುಕುವ ಬದಲು ಅವನು ನನ್ನ ಕೈ ಕುಲುಕಿದ. ಅವನ ಕೈ ಅಮ್ಮನ ಕೈಯ್ಯಂತೆಯೇ ತಣ್ಣಗಿತ್ತು ಮತ್ತು ನಡುಗುತ್ತಿತ್ತು. ವಿದ್ಯುತ್ ಪ್ರವಹಿಸಿದಂತಾಗಿ ನಾನು ಚಿಕ್ಕ ಷಾಕ್ ಅನುಭವಿಸಿದೆ. ನಾನು ನನ್ನ ಕೈಗಳನ್ನು ಹಿಂದಕ್ಕೆಳೆದುಕೊಂಡು ಚೀರಿದೆ. 'ಅದು ಒಳ್ಳೆಯದಲ್ಲ !' 'ಯಾಕಲ್ಲ ?' ಮಕ್ಕಳು ಮುಕ್ತವಾಗಿ ಮಾತನಾಡುವಾಗ ಅಚ್ಚರಿಗೊಳ್ಳುವ ಎಲ್ಲ ವಯಸ್ಕರಂತೆಯೇ ವರ್ತಿಸುತ್ತ ಅವನು ಕೇಳಿದ.

ನಾನು ಅಮ್ಮನ ಮುಖವನ್ನು ನೋಡಿದೆ. ನಾನು ನಿಜಕ್ಕೂ ನಿರಾಶಳಾದೆ. ನಾನು ಅವಳನ್ನೇ ಹೋಲುತ್ತಿದ್ದೆ. 'ಯಾಕೆಂದರೆ ಅವಳು ಚೆನ್ನಾಗಿಲ್ಲ !'

ಅವನು ನಕ್ಕ, ಮತ್ತೆ ತಮಾಷೆ ಮಾಡುವಂತೆ ಹೇಳಿದ: 'ನಿಜಕ್ಕೂ ಕೆಟ್ಟದ್ದು ತನ್ನ ತಾಯಿಯೇ ಚೆನ್ನಾಗಿಲ್ಲವೆಂದು ಹೇಳುವ ಮಗು. ನಿನಗೆ ನೆನಪಿದೆಯೇ, ೫೩ರಲ್ಲಿ ನಿನ್ನ ಅಮ್ಮ ಬೈಜಿಂಗಿಗೆ ವರ್ಗವಾದಾಗ ನಮ್ಮ ಸಚಿವಾಲಯದಲ್ಲಿ ಕೆಲಸಕ್ಕೆ ವರದಿ ಮಾಡಿಕೊಳ್ಳಲು ಬಂದದ್ದು? ನಿನ್ನನ್ನು ಹೊರಗೆ ವರಾಂಡದಲ್ಲಿ ಬಿಟ್ಟಿದ್ದಳು, ನೀನು ಮಂಗನಂತೆ ಮೆಟ್ಟಲು ಹತ್ತಿದೆ, ಬಾಗಿಲ ಸಂದಿಯಲ್ಲಿ ಇಣಕಿದೆ, ನನ್ನ ಕಛೇರಿಯ ಬಾಗಿಲಲ್ಲಿ ಬೆರಳನ್ನು ಸಿಕ್ಕಿಸಿಕೊಂಡೆ. ನೀನು ಎಷ್ಟು ಅತ್ತೆಯೆಂದರೆ ನಾನು ನಿನ್ನನ್ನೆತ್ತಿಕೊಂಡು ಅವಳನ್ನು ಹುಡುಕಲು ಹೊರಟೆ.'

'ನನಗದು ನೆನಪಿಲ್ಲ.' ತೆರೆದುಕೊಂಡ ಚಡ್ಡಿಗಳನ್ನು ಹಾಕುತ್ತಿದ್ದ ನನ್ನ ಬಾಲ್ಯಕ್ಕೆ ಅವನು ಮಾತನ್ನೆಳೆದದ್ದು ನನಗೆ ಸಿಟ್ಟು ತಂದಿತು.

'ಆಹ್, ನಾವು ವಯಸ್ಸಾದವರು, ಹೆಚ್ಚು ನೆನಪು ಶಕ್ತಿಯಿದೆ'. ಅವನು ತಕ್ಷಣ ತಿರುಗಿ ಅಮ್ಮನಿಗೆ ಹೇಳಿದ, 'ನಿನ್ನ ಇತ್ತೀಚೆಗಿನ ಕಥೆ ಓದಿದ್ದೇನೆ. ನಿಜ ಹೇಳಬೇಕೆಂದರೆ, ಅದರಲ್ಲೇನೋ ಸ್ವಲ್ಪ ತಪ್ಪಿದೆ. ನೀನು ಆ ನಾಯಕಿಯನ್ನು ಅಷ್ಟು ಕೀಳಾಗಿ ಮಾಡಬಾರದಿತ್ತು.... ಒಬ್ಬರ ಜೀವನ ಹಾಳಾಗದಂತೆ ಅವರನ್ನು ಪ್ರೀತಿಸುವುದರಲ್ಲಿ ತಪ್ಪಿಲ್ಲ..... ನಿಜಕ್ಕೂ ನಾಯಕನೂ ಅವಳನ್ನು ಪ್ರೀತಿಸಿರಬಹುದು. ಮೂರನೇ ವ್ಯಕ್ತಿಯ ಸಂತೋಷಕ್ಕಾಗಿ ಅವರು ತಮ್ಮ ಪ್ರೀತಿಯನ್ನು ತ್ಯಾಗ ಮಾಡಬೇಕಾಯಿತು.....'

ಒಬ್ಬ ಪೊಲೀಸಿನವ ಕಾರು ನಿಂತಲ್ಲಿಗೆ ಬಂದು ಡ್ರೈವರನಿಗೆ ಕಾರು ಮುಂದಕ್ಕೆ ಚಲಿಸೆಂದು ಸೂಚಿಸಿದ. ಡ್ರೈವರು ಏನೋ ನೆಪ ಹೇಳಬೇಕೆಂಬಷ್ಟರಲ್ಲಿ, ಆ ವಯಸ್ಕ ತಿರುಗಿನೋಡಿದ. ಅವಸರದಲ್ಲಿ 'ಹೋಗಿ ಬರ್ತೀನೆ' ಎಂದು ಅವನು ಕಾರಿನ ಬಳಿಗೆ ಹೋಗಿ ಪೊಲೀಸಿನವನಿಗೆ 'ಕ್ಷಮಿಸಿ, ಅದು ಅವನ ತಪ್ಪಲ್ಲ, ನಂದು....' ಎಂದ.

ಅವನು ಪೊಲೀಸಿನವನ ಕಠಿಣ ಮಾತುಗಳಿಗೆ ಮನಃಪೂರ್ವಕವಾಗಿ ಕಿವಿಗೊಡುತ್ತಿರುವುದನ್ನು ಕಂಡು ತಮಾಷೆಯೆನಿಸಿತು. ನಾನು ಅಮ್ಮನತ್ತ ತುಂಟನಗೆಯನ್ನು ಬೀರಿದಾಗ ಅವಳು ಶಾಲೆಯ ವಿದ್ಯಾರ್ಥಿನಿ ಜೋರಿನ ಮುಖ್ಯೋಪಾಧ್ಯಾಯಿನಿಯೆದುರು ನಿಂತಂತೆ ಆತಂಕದಲ್ಲಿ ನಿಂತಿದ್ದಳು. ನೋಡಿದವರು ಪೊಲೀಸಿನವನು ಅವಳಿಗೇ ಹೇಳುತ್ತಿದ್ದಾನೇನೋ ಎಂದುಕೊಳ್ಳಬೇಕು.

ಕಾರು ಹೊಗೆಯುಗುಳುತ್ತ ಮುಂದೆ ಸರಿಯಿತು. ಸ್ವಲ್ಪ ಹೊತ್ತಿನಲ್ಲಿ ಹೊಗೆಯೂ ಗಾಳಿಯಲ್ಲಿ ಮರೆಯಾಯಿತು. ಏನೂ ನಡೆಯಲಿಲ್ಲವೆಂಬಂತೆ. ಆದರೆ ಆ ಘಟನೆ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿತ್ತು.

ಅದನ್ನೀಗ ವಿಶ್ಲೇಷಿಸಿದರೆ, ಅಮ್ಮನ ಹೃದಯವನ್ನು ಗೆದ್ದ ಶಕ್ತಿಶಾಲಿ ಅವನೇ ಆಗಿರಬೇಕು ಅನ್ನಿಸುತ್ತದೆ. ಆ ಶಕ್ತಿ ಅವನ ರಾಜಕೀಯ ಬದ್ಧತೆಯಿಂದ, ಕ್ರಾಂತಿಯೊಳಗಿನಿಂದ, ಇಷ್ಟರಲ್ಲೇ ಸಾವಿನಿಂದ ಪಾರಾದ್ದರಿಂದ, ಅವನ ಚುರುಕು ಮೆದುಳಿನಿಂದ, ಅವನ ಕೆಲಸದ ಚಾಕಚಕ್ಯತೆಯಿಂದ, ಅವನ ಫಲವತ್ತಾದ ಮನಸ್ಸಿನಿಂದ ಬಂದದ್ದು. ಸಾಲದಕ್ಕೆ, ವಿಚಿತ್ರವಾಗಿ ಕಂಡರೂ, ಅವನೂ ಅಮ್ಮನೂ ಒಂದೇ ಸಂಗೀತವಾದ್ಯವನ್ನಿಷ್ಟಪಟ್ಟಿದ್ದರು. ಹೌದು, ಅವಳು ಅವನನ್ನು ಆರಾಧಿಸಿರಬೇಕು. ಅವಳು ಒಮ್ಮೆ ನನಗೆ ಹೇಳಿದ್ದಳು, ತಾನು ಒಬ್ಬ ಮನುಷ್ಯನನ್ನು ಆರಾಧಿಸದಿದ್ದರೆ ಅವನನ್ನು ಒಂದು ದಿನಕ್ಕೂ ಪ್ರೀತಿಸಲಾರೆ, ಎಂದು.

ಆದರೆ ಅವನು ಅವಳನ್ನು ಪ್ರೀತಿಸಿದ್ದನೋ ಇಲ್ಲವೋ ನಾನು ಹೇಳಲಾರೆ. ಅಲ್ಲದಿದ್ದರೆ, ಅವಳ ದಿನಚರಿಯಲ್ಲಿ ಈ ದಾಖಲೆಯೇಕೆ ?

'ಇದು ತುಂಬಾ ಸೊಗಸಾದ ಉಡುಗೊರೆ. ಆದರೆ ಚೆಕಾವ್ ನನ್ನ ಪ್ರೀತಿಯ ಲೇಖಕನೆಂದು ನಿನಗೆ ಹೇಗೆ ಗೊತ್ತಾಯಿತು ?'

'ನೀನು ಹಾಗೆ ಹೇಳಿದ್ದೆ'

'ನನಗದು ನೆನಪಿಲ್ಲ'

'ನನಗೆ ನೆನಪಿದೆ. ನೀನು ಯಾರೊಂದಿಗೋ ಹರಟುವಾಗ ಹಾಗೆ ಹೇಳುವುದನ್ನು ಕೇಳಿದೆ.'

ಹಾಗಾದರೆ ಅಮ್ಮನಿಗೆ 'ಚೆಕಾವನ ಆಯ್ದ ಕಥೆಗಳು' ಕೊಟ್ಟದ್ದು ಅವನು. ಅವಳಿಗದು ಪ್ರೇಮಪತ್ರದಷ್ಟೇ ಮುಖ್ಯ.

ಬಹುಶಃ ಈ ಮನುಷ್ಯ, ಪ್ರೀತಿಯಲ್ಲಿ ನಂಬಿಕೆಯಿಲ್ಲದವನು, ತಲೆಕೂದಲು ಬೆಳ್ಳಗಾದಾಗ ತನ್ನ ಹೃದಯದಲ್ಲೂ ಪ್ರೀತಿಯೆಂಬ ವಸ್ತುವಿದೆಯೆಂದು ಅರಿತ. ಈ ಸಮಯಕ್ಕೆ ಅವನಿಗೆ ಪ್ರೀತಿಸುವ ಹಕ್ಕಿರಲಿಲ್ಲವಾದಾಗ, ತಾನು ಜೀವವನ್ನೇ ಕೊಡಬಲ್ಲ ಪ್ರೀತಿಯ ದುರಂತ ಶೋಧನೆಯನ್ನು ಮಾಡಿದ. ಅಥವಾ ಅದಕ್ಕಿಂತಲೂ ಆಳಕ್ಕಿಳಿದಿದ್ದನೇ ?

ಇದಿಷ್ಟೇ ಅವನ ಬಗ್ಗೆ ನನಗೆ ನೆನಪಿರುವುದು.

ಅಮ್ಮ ಎಷ್ಟು ನತದೃಷ್ಟೆ, ತಾನು ಆರಾಧಿಸಿದ ಮನುಷ್ಯನು ಸಿಕ್ಕದಿರುವುದಕ್ಕೆ ! ಅವನ ಕಾರಿನ ಅಥವಾ ಕಾರಿನ ಹಿಂದಿನ ಕಿಟಕಿಯಿಂದ ಅವನ ತಲೆಯ ಹಿಂಭಾಗದ ಒಂದು ನೋಟವನ್ನು ಪಡೆಯುವುದಕ್ಕೆ ಅವಳು ಜಾಗರೂಕತೆಯಿಂದ ಅವನು ಕೆಲಸಕ್ಕೆ ಹೋಗಿ ಬರುವ ರಸ್ತೆಗಳನ್ನು ಗುರುತಿಟ್ಟುಕೊಂಡಳು. ಅವನ ಭಾಷಣವಿದ್ದಾಗ, ಅವಳು ಹಾಲಿನಲ್ಲಿ ಹಿಂದೆ ಕುಳಿತು ಸಿಗರೇಟಿನ ಹೊಗೆ ಮತ್ತು ಮಂದ ಬೆಳಕಿನಲ್ಲಿ ಅವನ ಅಸ್ಪಷ್ಟ ಮುಖವನ್ನು ನೋಡುತ್ತಿದ್ದಳು. ಅವಳ ಕಣ್ಣುಗಳು ಹನಿಗಳಿಂದ ತುಂಬುತ್ತಿದ್ದುವು, ಆದರೆ ಅವಳು ಕಣ್ಣೀರನ್ನು ಒಳಗೊಳಗೇ ನುಂಗುತ್ತಿದ್ದಳು. ಅವನು ಕೆಮ್ಮುತ್ತ ತನ್ನ ಮಾತನ್ನು ಮಧ್ಯೆ ತುಂಡರಿಸಿದಾಗ, ಅವಳು ಯಾರಾದರೂ ಅವನಿಗೆ ಸಿಗರೇಟು ತ್ಯಜಿಸಲು ಹೇಳಬಾರದೇ ಎಂದು ಅಂದುಕೊಳ್ಳುವಳು. ಅವನಿಗೆ ಕೆಮ್ಮಿಗೆ ಕಾಹಿಲೆ ಬರಬಹುದೆಂದು ಅವಳು ಹೆದರಿದ್ದಳು. ಅವನು ಅಷ್ಟು ಹತ್ತಿರವಿದ್ದರೂ ಅದೇಕೆ ಅಷ್ಟು ದೂರ ?

ಅವನೋ, ಅವಳ ಒಂದು ನೋಟಕ್ಕಾಗಿ ಪ್ರತಿದಿನ ಕಾರಿನ ಕಿಟಕಿಯಿಂದ, ಸೈಕಲ್ ಸವಾರರ ಪ್ರವಾಹದೊಳಗೆ ಅವಳಿಗೆಲ್ಲಾದರೂ ಅಪಘಾತವಾಗಿಬಿಟ್ಟೀತೇ ಎಂದು ಭಯದಿಂದ, ನೋಡುವನು. ಅಪರೂಪಕ್ಕೊಂದೊಂದು ಸಂಜೆ ಅವನಿಗೆ ಯಾವ ಕಛೇರಿ ಕೆಲಸಗಳಿಲ್ಲದಿದ್ದಾಗ, ನಮ್ಮ ವಠಾರದಲ್ಲಿ ಅವನು ನಡೆದುಬಂದು ನಮ್ಮ ಕಾಂಪೌಂಡು ಗೇಟನ್ನು ದಾಟಿ ಹೋಗುವನು. ಎಷ್ಟೇ ಕೆಲಸಗಳಿದ್ದಾಗಲೂ ಪತ್ರಿಕೆಗಳಲ್ಲಿ, ಮ್ಯಾಗಜೀನ್‌ಗಳಲ್ಲಿ ಅವಳ ಬರಹವನ್ನು ನೋಡಲು ಎಡೆಮಾಡಿಕೊಳ್ಳುವನು.

ಎಷ್ಟೇ ಕಷ್ಟದ ದಿನಗಳಲ್ಲೂ ತನ್ನ ಕರ್ತವ್ಯವು ಅವನಿಗೆ ನಿಚ್ಚಳವಿತ್ತು. ಆದರೆ ಈಗ ಈ ಪ್ರೀತಿಯ ಮುಖಾಮುಖಿಯಿಂದಾಗಿ ಅವನು ಅಶಕ್ತನೂ ಅಸಹಾಯಕನೂ ಆದ. ಅವನ ಈ ವಯಸ್ಸಿಗೆ ಅದೊಂದು ತಮಾಷೆಯ ಸಂಗತಿ. ಬದುಕೇಕೆ ಅವನೊಡನೆ ಈ ಆಟ ಆಡಿದೆ ?

## ದಾರಿದ್ರ್ಯ

ದಾರಿದ್ರ್ಯವೆಂಬ ನನ್ನ ಯಜಮಾನಿಯ ಬಗ್ಗೆ ಮಾತಾಡುವವರೆಲ್ಲ ಶ್ರೀಮಂತರೆ
ಅಥವಾ ತಾವೆ ಭಾರಿ ಶ್ರೀಮಂತರೆಂದು ಭ್ರಮಿಸಿಕೊಂಡವರು
ಸಂತ ಫ್ರಾನ್ಸಿಸ್ ಕೂಡ ಹಳಿತಪ್ಪಿದ ಶ್ರೀಮಂತ ಹುಡುಗನಾಗಿದ್ದ

ಕಸುಬು ಕಾಯಕದವರ ನಡುವೆ ಹುಟ್ಟಿದ ನಾನು
ದಾರಿದ್ರ್ಯವೆಂಬ ಘಾಟಿ ಮುದುಕಿಯನ್ನು ಚೆನ್ನಾಗಿ ಬಲ್ಲೆ
ಅಪೂಟು ಅವಶ್ಯವಾದದ್ದನ್ನೂ ಪೂರೈಸದ ಮುಗ್ಗಟ್ಟಿಗೆ ಸಿಕ್ಕಾಗ
ಆ ಮುದುಕಿ ರಾಕ್ಷಸಿಯಾಗುತ್ತಾಳೆ ಎಂದು ಬಲ್ಲೆ
ಇಲ್ಲ ಅವಳೇನು ಹಾಗಿಲ್ಲ ಅನ್ನುವವರೆಲ್ಲ ಸುಳ್ಳುಬುರುಕರು ಎಂದೂ ಬಲ್ಲೆ

ದರಿದ್ರನಾಗಿರಲು ಇಷ್ಟವಿಲ್ಲ ನನಗೆ ಅಂದರೆ ನಾನು ದಸ್ತಗಿರಿಯಾದಂತೆ
ಆದರೆ ಶ್ರೀಮಂತನಾಗಿರಲೂ ಇಷ್ಟವಿಲ್ಲ ನನಗೆ
ಸಾಗರ ಸಾಮೀಪ್ಯದ ಈ ಪೈನ್ ಮರ
ಬಂಡೆಯೊಳಗಿಂದ ಬೆಳೆದು ಹಸಿರು ತುರಾಯಿ ತುರಾಯಿ ಹರಡಿ



ನಿಂತಿರುವುದ ನೋಡಿದಾಗ ಅರಿವಾಗುತ್ತದೆ
ಅದಕ್ಕಿರುವ ಸಹಜ ಸಮೃದ್ಧಿ

ಈ ಮರದ ಬೇರು ಬೆರಳುಗಳ ಹಿಡಿತ ಗಟ್ಟಿಯಾಗಿದೆ
ಮಣ್ಣ ರೊಟ್ಟಿಯ ಮೇಲೆ
ತುರಾಯಿಗಳ ಹಸಿರು ಬಟ್ಟಲುಗಳಲ್ಲಿ
ಗಾಳಿ ಬೆಳಕಿನ ಸುರೆ ಸುರಿದುಕೊಳ್ಳುತ್ತಿದೆ ಈ ಮರ
ನಾನೂ ಈ ಮರದಂತಾಗಬೇಕು
ಸಹಜ ಸಮೃದ್ಧಿ ನನಗೂ ದಕ್ಕಬೇಕು
ನಾನೂ ತುರಾಯಿಗಳ ಹರಡಿಕೊಳ್ಳಬೇಕು
ಹಸಿರು ವೈಭವದಲ್ಲೋಲಾಡಬೇಕು.

ಇಂಗ್ಲಿಷ್ ಮೂಲ : ಡಿ. ಎಚ್. ಲಾರೆನ್ಸ್
ಕನ್ನಡಕ್ಕೆ : ಬಿದರಹಳ್ಳಿ ನರಸಿಂಹಮೂರ್ತಿ

'ಅನಿಮಿಷ', ಕಾಲಜ್ಞಾನಿ ಕನಕದಾಸ ರಸ್ತೆ, ದುರ್ಗಿಗುಡಿ ಬಡಾವಣೆ ಹೊನ್ನಾಳಿ - ೫೭೭ ೨೧೭

ಆದರೂ ಅವರಿಬ್ಬರೂ ಕಛೇರಿಯಲ್ಲಿ ಪರಸ್ಪರರನ್ನು ಸಂಧಿಸುವ ಸಂದರ್ಭ ಬಂದಾಗ ಇಬ್ಬರೂ ಬರೇ ಮುಖದಲ್ಲೇನೋ ಸಂಜ್ಞೆ ಮಾಡುತ್ತ ಪರಸ್ಪರರನ್ನು ತಪ್ಪಿಸಿ ಕೊಳ್ಳುತ್ತಿದ್ದರು. ಇದರಲ್ಲೂ ಅಮ್ಮ ತನ್ನ ಸುತ್ತಲಿನ ಎಲ್ಲದಕ್ಕೂ ಕುರುಡಿಯೂ ಕಿವುಡಿಯೂ ಆಗುತ್ತಿದ್ದಳು. ವಾಂಗ್ ಎಂಬ ಸಹೋದ್ಯೋಗಿ ಸಿಕ್ಕಾಗ ಅವಳು ಅವನನ್ನು ಗುಟ ಎನ್ನುವಳು ಮತ್ತು ಪೆದ್ದುಪೆದ್ದಾಗಿ ಏನಾದರೂ ಮಾತಾಡುವಳು.

ಇದು ಅವಳಿಗೆ ಕ್ರೂರ ಪರೀಕ್ಷೆಯಾಗಿತ್ತು. ಅವಳು ಬರೆದಳು:

'ನಾವಿಬ್ಬರೂ ಒಬ್ಬರನ್ನೊಬ್ಬರು ಮರೆಯಲು ಒಪ್ಪಿಕೊಂಡಿದ್ದೆವು. ಆದರೆ ನಾನು ನಿನಗೆ ಮೋಸಮಾಡಿದೆ, ನಾನು ನಿನ್ನನ್ನೆಂದೂ ಮರೆತಿಲ್ಲ. ನೀನು ನನ್ನನ್ನು ಮರೆತಿದ್ದೀಯೆಂದೂ ನನಗನ್ನಿಸುವುದಿಲ್ಲ. ನಾವಿಬ್ಬರೂ ನಮ್ಮ ಸಂಕಟಗಳನ್ನು ಅಡಗಿಸುತ್ತ ಪರಸ್ಪರ ವಂಚಿಸುತ್ತಿದ್ದೇವೆ. ನಾನು ಉದ್ದೇಶಪೂರ್ವಕ ನಿನ್ನನ್ನು ವಂಚಿಸಿಲ್ಲ - ನಮ್ಮ ಒಪ್ಪಂದದಂತೆ ನಡೆಯಲು ನಾನು ಪ್ರಯತ್ನಿಸಿದ್ದೇನಾದರೂ ಕಾಲ ಮತ್ತು ಅಂತರ ನಿನ್ನನ್ನು ಮರೆಯಲು ನನಗೆ ಸಹಾಯ ಮಾಡಬಹುದೆಂಬ ಆಸೆಯಿಂದಲೇ ನಾನು ಬೈಜಿಂಗಿನಿಂದ, ಹೆಚ್ಚಾಗಿ ದೂರವಿದ್ದೇನೆ. ಆದರೆ ನಾನು ಮರಳಿದಾಗೆಲ್ಲ, ಟ್ರೇನು ನಿಲ್ದಾಣವನ್ನು ಪ್ರವೇಶಿಸಿದಂತೆಲ್ಲ ನನ್ನ ತಲೆ ತಿರುಗುತ್ತದೆ. ನಾನು ಪ್ಲಾಟ್ಫಾರಮ್ಮಿನಲ್ಲಿ ಯಾರೋ ಒಬ್ಬರು ನನಗಾಗಿ ಕಾಯುತ್ತಿದ್ದಾರೆಂಬಂತೆ ಸುತ್ತ ಗಾಢವಾಗಿ ದೃಷ್ಟಿಸುತ್ತೇನೆ. ಅಲ್ಲಿ ಯಾರೂ ಇಲ್ಲ ಅನ್ನು. ನನಗಾಗ ನಾನು ಏನನ್ನೂ ಮರೆತಿಲ್ಲವೆಂದು ಅರಿವಾಗುತ್ತದೆ. ಎಲ್ಲವೂ ಹಾಗೇ ಇದೆ. ನನ್ನ ಪ್ರೀತಿಯೆಂದರೆ - ಒಂದು ಮರದ ಬೇರುಗಳು ವರುಷ ವರುಷವೂ ಇನ್ನಷ್ಟು ಆಳಕ್ಕಿಳಿದಂತೆ. ಅದನ್ನು ಬುಡಮೇಲು ಮಾಡುವ ಮಾರ್ಗ ನನ್ನಲ್ಲಿಲ್ಲ.'

'ಪ್ರತೀ ದಿನ ಕೊನೆಗೆ ನಾನೇನೋ ಬಹುಮುಖ್ಯವಾದ್ದನ್ನು ಮರೆತಂತೆ ಅಂದುಕೊಳ್ಳುತ್ತೇನೆ. ನನ್ನ ಕನಸುಗಳಿಂದ ಎಚ್ಚೆತ್ತು ಏನಾಗಿಹೋಯಿತೆಂದು ಆಶ್ಚರ್ಯಪಡುತ್ತೇನೆ. ಆದರೆ ಏನೂ ಆಗಿಲ್ಲ. ಏನೂ. ನೀನಿಲ್ಲವೆಂದು ಮನವರಿಕೆಯಾಗುತ್ತದೆ. ಆಗ ಎಲ್ಲವೂ ಅಪೂರ್ಣವಾದಂತೆ, ಏನೋ ಇಲ್ಲವಾದಂತೆ ಮತ್ತು ಆ ಖಾಲಿಯನ್ನು ತುಂಬಲು ಏನೂ ಇಲ್ಲದಂತೆ ನಾವು ನಮ್ಮ ಬದುಕಿನ ಅಂತ್ಯವನ್ನು ಸಮೀಪಿಸಿದ್ದೇವೆ. ನಾವೇಕೆ ಮಕ್ಕಳಂತೆ ಭಾವಪರವಶರಾಗಬೇಕು ? ಬದುಕೇಕೆ ಜನರನ್ನು ಇಂಥ ಪರೀಕ್ಷೆಗೆ ಒಳಪಡಿಸಬೇಕು? ನಂತರ ಜೀವಾವಧಿ ಕನಸುಗಳನ್ನು ನಿನ್ನೆದುರು ಬಿಚ್ಚಬೇಕು ? ನಾನು ಕಣ್ಣು ತೆರೆಯದೆ ಆರಂಭಿಸಿದ್ದರಿಂದ ತಪ್ಪು ಹಾದಿ ಹಿಡಿದೆ, ಈಗ ನನ್ನ ಮತ್ತು ನನ್ನ ಕನಸುಗಳ ನಡುವೆ ದಾಟಲಾಗದ ಬೇಲಿಗಳಿವೆ.'

ಹೌದು, ಅಮ್ಮ ಎಲ್ಲೇ ಪ್ರವಾಸ ಹೋಗಲಿ ಮರಳಿ ಬರುವಾಗ ಅವಳನ್ನು ಸ್ವಾಗತಿಸಲು ನಾನು ಸ್ಟೇಷನ್ನಿಗೆ ಹೋಗಲು ಬಿಡುತ್ತಿರಲಿಲ್ಲ. ಬದಲಿಗೆ ಒಬ್ಬಳೇ ಅಲ್ಲಿ ನಿಂತು ಅವನು ಭೇಟಿಯಾದಂತೆ ಕಲ್ಪಿಸಿಕೊಳ್ಳುತ್ತಿದ್ದಳು. ಪಾಪ, ಅಮ್ಮ ಕೂದಲು ನೆರೆತ ಮೇಲೂ ಪ್ರೀತಿಗೆ ಮರುಳಾದ ಹುಡುಗಿಯಂತೆ ವರ್ತಿಸುತ್ತಿದ್ದಳು.

ಅವರ ಪ್ರಣಯಕ್ಕೆ ಸಂಬಂಧಿಸಿದಂತೆ ದಿನಚರಿಯಲ್ಲಿ ಹೆಚ್ಚೇನೂ ಇರಲಿಲ್ಲ, ಹೆಚ್ಚಿನವು ಚಿಲ್ಲರೆ ವಿಚಾರಗಳಿಗೆ ಸಂಬಂಧಿಸಿದವು. ಯಾಕೆ ಅವಳ ಲೇಖನ ಪ್ರಕಟವಾಗಲಿಲ್ಲ; ಅವಳಿಗೆ ನಿಜವಾದ ಪ್ರತಿಭೆಯಿಲ್ಲವೆಂಬ ಭಯ; ಟಿಕೇಟಿನಲ್ಲಿ ಸಮಯವನ್ನು ಸರಿಯಾಗಿ ಗುರ್ತಿಸದೆ ಒಳ್ಳೆಯ ನಾಟಕ ತಪ್ಪಿಹೋದದ್ದು; ಕೊಡೆಯನ್ನು ಬಿಟ್ಟು ತಿರುಗಾಟಕ್ಕೆ ಹೋಗಿ ಬರುವಾಗ ಪೂರ್ತಿ ಒದ್ದೆಯಾದದ್ದು; ಇತ್ಯಾದಿ. ಅಂತರಾಳದಲ್ಲಿ ಅವರಿಬ್ಬರೂ ಹಗಲಿರುಳೂ ಜೊತೆಯಾಗಿದ್ದರು, ಅನ್ಯೋನ್ಯ ದಂಪತಿಗಳ ಹಾಗೆ. ನಿಜಕ್ಕೂ ಅವರಿಬ್ಬರು ಒಟ್ಟಾರೆ ಇಪ್ಪತ್ನಾಲ್ಕು ಘಂಟೆಗಳಷ್ಟನ್ನೂ ಒಟ್ಟಾಗಿ ಕಳೆದಿರಲಿಕ್ಕಿಲ್ಲ. ಆದರೂ ಅವರು ಈ ಅವಧಿಯಲ್ಲಿ ಇತರರು ತಮ್ಮ ಇಡೀ ಬದುಕಿನಲ್ಲಿ ಅನುಭವಿಸಿದ್ದಕ್ಕಿಂತ ಆಳವಾದ ಸಂತೋಷವನ್ನು ಅನುಭವಿಸಿದರು. ಶೇಕ್ಸ್‌ಪಿಯರ್ ಜ್ಯೂಲಿಯೆಟ್ಟಳಿಂದ ಹೇಳಿಸುತ್ತಾನೆ: 'ನಾನು ನನ್ನ ಸಂಪತ್ತಿನ ಅರ್ಧದಷ್ಟನ್ನೂ ಒಗ್ಗೂಡಿಸಲಾರೆ'. ಬಹುಶಃ ಅಮ್ಮನಿಗೆ ಹಾಗನ್ನಿಸಿರಬೇಕು.

ಅವನು 'ಸಾಂಸ್ಕೃತಿಕ ಕ್ರಾಂತಿ'ಯಲ್ಲಿ ಸತ್ತಿರಬೇಕು. ಬಹುಶಃ ಆಗಿದ್ದ ಪರಿಸ್ಥಿತಿಯಲ್ಲಿ, ದಿನಚರಿಯ ಆ ಭಾಗ ಅಸ್ಪಷ್ಟ ಮತ್ತು ಗೂಢವಾಗಿದೆ. ಅಮ್ಮನ ಬರವಣಿಗೆಯ ಮೇಲೆ ಸಾಕಷ್ಟು ದಾಳಿಯಾಗಿದ್ದು, ಅವಳು ದಿನಚರಿಯನ್ನು ಹೇಗೆ ಉಳಿಸಿಕೊಂಡಳೆಂದು ಆಶ್ಚರ್ಯವಾಗುತ್ತದೆ. ಕೆಲವು ಅಸ್ಪಷ್ಟ ಉಲ್ಲೇಖಗಳಿಂದ ನನಗೆ ತಿಳಿದುಬಂದದ್ದೆಂದರೆ ಅವನು ಆ ಕಾಲದ ಆಡಳಿತಾರೂಢರ ಕೃಪೆಯಲ್ಲಿದ್ದ 'ನೀತಿ ನಿರೂಪಕ'ನ ಸಿದ್ಧಾಂತಗಳನ್ನು ಪ್ರಶ್ನಿಸಿದ್ದ ಮತ್ತು ಯಾರಿಗೋ ಹೇಳಿದ್ದ, 'ಇದು ಶುದ್ಧ ಬಲಪಂಥೀಯ ತರ್ಕ.' ಅಮ್ಮನ ದಿನಚರಿಯ, ಕಣ್ಣೀರಿನಿಂದ ತೋಯ್ದ, ಪುಟಗಳಿಂದ ಸ್ಪಷ್ಟವಾಯಿತು- ಅವನನ್ನು ಕ್ರೂರವಾಗಿ ತುಳಿಯಲಾಯಿತು. ಆದರೆ ತತ್ವಬದ್ಧವಾದ ಆ ಮುದುಕ ಎಂದೂ ವ್ಯವಸ್ಥೆಯ ಒತ್ತಡಕ್ಕೆ ಬಲಿಯಾಗಲಿಲ್ಲ. ಅವನ ಕೊನೆಯ ಮಾತುಗಳು: 'ನಾನು ಮಾರ್ಕ್ಸ್‌ನನ್ನು ಕಾಣಲು ಹೋದಾಗ, ನನ್ನ ಸಿದ್ಧಾಂತಗಳಿಗಾಗಿ ಹೋರಾಡಲು ಹೋಗುತ್ತೇನೆ.'

ಅದು ೧೯೬೯ರ ಚಳಿಗಾಲ ಇರಬೇಕು. ಏಕೆಂದರೆ ರಾತ್ರಿ ಬೆಳಗಾಗುವಷ್ಟರಲ್ಲಿ ಅಮ್ಮನ ಕೂದಲು ಬೆಳ್ಳಗಾಗಿತ್ತು. ಅವಳಿಗಿನ್ನೂ ಐವತ್ತರ ಒಳಗೆ ವಯಸ್ಸು. ಅವಳು ಕೈಗೆ ಕಪ್ಪು ಪಟ್ಟಿಯನ್ನು ಕಟ್ಟಿಕೊಂಡಳು. ಅವಳ ಸ್ಥಿತಿ ಅತೀ ದಾರುಣವಾಗಿತ್ತು. ಅವಳ ಈ ಹಳೇಕ್ರಮದ ಶೋಕ ಸೂಚನೆಯನ್ನು ಟೀಕಿಸಿದವರು ಅವಳು ಯಾರಿಗಾಗಿ ಶೋಕಿಸುತ್ತಿದ್ದಾಳೆಂದು ಹೇಳಲು ಆದೇಶಿಸಿದರು.

'ನೀನು ಯಾರಿಗಾಗಿ ಅದನ್ನು ಧರಿಸಿದ್ದೀ, ಅಮ್ಮ ?' ನಾನು ಕುತೂಹಲದಿಂದ ಕೇಳಿದೆ.

'ನನ್ನ ಪ್ರೇಮಿಗಾಗಿ'. ನನಗೆ ಭಯವಾಗದಂತೆ ಅವಳು ವಿವರಿಸಿದಳು. 'ನಿನಗೆ ಗೊತ್ತಿಲ್ಲದ ಒಬ್ಬರಿಗಾಗಿ'.

'ನಾನೂ ಒಂದನ್ನು ಧರಿಸಲಾ ?' ಅವಳು ನನ್ನ ಗಲ್ಲವನ್ನು ಸವರಿದಳು. ನಾನು ಚಿಕ್ಕ ಮಗುವಾಗಿದ್ದಾಗ ಮಾಡಿದಂತೆ. ಅವಳು ಆ ರೀತಿ ಪ್ರೀತಿ ತೋರಿಸದೆ ವರುಷಗಳೇ ಸಂದಿದ್ದುವು. ನನಗೆ ಅನೇಕ ಬಾರಿ ಅನ್ನಿಸುತ್ತಿತ್ತು, ಅವಳಿಗೆ ವಯಸ್ಸಾದಂತೆಲ್ಲ ಅದೂ ಆ ಕೊನೆಯ ಹಿಂಸಾಚಾರದ ವರ್ಷಗಳಲ್ಲಿ ಎಲ್ಲ ಕೋಮಲತೆಯೂ ಅವಳನ್ನು ಬಿಟ್ಟುಹೋಗಿತ್ತು ಅಥವಾ ಅವಳದನ್ನು ಹೃದಯದಲ್ಲೇ ಅಡಗಿಸಿದ್ದಳು ಮತ್ತು ಒಬ್ಬ ಗಂಡಸಿನಂತೆ ವರ್ತಿಸುತ್ತಿದ್ದಳು ಎಂದು.

ಅವಳು ವಿಷಾದದಿಂದ ನಕ್ಕು ಹೇಳಿದಳು, 'ಬೇಡ, ನೀನು ಧರಿಸಬೇಕಾಗಿಲ್ಲ.'

ಅವಳ ಕಣ್ಣುಗಳು ಇನ್ನು ಸುರಿಸಲು ಕಣ್ಣೀರೇ ಇಲ್ಲವೇನೋ ಎಂಬಂತೆ ಒಣಗಿದ್ದುವು. ನಾನು ಅವಳನ್ನು ಸಾಂತ್ವನಪಡಿಸಲು ಅಥವಾ ಅವಳನ್ನು ಖುಷಿಯಲ್ಲಿಡಲು ಇನ್ನೇನಾದರೂ ಮಾಡಲು ಹಾತೊರೆದೆ. ಆದರೆ ಅವಳು ಹೇಳಿದಳು, 'ನೀನು ಎಲ್ಲಾದರೂ ಹೋಗು.'

ನನಗೆ ಹೇಳಿಕೊಳ್ಳಲಾಗದ ಭಯವಾಯಿತು. ನನ್ನ ಪ್ರೀತಿಯ ಅಮ್ಮ ಆಗಲೇ ನನ್ನನ್ನು ಅರ್ಧ ಬಿಟ್ಟು ಹೋದಂತಾಯಿತು. ನಾನು ಕಿರುಚಿದೆ, 'ಅಮ್ಮಾ'.

ನನ್ನ ಭಾವನೆಗಳನ್ನು ತಕ್ಷಣ ಅರ್ಥ ಮಾಡಿಕೊಂಡವಳಂತೆ ಅವಳು ಮೆತ್ತಗೆ ಹೇಳಿದಳು: 'ಹೆದರಬೇಡ, ನೀನು ಎಲ್ಲಾದರೂ ಹೋಗು, ನನ್ನನ್ನು ಸ್ವಲ್ಪ ಹೊತ್ತು ಒಬ್ಬಳೇ ಬಿಡು.'

ನನ್ನ ಯೋಚನೆ ಸರಿಯಾಗಿತ್ತು. ಅವಳು ಬರೆದಳು:

'ನೀನು ಹೋದೆ. ನನ್ನ ಆತ್ಮದ ಅರ್ಧಭಾಗ ನಿನ್ನ ಜೊತೆಗೇ ಹಾರಿಹೋದಂತೆ ಅನ್ನಿಸುತ್ತದೆ.

'ನಿನಗೇನಾಯಿತೆಂದು ತಿಳಿಯುವುದು ನನ್ನಿಂದಾಗಲಿಲ್ಲ. ಹೋಗಲಿ, ನಿನ್ನನ್ನು ಕೊನೇ ಬಾರಿ ನೋಡುವುದೂ ಆಗಲಿಲ್ಲ. ಹಾಗೆ ಕೇಳುವ ಹಕ್ಕೂ ನನಗಿರಲಿಲ್ಲ. ನಿನ್ನ ಪತ್ನಿಯಾಗಲೀ ಗೆಳತಿಯಾಗಲೀ ನಾನಲ್ಲವಲ್ಲ.....! ಹಾಗಾಗಿ ನಾವು ದೂರದೂರ ಚೂರಾಗಿದ್ದೇವೆ. ನೀನು ಅನುಭವಿಸಿದ ಅಮಾನುಷ ಶಿಕ್ಷೆಯನ್ನು ನಾನು ಅನುಭವಿಸಿ ನೀನು ಬದುಕುವುದು ಸಾಧ್ಯವಿದ್ದಿದ್ದರೆ ಎಂದು ಆಶಿಸುತ್ತೇನೆ. ನೀನು ಅಪವಾದಗಳಿಂದ ಮುಕ್ತನಾಗಿ ಮತ್ತೆ ನಿನ್ನ ಕರ್ತವ್ಯದಲ್ಲಿ ಪಾಲ್ಗೊಳ್ಳುವುದು ಸಾಧ್ಯವಿದ್ದಿದ್ದರೆ, ಕನಿಷ್ಠ ನಿನ್ನನ್ನು ಪ್ರೀತಿಸುವವರಿಗಾಗಿಯಾದರೂ ನೀನು ಕ್ರಾಂತಿ ವಿರೋಧಿಯಾಗುವುದು ಸಾಧ್ಯವಿಲ್ಲವೆಂದು ನನಗೆ ಗೊತ್ತಿತ್ತು. ಕೊಲ್ಲಲ್ಪಟ್ಟ ಒಳ್ಳೆಯ ಮನುಷ್ಯರಲ್ಲಿ ನೀನು ಒಬ್ಬ. ಆದ್ದರಿಂದಲೇ ನಾನು ನಿನ್ನನ್ನು ಪ್ರೀತಿಸುತ್ತೇನೆ - ಹಾಗೆ ಘೋಷಿಸಿಕೊಳ್ಳುವುದಕ್ಕೆ ನನಗೆ ಭಯವಾಗುತ್ತಿಲ್ಲ.

'ಹಿಮ ಬೀಳುತ್ತಿದೆ. ಓ ಸ್ವರ್ಗಗಳೇ' ದೇವರು ಕೂಡಾ ಒಬ್ಬ ಕಪಟಿ. ನಿನ್ನ ರಕ್ತ ಮತ್ತು ನಿನ್ನ ಕೊಲೆಯ ಹಗರಣವನ್ನು ಮುಚ್ಚಲು ದೇವರು ಈ ಬಿಳಿಯನ್ನುಪಯೋಗಿಸುತ್ತಿದ್ದಾನೆ.

'ನಾನು ನನ್ನ ಬದುಕಿಗಾಗಿ ಏನನ್ನೂ ಸಂಗ್ರಹಿಸಿಟ್ಟಿಲ್ಲ. ಈಗ ನನಗೆ ಬೆರಗಾಗುತ್ತಿದೆ: ನಾನೇನಾದರೂ ಹೇಳಿದರೆ ಅಥವಾ ಮಾತನಾಡಿದರೆ ಅದು ನಿನ್ನನ್ನು ಸಿಟ್ಟಿನಲ್ಲಿ ಹುಬ್ಬುಗಂಟಿಕ್ಕಿಸಬಲ್ಲುದೇ ಎಂದು. ನಾನು ನಿನ್ನ ಹಾಗೇ ಅರ್ಥಪೂರ್ಣವಾಗಿ ಬದುಕಬೇಕು ಮತ್ತು ನಮ್ಮ ದೇಶಕ್ಕಾಗಿ ಏನಾದರೂ ಪ್ರಾಮಾಣಿಕ ಕೆಲಸವನ್ನು ಮಾಡಬೇಕು. ಹೀಗೇ ಮುಂದುವರಿಯುವುದು ಶಕ್ಯವಿಲ್ಲ. ಆ ಅಪರಾಧಿಗಳು ಅವರಿಗೆ ತಕ್ಕುದನ್ನು ಪಡೆದೇ ತೀರುತ್ತಾರೆ.

'ನಾನು ಒಬ್ಬಳೇ ಆ ಚಿಕ್ಕ ಡಾರು ರಸ್ತೆಯಲ್ಲಿ ಹೋಗುತ್ತೇನೆ. ಅಲ್ಲೇ ನಾವಿಬ್ಬರೂ ಒಟ್ಟಾಗಿ ಒಮ್ಮೆ ನಡೆದಿದ್ದೆವು. ನನ್ನ ಕಾಲಹೆಜ್ಜೆ ಸಪ್ಪಳವನ್ನು ಕತ್ತಲಿನ ಮೌನದಲ್ಲಿ ಕೇಳುತ್ತ..... ನಾನು ಸದಾ ಅಲ್ಲಿ ಹೋಗಿ ಬಂದು ಅಲೆಯುತ್ತಿದ್ದೆ. ಆದರೆ ಯಾವತ್ತೂ ಇಷ್ಟು ದಯನೀಯವಾಗಿರಲಿಲ್ಲ. ಆಗ, ನೀನು ಜೊತೆಗಿಲ್ಲದಿದ್ದರೂ ನೀನು ಈ ಜಗತ್ತಿನಲ್ಲಿದ್ದೀ ಮತ್ತು ನನ್ನ ಜೊತೆಗಿದ್ದೀ ಎಂದು ಭಾವಿಸುತ್ತಿದ್ದೆ. ಈಗ ನಾನು ನೀನು ಅಗಲಿದ್ದೀ ಎಂದು ನಂಬಲಾರೆ.

'ದಾರಿಯ ಕೊನೆಗೆ ನಾನು ಹೆಜ್ಜೆ ಗುರುತನ್ನು ಹುಡುಕುತ್ತೇನೆ ಮತ್ತು ಅದೇ ಹೆಜ್ಜೆಗಳ ಮೇಲೆ ನಡೆಯುತ್ತೇನೆ.

'ಬೇಲಿ ತಿರುಗುವಲ್ಲಿ ನಾನು ಯಾವಾಗಲೂ ಹಿಂದೆ ನೋಡುತ್ತೇನೆ. ನೀನು ನಿಂತು ವಿದಾಯ ಹೇಳುತ್ತಿದ್ದೀಯೇನೋ ಎಂಬ ಭಾವದಲ್ಲಿ. ನಾವು ಪೇಲವವಾಗಿ ನಕ್ಕೆವು. ಅಪರೂಪದ ಪರಿಚಿತರಂತೆ, ನಮ್ಮ ಸಾವಿಲ್ಲದ ಪ್ರೀತಿಯನ್ನು ಅಡಗಿಸುತ್ತ. ಬೇಸಗೆಯ ಆರಂಭದ ಆ ಸಾಮಾನ್ಯ ಸಂಜೆಯಲ್ಲಿ ನಾವಿಬ್ಬರೂ ದೂರ ದೂರ ಮೌನವಾಗಿ ನಡೆಯುತ್ತಿದ್ದಾಗ ಒಂದು ತಣ್ಣನೆಯ ಗಾಳಿ ಬೀಸುತ್ತಿತ್ತು. ನೀನು ನಿನ್ನ ಕೆಮ್ಮಿನ ಕಾಹಿಲೆಯಿಂದ ಬಳಲಿ ಕೆಮ್ಮುತ್ತಿದ್ದೆ. ಅದು ನನ್ನನ್ನು ಧೃತಿಗೆಡಿಸಿತು. ನಾನು ನಿನ್ನನ್ನು ನಿಧಾನವಾಗಿ ನಡೆಯೆಂದು ಬೇಡಬೇಕೆಂದುಕೊಂಡೆ, ಆದರೆ ಯಾಕೋ ಅದು ನನ್ನಿಂದಾಗಲಿಲ್ಲ. ನಾವಿಬ್ಬರೂ ವೇಗವಾಗಿ ನಡೆದೆವು. ಯಾವುದೋ ಮುಖ್ಯ ವ್ಯವಹಾರ ನಮ್ಮಿಬ್ಬರನ್ನು ಕಾಯುತ್ತಿದೆಯೋ ಎಂಬಂತೆ. ಆ ನಮ್ಮ ಒಂದು ತಿರುಗಾಟವನ್ನು ನಾವೆಷ್ಟು ಅಮೂಲ್ಯವಾಗಿಟ್ಟುಕೊಂಡಿದ್ದೇವೆ, ಆದರೆ ನಾವಿಬ್ಬರೂ ಎಲ್ಲಿ ನಮ್ಮ ನಿಯಂತ್ರಣ ತಪ್ಪಿ ಒಮ್ಮೆಗೇ 'ನಾನು ನಿನ್ನನ್ನು ಪ್ರೀತಿಸುತ್ತೇನೆ' ಎಂದು ಸ್ಫೋಟಗೊಳ್ಳುತ್ತೇವೋ - ಆ ಮೂರು ಪದಗಳು ನಮ್ಮನ್ನು ವರ್ಷಾನುಗಟ್ಟಲೆ ಯಾತನೆಗೀಡುಮಾಡಿದೆ. ನಾವು ಪರಸ್ಪರರ ಕೈಗಳನ್ನು ಕುಲುಕಲಿಲ್ಲವೆಂದು ಪ್ರಾಯಶಃ ಯಾರೂ ನಂಬಲಾರರು !'

ಇಲ್ಲ, ಅಮ್ಮ, ನಾನು ನಂಬುತ್ತೇನೆ. ನಿನ್ನ ಮುಚ್ಚಿದ ಹೃದಯದೊಳಗೇನಿದೆಯೆಂದು ನೋಡಬಲ್ಲವಳು ನಾನು ಮಾತ್ರ.

ಆಹ್, ಚಿಕ್ಕ ಟಾರ್ ರಸ್ತೆ, ಕಹಿ ಅನುಭವಗಳಿಂದ ಕಾಡಿದ್ದು. ಭೂಮಿಯ ಅತ್ಯಂತ ಅಮುಖ್ಯವಾದ ಸ್ಥಳಗಳನ್ನು ನಾವು ಅಲಕ್ಷಿಸಬಾರದು. ಯಾರಿಗೆ ಗೊತ್ತು ಅವೆಲ್ಲ ಎಂಥ ರಹಸ್ಯ ನೋವು ನಲಿವುಗಳನ್ನು ಅಡಗಿಸಿಕೊಂಡಿವೆ !

ನನಗೆ ಆಶ್ಚರ್ಯವೆನಿಸುವುದಿಲ್ಲ - ಅವಳು ಬರೆದು ಸುಸ್ತಾದಾಗ ನಮ್ಮ ಕಿಟಕಿಯ ಹಿಂದಿನ ಆ ಪುಟ್ಟ ರಸ್ತೆಯಲ್ಲಿ ನಿಧಾನ ಹೆಜ್ಜೆಯಿಟ್ಟು ನಡೆಯುವಳು. ಕೆಲವು ಸಲ ನಿದ್ರೆಯಿಲ್ಲದ ರಾತ್ರಿಯ ನಂತರದ ಬೆಳಗಿನಲ್ಲಿ, ಕೆಲವು ಸಲ ಚಂದ್ರನಿಲ್ಲದ, ಗಾಳಿ ಬೀಸುವ ಸಂಜೆಯಲ್ಲಿ ಚಳಿಗಾಲದಲ್ಲೂ ಅಬ್ಬರದ ಸದ್ದಿನ ಬಿರುಗಾಳಿಯಲ್ಲಿ ಮರಳೂ ಕಲ್ಲಹರಳುಗಳೂ ಕಿಟಕಿಯ ಗಾಜಿನ ಮೇಲೆ ಬೀಳುವಾಗ.... ನಾನಿದೆಲ್ಲ ಅವಳ ಹುಚ್ಚುತನವೆಂದುಕೊಂಡಿದ್ದೆ - ಅವಳು ಅವನನ್ನು ಆತ್ಮದ ಮೂಲಕವೇ ಸಂಧಿಸಲು ಹೋಗಿದ್ದಳೆಂದು ತಿಳಿಯದೆ.

ಅವಳು ಕಿಟಕಿಯ ಬಳಿ ನಿಲ್ಲಲು ಇಷ್ಟಪಡುತ್ತಿದ್ದಳು. ಚಿಕ್ಕ ಟಾರು ರಸ್ತೆಯನ್ನು ದಿಟ್ಟಿಸುತ್ತ, ಒಂದು ಸಲ ಅವಳ ಮುಖಭಾವದಿಂದ ಅವಳ ಆತ್ಮೀಯ ಗೆಳೆಯರಾರೋ ಅವಳನ್ನು ಕರೆಯಲು ಬರುತ್ತಿರಬೇಕೆಂದುಕೊಂಡಿದ್ದೆ. ನಾನು ಕಿಟಕಿಯ ಬಳಿ ಧಾವಿಸಿದೆ. ಅದು ಚಳಿಗಾಲದ ಮಬ್ಬು ಸಂಜೆಯಾಗಿತ್ತು. ಚಳಿಗಾಳಿ ಮರಗಳಿಂದ ಸತ್ತ ಎಲೆಗಳನ್ನು ಬೀಳಿಸಿ ಅವನ್ನು ರಸ್ತೆಯ ಮೇಲೆ ಹಾರಿಸುತ್ತಿತ್ತು.

ಅವಳು ಅವನು ಬದುಕಿದ್ದಾಗ ಹೇಗೋ ಹಾಗೆಯೇ ತನ್ನ ಹೃದಯವನ್ನು ದಿನಚರಿಯಲ್ಲಿ ಅವನಿಗೆ ನೀಡುತ್ತಿದ್ದಳು. ಅವಳ ಬೆರಳುಗಳಿಂದ ಪೆನ್ನು ಜಾರಿ ಬೀಳುವವರೆಗೂ. ಅವಳ ಕೊನೆಯ ಸಂದೇಶವೆಂದರೆ :

'ನೀನು ವಾಸ್ತವವಾದಿ, ಆದರೂ ಸ್ವರ್ಗವೆಂಬುದು ಇರಬೇಕೆಂದು ಬಯಸುತ್ತೇನೆ. ಏಕೆಂದರೆ, ಆಗ ಅಲ್ಲಿ ನಾನು ನನಗಾಗಿ ಕಾಯುತ್ತಿರುವ ನಿನ್ನನ್ನು ಕಾಣಬಲ್ಲೆ, ನಾನು ಅಲ್ಲಿಗೆ ನಿನ್ನನ್ನು ಸೇರಲೆಂದೇ ಹೋಗುತ್ತೇನೆ. ಅನಂತಕಾಲದವರೆಗೆ ಜೊತೆಯಾಗಿರುವುದಕ್ಕೆ. ನಾವು ಮತ್ತೆ ಬೇರೆಯಾಗುವ ಅಗತ್ಯ ಬರುವುದಿಲ್ಲ ಮತ್ತು ಯಾರೋ ಒಬ್ಬರ ಬದುಕನ್ನು ಹಾಳುಮಾಡುವ ಭಯಕ್ಕಾಗಿ ದೂರವಿರಬೇಕಾದ ಅಗತ್ಯವಿಲ್ಲ. ನನಗಾಗಿ ಕಾದಿರು, ನನ್ನ ಪ್ರೀತಿಯೇ, ನಾನು ಬರುತ್ತಿದ್ದೇನೆ.'

ಅಮ್ಮ ಅವಳ ಸಾವಿನ ಶಯ್ಯೆಯಲ್ಲೂ ಇಷ್ಟು ಉತ್ಕಟವಾಗಿ ಹೇಗೆ ಪ್ರೀತಿಸಬಲ್ಲವಳಾಗಿದ್ದಳು ಎಂದು ನನಗೆ ನಿಜಕ್ಕೂ ಗೊತ್ತಿಲ್ಲ. ನನಗದು ಪ್ರೀತಿಯೆಂದೆನ್ನಿಸುವುದಿಲ್ಲ. ಒಂದು ಥರದ ಹುಚ್ಚು, ಸಾವಿಗಿಂತಲೂ ಗಟ್ಟಿಯಾದ ಮೋಹ. ಸಾವಿಲ್ಲದ ಪ್ರೀತಿಯೊಂದು ನಿಜಕ್ಕೂ ಇದ್ದರೆ, ಅವಳು ಅದರ ಚರಮಾವಸ್ಥೆಯನ್ನು ತಲುಪಿದ್ದಾಳೆ. ಅವಳು ಸಂತೋಷವಾಗಿಯೇ ಸತ್ತಿರಬೇಕು. ಏಕೆಂದರೆ ಅವಳಿಗೆ ನಿಜವಾದ ಪ್ರೀತಿಯೆಂದರೇನೆಂದು ತಿಳಿದಿತ್ತು. ಅವಳಿಗೆ ಯಾವ ವಿಷಾದವೂ ಇರಲಿಲ್ಲ.

ಈಗ ಈ ಹಳೇ ಮಂದಿಯ ಬೂದಿಗಳು ಮೂಲದೊಂದಿಗೆ ಸೇರಿವೆ. ಅವು ಯಾವುದೇ ರೂಪದಲ್ಲಿರಲಿ, ಅವಿನ್ನೂ ಪರಸ್ಪರ ಪ್ರೀತಿಸುತ್ತಿವೆಯೆಂದು ನನಗನ್ನಿಸುತ್ತದೆ. ಈ ಮಣ್ಣಿನ ಕಾನೂನು ಅಥವಾ ನೈತಿಕತೆಯಿಂದ ಅವರು ಒಂದಾಗದಿದ್ದರೂ, ಅವರೆಂದೂ ಪರಸ್ಪರ ಕೈ ಕುಲುಕದಿದ್ದರೂ, ಅವರು ಪರಸ್ಪರ ಪೂರ್ಣ ಆವರಿಸಿಕೊಂಡಿದ್ದರು. ಯಾವುದೂ ಅವರನ್ನು ಪ್ರತ್ಯೇಕಿಸದು. ಶತಮಾನಗಳ ನಂತರವೂ ಒಂದು ಮೋಡ ಇನ್ನೊಂದನ್ನು ಹಿಂಬಾಲಿಸುತ್ತಿದ್ದರೆ, ಎರಡು ಹುಲ್ಲಿನ ಗಿಡಗಳು ಅಕ್ಕಪಕ್ಕ ಬೆಳೆದರೆ, ಒಂದು ಅಲೆ ಇನ್ನೊಂದನ್ನಪ್ಪಳಿಸಿದರೆ, ಒಂದು ಗಾಳಿ ಇನ್ನೊಂದನ್ನು ಸರಿಸಿದರೆ.... ನನ್ನ ನಂಬಿ, ಅವು ಅವರಿಬ್ಬರೇ.

ಪ್ರತಿ ಸಲವೂ ನಾನು 'ಮರೆಯಬಾರದು ಒಲವ' ಎಂಬ ಆ ದಿನಚರಿಯನ್ನು ಓದಿದಾಗ ನನಗೆ ಕಣ್ಣೀರನ್ನು ತಡೆಯಲಾಗುತ್ತಿಲ್ಲ, ಹೆಚ್ಚಾಗಿ ನಾನು ಉತ್ಕಟವಾಗಿ ಅಳುತ್ತೇನೆ. ನಾನೇ ಆ ದುರಂತ ಪ್ರೀತಿಯನ್ನನುಭವಿಸಿದ ಹಾಗೆ. ಅದು ದುರಂತವಲ್ಲದಿದ್ದರೆ ನಗುವ ಸಂಗತಿಯಂತೂ ಖಂಡಿತಾ ಅಲ್ಲ. ಅದು ಎಷ್ಟೇ ಸುಂದರವಾಗಿರಲಿ ಅಥವಾ ಭಾವನಾತ್ಮಕವಾಗಿರಲಿ ನನಗೆ ಅಂಥದೊಂದನ್ನು ಅನುಸರಿಸುವ ಇಷ್ಟವಿಲ್ಲ !

ಥಾಮಸ್ ಹಾರ್ಡಿ ಬರೆದ : 'ಕರೆ ಅಪರೂಪಕ್ಕೆ ಬರುವವನನ್ನು ಸೃಷ್ಟಿಸುತ್ತದೆ. ಪ್ರೀತಿಸುವ ಮನುಷ್ಯನಿಗೂ ಪ್ರೀತಿಯ ಘಳಿಗೆಗೂ ಹೊಂದಾಣಿಕೆಯಾಗುವುದು ತೀರಾ ಅಪರೂಪ.' ನಾನು ಪರಂಪರಾನುಗತ ನೈತಿಕ ಮೌಲ್ಯಗಳಿಂದ ಅವರನ್ನು ಟೀಕಿಸಲಾರೆ. ನನಗೆ ಬೇಸರವಾಗುವುದೆಂದರೆ ಅವರು ತಮ್ಮನ್ನು ಕರೆಯುವ 'ಕಳೆದುಹೋದ ಜೊತೆಗಾರ'ರಿಗಾಗಿ ಕಾಯಲಿಲ್ಲ.

ಮದುವೆಗಾಗಿ ಅವಸರ ಮಾಡುವ ಬದಲು ಎಲ್ಲರೂ ಹೀಗೆ ಕಾಯುವುದು ಸಾಧ್ಯವಿದ್ದಿದ್ದರೆ ಎಷ್ಟೋ ದುರಂತಗಳನ್ನು ತಪ್ಪಿಸಬಹುದು !

ನಾವು ಕಮ್ಯುನಿಸಮ್ಮನ್ನು ತಲುಪುವಾಗ ಅಲ್ಲಿ ಪ್ರೀತಿಯಿಲ್ಲದ ಮದುವೆಗಳಿರಬಹುದೇ ? ಇರಬಹುದು. ಏಕೆಂದರೆ ಈ ಜಗತ್ತು ತುಂಬಾ ವಿಶಾಲವಾಗಿದೆ. ಎರಡು ಮಾರ್ದವಗೊಂಡ ಆತ್ಮಗಳು ಪರಸ್ಪರರ ಕರೆಯನ್ನು ಕೇಳಲಾರವು. ಎಂಥ ದುರಂತ ! ಆದರೆ, ಆ ಸಮಯಕ್ಕೆ ಅಂಥ ದುರಂತಗಳನ್ನು ತಪ್ಪಿಸುವ ದಾರಿಗಳಿದ್ದಾವು.

ನಾನೇಕೆ ಈ ಕೂದಲುಗಳನ್ನು ಸೀಳಲಿ ?

ಬಹುಶಃ ನಾವೆಲ್ಲರೂ ಈ ದುರಂತಗಳಿಗೆ ಜವಾಬ್ದಾರರು. ಯಾರಿಗೆ ತಿಳಿದಿದೆ ? ಹಳೆಯ ವಿಚಾರಗಳು ಭೂತದಿಂದ ವರ್ತಮಾನಕ್ಕೆ ಬಂದದ್ದರ ಜವಾಬ್ದಾರಿಯನ್ನೂ ನಾವೇ ತೆಗೆದುಕೊಳ್ಳಬೇಕೇನೋ ? ಏಕೆಂದರೆ ಯಾರಾದರೂ ಮದುವೆಯಾಗದೇ ಇದ್ದರೆ ಅದು ಈ ವಿಚಾರಗಳಿಗೆ ಸವಾಲೇ ಸರಿ. ನಿಮ್ಮನ್ನು ರಹಸ್ಯ ಅಪರಾಧಗಳನ್ನು ಹೊತ್ತಿರುವ ಮನೋರೋಗಿಯೆಂದೋ ಅಥವಾ ರಾಜಕೀಯ ತಪ್ಪುಗಳನ್ನು ಮಾಡಿದವರೆಂದೋ ಹೇಳಿಯಾರು. ಹಳೆಯ ಸಂಪ್ರದಾಯಗಳನ್ನು ಗೌರವಿಸದ, ಜನಸಾಮಾನ್ಯರನ್ನು ತುಚ್ಛವಾಗಿ ಕಾಣುವ ಒಬ್ಬ ಅತಿರೇಕದವನೆಂದೋ ದ್ರೋಹಿಯೆಂದೋ ತಿಳಿದಾರು. ಸಂಕ್ಷಿಪ್ತವಾಗಿ ಹೇಳುವುದಾದರೆ, ನಿಮ್ಮ ಘನತೆಯನ್ನು ಕುಗ್ಗಿಸುವ ಎಲ್ಲಾ ಅಸಭ್ಯ ಅಸಹ್ಯ ಆರೋಪಗಳನ್ನು ಮಾಡಿಯಾರು. ಆಗ ನೀವು ಆ ಒತ್ತಡಗಳಿಗೆ ಸಿಲುಕಿ ತತ್ತರಿಸಿ ಇಷ್ಟವಿಲ್ಲದ ಮದುವೆಯಾಗುವಿರಿ. ಆದರೆ ಪ್ರೀತಿಯಿಲ್ಲದ ಮದುವೆಯ ಉರುಳನ್ನು ಕೊರಳಿಗೆ ಹಾಕಿಕೊಂಡಿರೋ, ಉಳಿದ ನಿಮ್ಮ ಜನ್ಮವಿಡೀ ನೀವು ನರಳಬೇಕು.

ನಾನು ಕಿರುಚಬೇಕೆಂದುಕೊಳ್ಳುತ್ತೇನೆ : ನೀವು ನಿಮ್ಮ ವ್ಯವಹಾರ ನೋಡಿಕೊಳ್ಳಿ ! ನಾವು ತಾಳ್ಮೆಯಿಂದ ನಮ್ಮ ಜೊತೆಗಾರರಿಗಾಗಿ ಕಾಯೋಣ. ನಿರರ್ಥಕವಾಗಿ ಕಾಯುವುದು ಕೂಡಾ ಇಷ್ಟಪಡದ ಮದುವೆಗಿಂತ ಒಳ್ಳೆಯದು. ಒಬ್ಬಳೇ ಬದುಕುವುದು ಅಂಥಾ ಭಯಾನಕ ದುರಂತವೇನಲ್ಲ. ಅದು ಸಂಸ್ಕೃತಿಯ, ವಿದ್ಯೆಯ ಮತ್ತು ಬದುಕಿನ ಗುಣಮಟ್ಟಗಳ ಕಡೆ ಹೆಜ್ಜೆಯಿಡುವ ಒಂದು ಸಂಕೇತವೆಂದು ನಾನು ನಂಬುತ್ತೇನೆ.

(ಕೃಪೆ : ಸಾಹಿತ್ಯ ಅಕಾಡೆಮಿ - Love must not be forgotten - ಗ್ಲಾಡಿಸ್ ಯಂಗ್)

ಕನ್ನಡಕ್ಕೆ : **ಬಾಲಸುಬ್ರಹ್ಮಣ್ಯ ಕಂಜರ್ಪಣೆ**
ವಕೀಲರು, ಸಿರಿ, ಬ್ರ್ಯಾಹ್ಮಿನ್ ವ್ಯಾಲಿ, ಮಡಿಕೇರಿ
ಕೊಡಗು-೫೭೧ ೨೦೧

# ಇನ್ನೆಲ್ಲಿ ಗುಡ್ಲು ಹಾಕೋದು...?...ಅವೆಲ್ಲ

ದಂಡಿನಶಿವರ ತಿಮ್ಮೇಗೌಡ

**ಎಚ್‌ಎಮ್‌ಟಿ ಬಹುಮಾನಿತ ಲೇಖನ**




**ನಾನು** ಹೇಳೋದು ಕತೆಯೋಪಾದಿಯ ನಾನೇ ಅನುಭವಿಸಿದ ಹಳೆಯ ಒಂದು ನೆನಪು ಅಂದರೆ ತಪ್ಪಲ್ಲ. ಅದರಂತೇ ನಮ್ಮ ಹಿಂದಿನ ಅಂದರೆ ಇಲ್ಲಿಗೆ ಹದಿನೇಳು- ಹದಿನೆಂಟು ವರ್ಷಗಳ ನೆನಪನ್ನು ಇಂದಿನ ಈ ಸಮಯಕ್ಕೆ ಹೋಲಿಸುತ್ತಾ, ಆ ಬಾಲ್ಯವ ಮೆಲುಕುತ್ತಾ...



ನಾನು ಆಗ ಮೂರನೇ ತರಗತಿಯಲ್ಲಿ ಓದುತ್ತಾ ಇದ್ದೆ. ಅಂದಿನ ಸ್ನೇಹಿತರನ್ನು ಈಗ ಕೂತುಕೊಂಡು ನೆನಸಿಕೊಂಡು ಒಬ್ಬನೇ ನಗುವುದೂ ಉಂಟು. ನಮ್ಮನೆ ಕಪ್ಪೆಂಚಿನ ಮನೆ; ಅದರ ಮುಂದೆ ಸ್ಕೂಲ ಫೀಲ್ಡು. ಪಕ್ಕದಲ್ಲಿ ಎಡಗಡೆ - ಬಲಗಡೆ ಮೂರ್ನಾಲ್ಕು ಮನೆ ಸಾಲು. ಪಕ್ಕದಲ್ಲಿ ಎಡಕ್ಕೆ ಕುಂಬಾರರ ಬೈರಣ್ಣನ ಮನೆ. ಅವ್ನ ಕಿರೇ ಮಗಳು ಪದ್ದೀ. ಇವಳು ನಮಗಿಂತಲೂ ಮೂರೊರ್ಷ ದೊಡ್ಡವಳು. ಅದೇ ಬಲಕ್ಕೆ ಕೆಂಪಮ್ಮಜ್ಜಿ ಮನೆ. ಈ ಅಜ್ಜಿ ನಾನು ಸಣ್ಣದರಿಂದಲೂ ಮ್ಯಾಕೆ ಸಾಕುತ್ತಿದೆ. ಈಗಲೂ ಒಂದು ಆರು ಮ್ಯಾಕೆ ಸಾಕುತ್ತಲೇ ಇದೆ. ಆದ್ರೂ ಈಗವಜ್ಜಿಗೆ ಎಂಭತ್ತೈದು ವರ್ಷ. ಸುಮಾರು ಅರವತ್ತೊರ್ಷದಿಂದ ಮ್ಯಾಕೇನೇ ಸಾಕ್ತಾ ಐತೆ. ಅಂದ್ರೆ ಅದೆಷ್ಟು ಸಾವಿರ ಮ್ಯಾಕೆಯ ಸಾಕಿ ಸಾಬ್ರಿಗೆ ಮಾರಿರಬೇಕು..., ಅದೆಷ್ಟು ಗಿಡಮರದ ಸೊಪ್ಪು ಕಿತ್ತಿರಬೇಕು - ರೋಟಲಿ.. ಅನುತ್ತೆ, ಆವಜ್ಜಿ ಜೀವನ ಹೇಗೆ ನಡೀಬೇಕು ಅನುತ್ತೆ - ಒಂದ್ಕಡೆ.

ಈ ಅಜ್ಜಿ ನೋಡಿದರೆ ಮದುವೆಯಾಗಿ ಊರಿಗೆ ಬಂದಾಗ್ನಿಂದಲೂ ಮ್ಯಾಕೆ ಕಾಯುತ್ತಿತ್ತಾ? ಅನ್ನಿಸುತ್ತೆ. ಏಕೆಂದರೆ ಈ ಅಜ್ಜಿ ಕುಳ್ಳಗೆ ಆಗ ಹ್ಯಾಗಿತ್ತೋ ಅದೇ ಥರ ಈಗ್ಲೂ ನನ್ನ ಕಣ್ಣಿಗೆ ಕಾಣತ್ತೈತೆ. ಇನ್ನೊಂದೇನಂದ್ರೆ ಈ ಅಜ್ಜಿ ಬಸ್ಸಾರು, ಮುದ್ದೆ ಮಾಡಿದ್ರೆ ಇಡೀ ನಮ್ಮನೆ ಸುತ್ತೆಲ್ಲ 'ಘಮ್' ಅಂತಿತ್ತು. ಈ ಅಜ್ಜಿ ಸಕತ್ತು ಸ್ವಾಭಿಮಾನಿ; ಸ್ವಾವಲಂಬಿ. ಇನ್ನೊಂದಂದ್ರೆ ಒಂದು ದಿವಸವೂ ಯಾವುದೇ ಡಾಕ್ಟ್ರ ಬಳಿ ಹೋಗಿ ಇಂಜೆಕ್ಷನ್ ತಗೊಂಡಿಲ್ಲ ಅನ್ನುವುದು. ಇಂದಿಗೂ ಅದೇ ರೀತಿಯಿದೆ. ಈ ಅಜ್ಜಿಯ ಮಗಳ ಮಗಳೇ ಪಾರಿ (ಪಾರ್ವತಮ್ಮ). ಅವ್ಳು ನನಗಿಂತ ಒಂದ್ಯೆದಾರೊರ್ಷ ದೊಡ್ಡೋಳು. ಇವಳ ತಮ್ಮ ರಮೇಶ ನನ್ ಜೊತೇನು. ಇನ್ನ ಕುಂಬಾರರ ಪದ್ದಿ; ಇವ್ಳು ಪಾರಿ, ರಮೇಶ, ಇನ್‌ಕೆಲವರು ಜೊತೆಗೂಡಿಕೊಂಡು ಅಂದಿನ ರಜಾದಿವಸಗಳಲ್ಲಿ ಮತ್ತು ಶನಿವಾರ ಒಪ್ಪೊತ್ತು ಸ್ಕೂಲು ಆದ ನಂತರವೇ ಶುರುವಾಗುತ್ತಿತ್ತು ನಮ್ಮ ಆಟಗಳು. ಅಂದ್ರೆ ನಮ್ಮ ಆಗಿನ ಆಟಗಳ ಪೈಕಿ ಹೆಚ್ಚಿಗೆ ಆಡುತ್ತಿದ್ದ ಆಟ ಎಂದರೆ ಅಡುಗೆ ಆಟ. ಅಡುಗೆ ಮಾಡುವುದು, ಮರಳಿನಲ್ಲಿ ಮನೆ ಕಟ್ಟುವುದು - ಅದರಲ್ಲಿ ಸಣ್ಣ ಕೋಣೆಗಳೋಪಾದಿಯಲ್ಲಿ ಪಡಸಾಲೆ, ಅಡುಗೆ ಮನೆ ಎಂದು ಮರಳಿನಲ್ಲಿ ಕಟ್ಟುತ್ತಿದ್ದೆವು. ಮತ್ತೊಂದು ವಿಶೇಷವೆಂದರೆ ಈ ಮನೆಯಲ್ಲಿ ಅಡುಗೆ ಮಾಡಲೆಂದು ಬಳಸುವ ಮಡಕೆ, ಕುಡಿಕೆಗಳಿಗೆ ನಮ್ಮ ಮನೆಗೆ ಸಮೀಪದ 'ಕಾಲ್ಗಟ್ಟಮ್ಮ'ನ ದೇವರಿಗೆ ಬೇವಿನ ಮರಕ್ಕೆ ಪೂಜೆ ಮಾಡಿ ಅಲ್ಲಿ ಕೋಳಿ ಕುಯ್ಕೊಂಡು ಹೋಗುತ್ತಿದ್ದರು. ಅದೂ ಹೆಚ್ಚು ಮಂಗಳವಾರ - ಶುಕ್ರವಾರವೆ ನಡೆಯುತ್ತಿದ್ದರಿಂದ ನಾವು ಶನಿವಾರ ಆ ಜಾಗಕ್ಕೆ ಹೋದಾಗ ಬೇವಿನ ಮರದ ಬುಡದಲ್ಲಿ ಕೋಳಿ ರಕ್ತ ಚಲ್ಲಿರುವುದು, ಆಗಲೇ ಒಣಗಿ, ನಾಯಿ ಸಾಧ್ಯವಾದಷ್ಟನ್ನು ನೆಕ್ಕಿ ಇನ್ನುಳಿದ ರಕ್ತ ಮಣ್ಣಲ್ಲಿ ಬೆರೆತಿರುವುದರಿಂದ ನೆಕ್ಕಲು ಆಗದೇ ಉಳಿದ ರಕ್ತದ ಕಲೆ ಗೋಚರಿಸುತ್ತಿತ್ತು. ಅರ್ಧ ಕೋಳೀನ ದೇವಸ್ಥಾನದಲೆ ಸೀಕೊಂಡು ಹೋಗ್ಬೇಕು ಅನ್ನೋ ಪದ್ಧತಿಯಂತೆ ಕೋಳಿ ಅರ್ಧಸುಟ್ಟು ಉಳಿದ ಬೂದಿ ಪುಕ್ಕಗಳು ಗಾಳಿ ಬೀಸಿದ ಕಡೆಯಲ್ಲಿ ಜೋರಾಗಿ ಪುಷ್ಪಕ ಇಮಾನದಂತೆ ಹಾರಾಡುತ್ತಿದ್ದವು. ಅವ ಹಿಡಿಯುವುದೇ ನಮಗೆ ದೊಡ್ಡ ಚೇಷ್ಟೆಯಾಗಿತ್ತು. ಇದಲ್ಲದೇ ಅರ್ಧಮರ್ಧ ಬಾಡಿಹೋಗಿ ಬಿದ್ದಿದ್ದ ಬೇವಿನ ಸೊಪ್ಪು, ಕಡ್ಲೆ ತಮ್ಬಿದ ಚೂರು, ಗಂಧ ಕಡ್ಡಿ, ಕೊಳವೆ, ಅದರಲ್ಲಿದ್ದಂಥ ಪ್ಲಾಸ್ಟಿಕು ಕವರಿಗಾಗಿಯೂ ಕಿತ್ತಾಟ ನಡೆಯುತ್ತಿತ್ತು (ಊದಲು). ಈ ದೇವರಿಗೆ ಊರ ಹೆಬ್ಬಾಗಿಲಲ್ಲಿ ದೇವಸ್ಥಾನ ಇರಬೇಕು - ಎನ್ನುವ ವಾಡಿಕೆಯಂತೆ ಒಂದು ದೇವಸ್ಥಾನವನ್ನು ಮಣ್ಣಿಂದ ಕಟ್ಟಿದ್ದರು. ಅದರ ಒಳಗಡೆ ಮೂರು ರುಬ್ಬುವ ಕಲ್ಲಿನೋಪಾದಿಯಲ್ಲಿ ಇದ್ದ ಕಲ್ಲುಗಳೇ ದೇವರುಗಳೆಂಬ ಭಾವನೆಯಿತ್ತು. ಮತ್ತೊಂದು ವಿಶೇಷವೆಂದರೆ ಈ ದೇವರ ಹಬ್ಬವನ್ನು ಮೂರು ವರ್ಷಕ್ಕೊಮ್ಮೆ ಆಚರಿಸಲಾಗುತ್ತಿತ್ತು. ಈ ಹಬ್ಬ ಬಂತೆಂದರೆ ನಮಗೆ ಎಲ್ಲಿಲ್ಲದ ಖುಷಿ; ಏಕೆಂದರೆ ಮನಸೋ ಇಚ್ಚೆ ಬಾಡು ತಿನ್ನಬಹುದಾಗಿತ್ತು. ಮತ್ತು ಈ ದೇವಸ್ಥಾನವನ್ನು ಜಾತಿಯ ಆಧಾರದ ಮೇಲೆ ಕಟ್ಟಿದ್ದರು. ಹೇಗೆಂದರೆ ದೊಡ್ಡ ದೇವಸ್ಥಾನ ಊರ ಗೌಡರದ್ದಾದರೆ, ಅದರ ಮುಂದೇ ಇರುವ ಅದಕ್ಕಿಂತ ಅರ್ಧದಷ್ಟು ದೇವಸ್ಥಾನ ನಾಯಕರದ್ದು. ಈ ನಾಯಕರ ಕೆಲಸ ಏನೆಂದರೆ ಊರ ದೇವಸ್ಥಾನಗಳಿಗೆಲ್ಲ ಗುಡಿಗೌಡನೇ ಪ್ರಧಾನ ಅಧಿಕಾರಿಯಾದ್ದರಿಂದ ಗುಡಿಗೌಡ ಹೇಳಿದಂತೆ ಈ ನಾಯಕರುಗಳು ದೇವರ ಮುಂದೆ ಇಂಥ ಹಬ್ಬಗಳಲ್ಲಿ ಮರಿಗಳನ್ನು ಕಡಿಯುವುದು - ಇನ್ನಿತರೆ ಸಣ್ಣಪುಟ್ಟ ಕೆಲಸ. ನಂತರ ಹರಿಜನರದ್ದು - ಅದರಲ್ಲಿ ಹೊಲೆಯರು, ಮಾದಿಗರು

ಎಂದು ಪಂಗಡಕ್ಕಾಗಿ ದೇವಸ್ಥಾನವನ್ನು ನಿರ್ಮಿಸಿಕೊಂಡಿದ್ದರು. ಈ ದೇವಸ್ಥಾನಕ್ಕೆ ಬಾಗಿಲುಗಳೇ ಇಲ್ಲದಿರುವುದರಿಂದ ನಾಯಿಗಳು ಉಚ್ಚೆ ಹುಯ್ಯುತ್ತಿದ್ದ ದೃಶ್ಯಗಳನ್ನು ಕಣ್ಣಾರೆ ಕಂಡಿದ್ದು ಉಂಟು. ಇಷ್ಟೆಲ್ಲ ಏಕೆ ಹೇಳುತ್ತಿದ್ದೀನಿ ಎಂದರೆ ಈ ದೇವರುಗಳಿಗೆ ಹರಕೆ ಹೊತ್ತವರು ಕುಡಿಕೆಗಳಲ್ಲಿ 'ಹರಕೆ ಅನ್ನ' ಎಂದು ತಂದು ಈ ದೇವರಿಗೆ ಅರ್ಪಿಸಿ ಹೋದ ನಂತರ ನಾಯಿಗಳು ಇದರಲ್ಲಿದ್ದ ಅನ್ನವನ್ನೆಲ್ಲ ಉಂಡು (ಕಿತ್ತಾಡಿಕೊಂಡು), ಉಳಿದ ಆ ಕುಡಿಕೆಗಳನ್ನೂ ನಾವು ಅಡುಗೆ ಆಟದಲ್ಲಿ ಬಳಸುತ್ತಿದ್ದೆವು. ಅವುಗಳಲ್ಲಿ ಒಂದರಲ್ಲಿ ಸಾರು, ಒಂದರಲ್ಲಿ ಮುದ್ದೆ ಎಂದು ವಿಂಗಡಿಸಿ ಮಣ್ಣಿನಲ್ಲೇ ಮಾಡಿದ ಒಲೆಗಳ ಮೇಲೆ ಇಟ್ಟು ಸಣ್ಣ - ಸಣ್ಣ ಕಡ್ಡಿಪುಳ್ಳೆ ಒಲೆಗೆ ತುರುಕಿ ಬೆಂಕಿಪೊಟ್ಟಣ ನಮ್ಮ ಕೈಗೆ - ತುಂಬಾ ಭಯಾನಕ ವಸ್ತುವಾದ್ದರಿಂದ - ಸಿಗದೇ ಬರೇ ನಟಿಸುತ್ತಿದ್ದೆವು. ಆ ಅಪ್ಪ-ಅಮ್ಮನ ಆಟದಲ್ಲಿ ನಮಗಿಂತ ಸಣ್ಣವನನ್ನು 'ನಮ್ಮ ಮಕ್ಕಳು' ಎನ್ನುತ್ತಿದ್ದೆವು. ಸ್ಕೂಲಿಗೆ ಹೋಗಿ ಬರುವಂತೆ ನಮ್ಮ ಅವ್ವ - ಅಪ್ಪ ಹ್ಯಾಗೆ ಹೇಳುತ್ತಿದ್ದರೋ, ಹಾಗೇ ಆರ್ಡರು ಮಾಡುತ್ತಿದ್ದೆವು. ಈಗ ನಾವು ನೆನೆಸಿಕೊಂಡರೆ ಏಕಾದರೂ ಹೀಗೆ ಬೆಳೆದು ದೊಡ್ಡವರಾಗಿದ್ದೆವೋ - ಅಂತ ಮರುಕ ಹುಟ್ಟುತ್ತದೆ. ಅದೇ ಜೀವನ ಚಂದ ಎಂದು ಒಂದು ಮನಸ್ಸು ಈಗಲೂ ಇದೆ. ನಮಗೆ ಅರಿವೇ ಇಲ್ಲದೇ, ನಮ್ಮ ಅಡುಗೆ ಆಟದಲ್ಲಿ ದಿಢೀರನೆ ನಮ್ಮ ಕಣ್ಣಿಗೆ ಕಾಣುವ ರೋಜಾನ್ ಸೊಪ್ಪು ಇನ್ನಿತರೆ ಹಸುರು ಗಿಡದ ಎಲೆಗಳನ್ನು ಕುಟ್ಟಿ ನೀರಿನಲ್ಲಿ ಹಾಕಿ - ಹಸಿರು ಬರುವ ಹಾಗೆ ಮಾಡಿ - ಅದನ್ನು ಬಸ್ಸಾರು ಎಂದು ಬಡಿಸುವಾಗ ನಮಗಿಂತ ದೊಡ್ಡವಳಾದ ಪದ್ದಿ ಅಡುಗೆ ಮಾಡಿ ಸುಸ್ತಾದವಳಂತೆ 'ಉಸ್ಸಪ್ಪಾ, ಸುಸ್ತಾಯ್ತು...' ಎನ್ನುತ್ತಿದ್ದ ಆ ಶೈಲಿ ನೆನೆಸಿಕೊಂಡರೆ ನಿಜಜೀವನದಲ್ಲಿ ಅನುಭವಿಸಲು ಸಾಧ್ಯವೇ ಇಲ್ಲ ಎನಿಸುತ್ತದೆ. ಮತ್ತೊಂದು ಈ ಆಟದಲ್ಲಿ ಸ್ವಲ್ಪ ಏಮಾರಿದರೆ ರಾತ್ರೆಯೆಲ್ಲಾ ನೋವು ಅನುಭವಿಸುವ ಚೇಷ್ಟೆಯ ಅಡುಗೆ ಅಂದರೆ ಕಳ್ಳಿ ಹಾಲಿನಲ್ಲಿ ಸ್ವಲ್ಪ ನೀರ ಬೆರೆಸಿ ಅದನ್ನು ಮಜ್ಜಿಗೆ ಹಾಲು - ಎಂದು ಉಣಬಡಿಸುತ್ತಿದ್ದೆವು. ಆದರೆ ಆ 'ನಾಟಕದ ಊಟ'ದ ಕಳ್ಳಿ ಹಾಲಿನ ಕೈಯಿಂದ ಉಂಡು ರಾತ್ರಿಯೆಲ್ಲ ಬಾಯುರಿ,



ಕಣ್ಣುರಿ ಎಂದೂ ಒದ್ದಾಡಿರುವುದುಂಟು. ಈ ಆಟಗಳ ಜೊತೆಗೆ ಇನ್ನೂ ಬೇರೆ ಆಟಗಳಾದಂಥ 'ಆನೆ ಮೇಲಂಬಾರಿ', 'ಕಲ್ಲ ಮಲ್ಲೆದೇವ್ರು', 'ಸೂರು ಚೆಂಡು', 'ಲಗೋರಿ', 'ಉಪ್ಪುಪ್ಪು ಕಡ್ಡಿ', 'ಮರ ಕೋತಿ', 'ಸರಗಡ್ಡಿ', 'ಚಿಣ್ಣಿದಾಂಡು' ಮತ್ತು ರಾತ್ರಿಯ ವೇಳೆಯಲ್ಲಿ ಆಡುತ್ತಿದ್ದ 'ಐಸ್‌ಪೇಸ್' ಆಟ - ಇವನ್ನೂ ನೆನಸಿಕೊಂಡರೆ ಇವತ್ತಿನ ಕ್ರಿಕೆಟ್ಟು ಏನೇನೂ ಅಲ್ಲ - ಎನಿಸುತ್ತದೆ.

ಇದೇ ರೀತಿ ನಾವು ಒಂದಿವಸ 'ಆನೆಮೇಲಂಬಾರಿ' ಆಟವಾಡುತ್ತಿದ್ದೆವು. ಇದ್ದಕ್ಕಿದ್ದಂತೆ ಬಂದ ರಮೇಶ ''ಲೇ, ನಮ್ಮಕ್ಕಯ್ಯ ದೊಡ್ಡಳಾಗ್ಯಾಳೇ !'' (ಪಾರಿ) ಅಂತ ಹೇಳಿದಾಗ ನಮಗೆ ಅದೇ ಸಾಯಂಕಾಲ - ರಾತ್ರಿ ಅವರ ಮನೆಯ ಕದಿನ ಹಿಂದಗಡೆ ಹಸಿರುಸೋಗೆ ಮತ್ತು ಹತ್ತಿಯ ಸೊಪ್ಪನ್ನು ಅವರ ಸೋದರ ಮಾವನೇ ಹಾಕಬೇಕು - ಎಂದು ಗೋಡೆಗೆ ನಿಲ್ಲಿಸಿ ಸಣ್ಣ ಗುಡ್ಲನ್ನು ಹಾಕಿ ತಳಗೆ ನೆಲ್ಲು ಹುಲ್ಲನ್ನು ಹಾಕಿ, ಅದರ ಮೇಲೆ ಆ ಗುಡಿಸಲ ಒಳಗೆ ಆಗ ತಾನೇ ನೀರು ಹುಯ್ಕೊಂಡು ತಲೆಗೆ ಬಟ್ಟೆ ಸುತ್ಕೊಂಡು ಕೂತಿದ್ದ ಪಾರಿಯ ಕಣ್ಣುಗಳಲ್ಲಿ ಏನೋ ಸಂಕೋಚ - ನಾಚುಗೆ ಆವರಿಸಿ ಕೂತಿದ್ದವು. ನಂತರ ಏನೋ ಶಾಸ್ತ್ರ - ಸಂಪ್ರದಾಯ ಅಂತ ಹೇಳಿ ''

ಆ ಗುಡಿಸಲ ಒಳಗೆ ಇಬ್ಬರು ಸಣ್ಣ ಹುಡುಗರು ಒಳಗೆ ಹೋಗುವುದು - ಹೊರಗೆ ಬರುವುದು ಮಾಡಬೇಕು '' ಅಂದಾಗ ನಾನು ರೆಡಿ, ನನ್ನ ಹಿಂದೆ ರಮೇಶನೂ ರೆಡಿ ! ಯಾಕೆಂದರೆ ಕಡೆಗೆ ಅಕ್ಕಿ ತಮ್ಟ - ಎಳ್ಳು ತಮ್ಟ ಸಿಕ್ಕುತ್ತೆ ಅನ್ನೋದಿಕ್ಕೆ. ಈ ರೀತಿ ಶಾಸ್ತ್ರ ಮುಗಿದ ನಂತರ ರಾತ್ರಿಯೆಲ್ಲ ಮಲಗುವಂತಿರಲಿಲ್ಲ. ರಾತ್ರಿಯೆಲ್ಲ ಪಾರಿಯನ್ನು ಮಾತಾಡಿಸಿಕೊಂಡೇ ಎದ್ದಿರುವಂತೆ ಹತ್ತು - ಹದಿನೈದು ಜನ ಮುದುಕಿಯರು ಅಥವಾ ಸಮಾನ ವಯಸ್ಕರು, ಅದರಲ್ಲೂ 'ಸೋಬಾನ' ಹೇಳುವಂಥವರು, ಒಡ್ಸು ಹೇಳುವವರು, 'ಜೋಕ್' ಕಟ್ ಮಾಡುವವರು - ಈ ರೀತಿ ಕಾರ್ಯಕ್ರಮಗಳು ಆಗುವುದನ್ನೇ ಕಾಯುತ್ತಿದ್ದರು. ನಾವಂತೂ ಈ ರೀತಿ ಒಂದು ಬಾರಿ ಗೊತ್ತಾದ ನಂತರ ಅಕ್ಕ-ಪಕ್ಕದಲ್ಲಿ ದೊಡ್ಡವರಾಗುವುದನ್ನೇ ಕಾಯುತ್ತಿದ್ದೆವು. ಏಕೆಂದರೆ ಅಕ್ಕಿ ತಮ್ಟ ಮತ್ತು ರಾತ್ರಿಯಿಡೀ ಕಂಟು ಬೆಲ್ಲದ ಕಾಫಿ ಕುಡಿಯಲು ಎಂದು. ಬೆಳಗ್ಗೆ ಸೂರ್ಯ ಹುಟ್ಟಿದ್ದೇ ಗೊತ್ತಾಗುತ್ತಿರಲಿಲ್ಲ. ನಾವು ನಿದ್ದೆಗೆಟ್ಟು ಬೆಳಗಿನ ಜಾವದ ಸಮೀಪದಲ್ಲಿ ಅಲ್ಲೇ ಎಲ್ಲೋ ಕಣ್ಣು ಮುಚ್ಚಿ ಬೆಳಗ್ಗೆ ಕಣ್ಣು ಬಿಟ್ಟಾಗ ಆಗಲೇ ಸ್ನಾನ ಮಾಡಿ, ಅಣೆಯಾಗಿ ಏನೋ ಸಂಕೋಚ ನಾಚಿಕೆ ಆವರಿಸಿ ಕುಳಿತಿದ್ದ ಪಾರಿಯನ್ನ ಮಾತಾಡಿಸಲು ನಮಗೆ ಒಳಗೆ ಏನೋ ಗೊತ್ತಿಲ್ಲದ ನಾಚಿಕೆಯೂ ಆಗುತ್ತಿತ್ತು. ಆದರೂ ನಮಗಿಂತ ದೊಡ್ಡವಳು ಎನ್ನುವ ಸದರಕ್ಕೆ 'ತಿರ್ಗಾ ಅಲ್ಲೇ ಕೂತಿದ್ದೀಯಾ ನೀನು' ಎನ್ನುತ್ತಿದ್ದೆವು. ಆಮೇಲೆ ತಿಳಿಯಿತು - ''ಎರಡು ದಿವಸ ಗುಡ್ಲಲ್ಲಿ ಕೂರಿಸುವುದು ವಾಡಿಕೆಯಂತೆ'' ಎಂದು ಅವ್ವ ಹೇಳುತ್ತಿದ್ದುದು ಕಿವಿಗೆ ಬಿತ್ತು . ಈ ಹುಚ್ಚು ಮನಸ್ಸಿಗೆ ''ಆ ರೀತಿ ಗುಡ್ಲು ಎಲ್ಲಾ ಹಾಕುವುದು ಎಲ್ಲಿ ಹೋಯಿತೀಗಾ ?'' ಅನ್ನಿಸಿದರೆ, ಅದರಲ್ಲಿ ಆಗ ನಾವು ಆ ಅಕ್ಕಿ ತಮ್ಟಕ್ಕೆ ಎಂದು ನುಗ್ಗಿದ ಆ ಗುಡ್ಲುಗಳ ಒಳಗೆ ಇದ್ದ ಆ ಪಾರಿ-ಪದ್ದಿಯರು ಎಲ್ಲಾ ಈಗ ದೊಡ್ಡವರಾಗಿ, ಮದುವೆಯಾಗಿ ಎರಡೆರೆಡು ಮಕ್ಕಳೊಂದಿಗೆ ವರ್ಷಕ್ಕೆ ಒಮ್ಮೆ ಮಾರ್ನಾಮಿಗೆ ಬಂದಾಗ ಅವರ್ನ - ಅವರ ಮಕ್ಕಳನ್ನು ನೋಡಿ - ''ಇನ್ನೆಲ್ಲಿ ನಾವು ಕಳೆದ ಆ ಸಣ್ಣ ಮಕ್ಕಳ ಬಾಲ್ಯ ?'' ಅಂತ ನೆನಿಸಿಕೊಂಡು ಅಳು ಬರುತ್ತದೆ.

**ದಂಡಿನಶಿವರ ತಿಮ್ಮೇಗೌಡ**
ಹವ್ಯಾಸಿ ಪತ್ರಿಕಾ ಛಾಯಾಗ್ರಹಕ ಮತ್ತು ಬರಹಗಾರ
ತುರುವೇಕೆರೆ - ತಾ|| ದಂಡಿನಶಿವರ-೫೭೨೨೧೫



# ದೊಡ್ಡವ

ಕಾಡಿನಲ್ಲಿ ಒಂದು ಆನೆ ಇತ್ತು. ದೇಹ ಬೆಳೆದರೂ ಅದಕ್ಕೆ ಬುದ್ಧಿ ಬೆಳೆದಿರಲಿಲ್ಲ. ಆದರೆ ತಾನು ದೊಡ್ಡ ಬಲಶಾಲಿ ಎಂಬ ಅಹಂಕಾರ ಅದರ ನೆತ್ತಿಗೇರಿತ್ತು. ತನಗಿಂತ ಬಲಹೀನರನ್ನು ಕಂಡರೆ ಅವರನ್ನು ಹೀಯಾಳಿಸಿ, ಅವಮಾನಿಸಿ ಕಳುಹಿಸುವುದು ಆನೆಯ ಅಭ್ಯಾಸ.

ಒಂದು ಸಲ ದೊಡ್ಡ ಹೆಜ್ಜೆಯಿಟ್ಟುಕೊಂಡು ಕಬ್ಬಿನ ಗದ್ದೆಯೆಡೆಗೆ ಆನೆ ಹೊರಟಿತ್ತು. ಆಗ ದಾರಿಯ ನಡುವೆ ನಿಂತಿರುವ ಇರುವೆಯನ್ನು ನೋಡಿತು. ಕೋಪ ಬಂತು ಆನೆಗೆ. ''ಏನೋ ಕಾಣಿಸೋದಿಲ್ವೆ ಕಣ್ಣು ? ದಾರಿ ಬಿಟ್ಟು ದೂರ ನಿಲ್ಲು. ನಾನು ಗಜರಾಜ ಬರ್‍ತಿದೇನೆ ಅಂತ ಗೊತ್ತಾಗೋದಿಲ್ವೆ ?'' ಜರ್ಬಿನಿಂದ ಕೇಳಿತು.

ಇರುವೆ ಕಿವಿ ಕೇಳಿಸದವರಂತೆ, ''ನಾನು ದೂರ ನಿಲ್ಲಬೇಕಾ ? ಯಾಕೆ, ಏನಾಗಿದೆ ನಿನಗೆ ?'' ಎಂದು ಪ್ರಶ್ನಿಸಿತು. ಆನೆಯ ಕೋಪ ನೆತ್ತಿಗೇರಿತು.

''ದೊಡ್ಡವರು ಬರುವಾಗ ಸಣ್ಣವರು ದೂರ ಸರಿದು ನಿಲ್ಲುವುದು ಪದ್ಧತಿ. ಇಲ್ಲವಾದರೆ ನನ್ನ ಕಾಲಿನ ಕೆಳಗೆ ಸಿಕ್ಕಿ ನೀನು ಚಟ್ನಿಯಾಗಿಬಿಡುತ್ತೀ ಅಷ್ಟೆ. ಬದುಕಿಕೋ ಅನ್ನುವುದಕ್ಕಾಗಿ ಹೀಗೆ ಹೇಳಿದ್ದೇನೆ.'' ಆನೆ ಮೀಸೆ ತಿರುವಿಕೊಂಡಿತು.

ಇರುವೆ ಬದಿಗೆ ಸರಿಯಲಿಲ್ಲ. ಸೋಲೊಪ್ಪಿಕೊಳ್ಳದೆ ಅಧಿಕ ಪ್ರಸಂಗ ತೋರಿಸಿತು. ''ನೀನು ದೊಡ್ಡವನೇ ? ಯಾವುದರಲ್ಲಿ ಅಂತ ಕೇಳಬಹುದಾ ?'' ಅದು ಪ್ರಶ್ನಿಸಿತು.

''ಯಾವುದರಲ್ಲಿ ಅಂತ ವಿವರಿಸಬೇಕೇನೋ ? ನನ್ನ ಕಿವಿ ನೋಡು ಗೆರಸೆ ಹಾಗಿದೆ. ದಾಡೆ ನೋಡು ಸಲಾಕಿಯ ಹಾಗಿವೆ. ಸೊಂಡಿಲು ಹಾವಿನಂತಿದೆ. ನನ್ನ ಶಕ್ತಿಯ ಬಗೆಗೆ ನಿನ್ನಲ್ಲಿ ಹೇಳಬೇಕಾಗಿಲ್ಲ. ನಾನು ದೊಡ್ಡವ ಎನ್ನುವುದಕ್ಕೆ ಇನ್ನೂ ಏನಾದರೂ ಉದಾಹರಣೆ ಬೇಕೆ ?'' ಆನೆ ದೊಡ್ಡ ದನಿಯಲ್ಲೇ ಹೇಳಿತು.

ಇರುವೆಗೆ ಜೋರಾಗಿ ನಗು ಬಂತು. ''ಮಾರಾಯಾ, ದೇಹ ಪರ್ವತದ ಹಾಗಿದೆ ಅನ್ನು. ಆದರೆ ಕಡ್ಲೆಕಾಳಿನಷ್ಟು ಬುದ್ಧಿಯಾದರೂ ಉಂಟೇ ಅಂತ ಕೇಳ್ತೀನಿ. ಇರುವೆಯಷ್ಟು ತಿಂದರೆ ಆನೆಯಷ್ಟು ಬುದ್ಧಿ. ಆನೆಯಷ್ಟು ತಿಂದರೆ ಆನೆಯಷ್ಟು ಲದ್ದಿ ಅಂತ ಹೇಳುತ್ತಾರಲ್ಲ ನಿನಗೆ ಗೊತ್ತಾ ? ನಾನು ಇಷ್ಟು ಚಿಕ್ಕವನಾದರೂ ನಿನಗಿಂತ ಬುದ್ಧಿವಂತ ಗೊತ್ತಾಯ್ತಾ ?'' ಅದು ಛೇಡಿಸಿತು.

ಆನೆ ಅಪಹಾಸ್ಯ ಮಾಡಿತು. ''ನಿನ್ನ ದೇಹವೇ ಕಣ್ಣಿಗೆ ಕಾಣಿಸೋದಿಲ್ಲ. ಇನ್ನು ಅದರೊಳಗೆ ಬುದ್ಧಿಗೆ ಬೇರೆ ಜಾಗ ಉಂಟಾ ? ನೀನು ನನಗಿಂತ ಬುದ್ಧಿವಂತ ಅಂತ ಸಾಬೀತು ಮಾಡಿ ತೋರಿಸ್ತೀಯಾ ?'' ಅದು ಸವಾಲು ಹಾಕಿತು.

''ಅದಕ್ಕೇನಂತೆ. ಒಂದು ಪರೀಕ್ಷೆ ನಡೆಯಲಿ. ನಾವಿಬ್ಬರೂ ನಮ್ಮ ದೇಹದ ಗಾತ್ರಕ್ಕಿಂತ ದೊಡ್ಡ ವಸ್ತುವೊಂದನ್ನು ತರಬೇಕು. ನಿನ್ನ ಸೊಂಡಿಲಿನಲ್ಲಿ ನೀನು ನಿನಗಿಂತ ದೊಡ್ಡ ವಸ್ತುವನ್ನು ತಂದರೆ ನನ್ನನ್ನು ಕಾಲಿನಿಂದ ತುಳಿದು ಕೊಂದುಬಿಡು. ಆದರೆ ನಾನು ನನಗಿಂತ ದೊಡ್ಡ ವಸ್ತುವನ್ನು ತಂದೆನೆಂದಾದರೆ ನಿನ್ನನ್ನು ಕೊಲ್ಲದೆ ಬಿಡಲಾರೆ. ಈ ಬಲಪರೀಕ್ಷೆ ಮಾಡುವುದರಿಂದ ನಮ್ಮಲ್ಲಿ ಯಾರು ದೊಡ್ಡವರೆಂದು ಸುಲಭವಾಗಿ ತಿಳಿಯುತ್ತದೆ. ಆಗಬಹುದೇ ?'' ಎಂದು ಇರುವೆ ಕೇಳಿತು.

ಆನೆ ಈ ಮಾತಿಗೆ ಒಪ್ಪಿತು. ಬಲಪರೀಕ್ಷೆ ಮಾಡುವಾಗ ತೀರ್ಪುಗಾರರು ಬೇಕು ತಾನೆ ? ಸನಿಹದಲ್ಲಿ ಹೋಗುತ್ತಿದ್ದ ಒಂದು ಕಾಡುಹಂದಿಯನ್ನು ಕರೆದು ತಮ್ಮಲ್ಲಿ ಯಾರು ದೊಡ್ಡವನೆಂದು ಹೇಳಬೇಕೆಂದು ಅದು ಕೋರಿತು. 'ಹೂಂ' ಎಂದಿತು ಹಂದಿ.

ಆನೆಯು ತನ್ನ ದೇಹಕ್ಕಿಂತ ದೊಡ್ಡದಾದ ಒಂದು ಕಲ್ಲು ಬಂಡೆಯನ್ನು ನೋಡಿತು. ಅದನ್ನೇ ಹೊತ್ತು ತರುತ್ತೇನೆಂದು ಸೊಂಡಿಲು ಹಾಕಿತು. ಎಷ್ಟು ಪ್ರಯತ್ನಿಸಿ ಎಳೆದರೂ ಬಂಡೆ ಮಿಸುಕಾಡಲಿಲ್ಲ. ಆನೆ ಒದ್ದಾಡಿ ಸೋತಿತು. ಅದರ ಮೈಯಿಡೀ ಬೆವರಿನಿಂದ ನೆನೆಯಿತು. ಆದರೂ ದಾಡೆಯಿಂದ ಬಂಡೆಯನ್ನೆಬ್ಬಿಸಲು ನೋಡಿತು. ಕಡೆಗೆ ಶಕ್ತಿಗುಂದಿ ಹಿಂದೆ ಸರಿಯಿತೇ ವಿನಾ ಬಂಡೆ ಜಪ್ಪೆನ್ನಲಿಲ್ಲ.

''ನನ್ನಿಂದಾಗಲಿಲ್ಲ ಈ ಕೆಲಸ. ದೊಡ್ಡವನಾದ ನನ್ನಿಂದಾಗದ ಮೇಲೆ ಕ್ಷುದ್ರ ಇರುವೆ ತನಗಿಂತ ದೊಡ್ಡ ವಸ್ತುವನ್ನು ತರುವುದುಂಟೇ ? ಮರ್ಯಾದೆ ಕಳೆದುಕೊಳ್ಳುತ್ತದೆ ಅಷ್ಟೆ'' ಆನೆಗೆ ಇನ್ನೂ ಬಿಗುಮಾನ ಬಿಡಲಿಲ್ಲ.

ಇರುವೆ ಬಿಲದ ಒಳಗೆ ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಪುಟಪುಟನೆ ಹೊರಗೆ ಬಂದಿತು. ಅದು ತನ್ನ ದೇಹಕ್ಕಿಂತ ನಾಲ್ಕು ಪಟ್ಟು ದೊಡ್ಡದಿರುವ ಬಿಳಿಯ ವಸ್ತುವೊಂದನ್ನು ಸಲೀಸಾಗಿ ಎತ್ತಿಕೊಂಡು ಬರುತ್ತಾ ಇತ್ತು. ಅದೊಂದು ಮಂಡಕ್ಕಿ ಕಾಳು ಅಷ್ಟೆ. ಅದನ್ನು ಕಂಡು ಪೆಚ್ಚಾಯಿತು ಆನೆ.

''ಲೋ, ನಿನಗೆ ಬೆಟ್ಟದ ಗಾತ್ರದ ದೇಹವಿದ್ದರೂ ಇರುವೆ ಗಾತ್ರದ ಬುದ್ಧಿಯೂ ಇಲ್ಲ. ಇರುವೆಗೆ ಚಿಕ್ಕ ದೇಹವಿದ್ದರೂ ಆನೆ ಗಾತ್ರದ ಬುದ್ಧಿ ಇದೆ. ಪರೀಕ್ಷೆಯಲ್ಲಿ ನೀನು ಸೋತೆ ಕಣೋ.'' ಹಂದಿ ತೀರ್ಪು ಹೇಳಿತು.

ಆನೆ ನಾಚಿಕೆಯಿಂದ ಓಡತೊಡಗಿತು. ಇರುವೆ ಸುಮ್ಮನೆ ಬಿಡುತ್ತದಾ ? ನಿನ್ನನ್ನು ಕೊಲ್ತೀನಿ ಅಂತ ಹುಡುಕಿಕೊಂಡು ಹೋಯಿತು. ಇರುವೆ ಕೈಗೆ ಆನೆ ಸಿಗಲಿಲ್ಲ. ಆದರೆ ಅದು ತನ್ನನ್ನು ಹೇಗಾದರೂ ಕೊಲ್ಲದೆ ಬಿಡಲಿಕ್ಕಿಲ್ಲ ಎಂದು ಆನೆಗೆ ಭಯ. ಆದ್ದರಿಂದ ರಾತ್ರಿ ಮಲಗುವಾಗಲೂ ಸೊಂಡಿಲನ್ನು ಬಾಯೊಳಗೆ ಇರಿಸಿಕೊಂಡಿರುತ್ತದೆ. ಇರುವೆ ಮೂಗಿನೊಳಗೆ ಹೋಗದಂತೆ ಈ ಜಾಗರೂಕತೆ.

ಪ. ರಾಮಕೃಷ್ಣಶಾಸ್ತ್ರಿ
ಶಿವಶಕ್ತಿ ನಿಲಯ
ಅಂಚೆ : ಮಚ್ಚಿನ - ೫೭೪ ೨೯೫, ದಕ್ಷಿಣ ಕನ್ನಡ

## ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| ೧ | | | ೨ | | ೩ | | | ೪ |
| | | | ೫ | ೬ | | | | |
| ೭ | | ೮ | | | | ೯ | | |
| | | ೧೦ | | | | | | |
| | | | | | | | | |
| ೧೧ | | ೧೨ | | ೧೩ | | | | ೧೪ |
| ೧೫ | | | | | | ೧೬ | | |
| | | | ೧೭ | | ೧೮ | | | |
| ೧೯ | | | | | ೨೦ | | | |

**ಎಡದಿಂದ ಬಲಕ್ಕೆ**

೧. ವಿಚಾರವನ್ನು ಪ್ರಚೋದಿಸುವ ಮನೋಭಾವ ೪
೩. ಸಂದರ್ಭಕ್ಕೆ ಸರಿಯಾಗಿ ನೀಡಿದ ಭೇಟಿ ೪
೫. ಕುದುರೆಯನ್ನೇರಲು ಜೀನಿಗೆ ಅಳವಡಿಸಿದ ಬಳೆ ೩
೭. ಮಂಡಳಿಯೊಂದಿಗೆಯೇ ಬರುವ ಇದು ಸರ್ಕಾರದ ನಿಯಮಕ್ಕೊಳಪಟ್ಟಿದೆ ೩
೯. ಸಾವಿರಾರು ಮೈಲಿ ದೂರಕ್ಕೆ ಚಾಚಿಕೊಂಡಿರುವ ಜಲರಾಶಿ ೩
೧೦. ಹೊಸದಾಗಿ ನಿರ್ಮಿಸಿದ ಪಟ್ಟಣ ೫
೧೨. ದೀರ್ಘ ಕಾವ್ಯವಲ್ಲ ಇದು ಪುಟ್ಟ ಕವಿತೆಯಷ್ಟೇ ೫
೧೫. ಹಣೆಗೆ ಇಟ್ಟ ನಾಮ ಸ್ವಾತಂತ್ರ್ಯ ಹೋರಾಟಗಾರ ನೋರ್ವನ ನಾಮದ ಉತ್ತರಾರ್ಧವು ಕೂಡ ೩
೧೬. ಆತ್ಮೀಯತೆಯಿಂದ ನೀಡಿದ ಸ್ವಾಗತ ವಿಲೋಮವಾಗಿದೆ ೩
೧೭. ಬಲ್ಲಿದನಲ್ಲ ಇವ ತುತ್ತು ಕೂಳಿಗೂ ಕಷ್ಟ ಪಡುವವ ೩
೧೯. ಸುರರ ನಡುವಿನ ಸವಿಯಾದ ಸಂಬಂಧ ೪
೨೦. ಜೋಗದಲ್ಲಿ ಜಲಪಾತವಾಗಿ ಧುಮುಕುವ ನದಿ ೪

**ಮೇಲಿನಿಂದ ಕೆಳಕ್ಕೆ**

೧. ಗಗನದಲ್ಲಿನ ಸಂಚಾರದಿಂದಲೇ ಕೈಗೊಂಡ ಸಮೀಕ್ಷೆ ೪
೨. ಕಮರಿಯಲ್ಲಿ ಕಂಡುಬಂದ ಆನೆ ೨
೩. ಸೊಂಪಾಗಿ ಬೆಳೆದ ಮುಷ್ಕರ ೨
೪. ಒಂಬತ್ತು ವಿಧದ ಅಭಿರುಚಿ ೪
೬. ಅಡಗಿ ಕುಳಿತಿದೆ 'ಅಡವಿ' ೩
೮. ಚಿತ್ತವನ್ನು ಸೆಳೆಯುವಂತಹ ದೃಶ್ಯ ೫
೯. ಸಸ್ಯಗಳು ಬದುಕಲು ಬಹುಮುಖ್ಯವಾಗಿ ಬೇಕಾದುದು ವಾತಾವರಣದಲ್ಲೂ ದೊರೆಯುತ್ತದೆ ೫
೧೧. ರಾಷ್ಟ್ರ ರಾಜಕಾರಣದಲ್ಲಿ ಪ್ರಜ್ವಲವಾಗಿ ಬೆಳಗಿದ ಎಡಪಂಥೀಯ ನಾಯಕ ೪
೧೩. ಇದೊಂದು ಮಾಂಸಾಹಾರಿ ಪಕ್ಷಿ ೩
೧೪. ಪತಿಯ ಚಿತೆಗೆ ಹಾರಿದ ಮಡದಿ ೪
೧೭. ಭೀಕರವಾಗಿ ಎರಗಿದ 'ಕ್ಷಾಮ' ೨
೧೮. ಹಿಡಿತಕ್ಕೆ ಸಿಲುಕಿದ ಬಗೆ ಹಿಂತಿರುಗಿದರೆ ಕಳೇಬರವಾಗುತ್ತದೆ ೨

ಜಿ. ಆರ್. ಪ್ರಸನ್ನ ಕುಮಾರ
ಗೌಡಹಳ್ಳಿ, ಮೂಡಿಗೆರೆ (ತಾ), ಚಿಕ್ಕಮಗಳೂರು (ಜಿಲ್ಲೆ)



# ನನ್ನ ಕಥೆ

ಅಮ್ಮ,

ಇಂದು ಮೊದಲಬಾರಿ ನಿನ್ನೊಡನೆ ಮಾತನಾಡ್ತಾ ಇದ್ದೇನೆ. ನಿನಗೆ ಧನ್ಯವಾದಗಳು ಹೇಗೆ ಅರ್ಪಿಸಬೇಕೆಂದು ನನ್ನ ಪುಟ್ಟ ಜೀವಕ್ಕೆ ತಿಳಿಯುತ್ತಿಲ್ಲ. ಆದರೆ ಯುಗಯುಗಗಳಿಂದ, ತಾಯಿಯ ಮಹಾತ್ಮೆಯನ್ನು ಹಾಡಿ ಹೊಗಳಿರುವುದನ್ನು ಕೇಳಿದ್ದೇನೆ. ಆ ವಿಷಯದಲ್ಲಿ ಮೊಂಡಾದ ಶಬ್ದಗಳನ್ನು ಹಾಗೂ ನನ್ನ ಭಾವನೆಗಳನ್ನು ನನ್ನ ಅಲ್ಪ ಬುದ್ಧಿಗೆ ತೋಚಿದಂತೆ ನಿನ್ನ ಮುಂದೆ ವ್ಯಕ್ತಪಡಿಸುವುದು ನನ್ನ ಪರಮ ಕರ್ತವ್ಯವೆಂದು ಭಾವಿಸುತ್ತೇನೆ.

ಇಂದು ನನ್ನ ವಯಸ್ಸು ಮೈನಸ್ ಐದು ತಿಂಗಳು. ನನ್ನ ಪೌರುಷದ ಪ್ರಮಾಣ ಪತ್ರವನ್ನು ನೀನು ಹಾಗೂ ಅಪ್ಪ ಬಹಳ ಸಂತೋಷದಿಂದ ಓದುತ್ತಿದ್ದೀರಿ. ಈಗಷ್ಟೆ ನಿಮಗೆ ನಿನ್ನ ಗರ್ಭಜಲ ಚಿಕಿತ್ಸೆಯ ರಿಪೋರ್ಟ್ ಸಿಕ್ಕಿದೆ. ಅದನ್ನು ಓದುತ್ತಿದ್ದ ಹಾಗೆ ನೀನು ಬಿಟ್ಟ ಬಿಡುಗಡೆಯ ನಿಟ್ಟುಸಿರು, ನನ್ನ ಸುತ್ತಿರುವ ನೀರಿನ ಕಂಪನದಿಂದ, ನನಗೆ ಈಗ ತಿಳಿದುಬಂದಿದೆ. ನಿಜ ಹೇಳುವುದೆಂದರೆ ನನ್ನ ಅಸ್ತಿತ್ವದ ಅರಿವಾಗುತ್ತಲೆ, ಈ ಬಾರಿಯೂ ಹೆಣ್ಣು ಗರ್ಭವಿದ್ದರೆ ಅದನ್ನು ತೆಗೆಸಿಬಿಡಬೇಕಾಗಬಹುದು ಎಂಬ ಯೋಚನೆ ನಿನಗೆ ಕಾಡುತ್ತಿತ್ತು.

ಹೋದ ಬಾರಿಯ ಅಬಾರ್ಶನ್‌ನ ನಂತರ ಬಹಳ ದಿನಗಳವರೆಗೆ ನೀನು ಅನುಭವಿಸಿದ ಅಶಕ್ತತೆ ಹಾಗೂ ಅದರಿಂದ ಉಂಟಾದ ಸಣ್ಣ ಪುಟ್ಟ ಶಾರೀರಿಕ ತೊಂದರೆಗಳಿಂದ ನೀನು ಬೇಸತ್ತಿದ್ದೆ. ನನ್ನ ಇಬ್ಬರು ಅಕ್ಕಂದಿರು, ಅಜ್ಜಿ, ಅಜ್ಜ ಹಾಗೂ ಇತರ ಹತ್ತಿರದ ಸಂಬಂಧಿಕರಿಗೆ ನನ್ನ ಗಂಡಸುತನದ ಭರವಸೆ ಆಗುವ ತನಕ ಹೇಳದಿರುವ ನಿಮ್ಮ ನಿರ್ಣಯ ನನಗೆ ಮಾತ್ರ ತಕ್ಷಣ ತಿಳಿಯಿತು.

ಹೇಗೆಂದು ಕೇಳುವೆಯಾ ?

ಯಾವ ವಿಜ್ಞಾನದ ಕಾರಣ ಇಂದು ನಿನಗೆ ಈ ರಿಪೋರ್ಟ್ ಸಿಕ್ಕಿದೆಯೋ ಅದೇ ವಿಜ್ಞಾನದಿಂದ ಏನು ಸಿದ್ಧವಾಗಿದೆ ಎಂದರೆ, ತಾಯಿಯ ಮನಸ್ಸಿನಲ್ಲಿ ನಿರ್ಮಾಣವಾಗುವ ವಿಚಾರತರಂಗಗಳು ಹೊಕ್ಕುಳಬಳ್ಳಿಯ ಮೂಲಕ ಗರ್ಭದವರೆಗೆ ತಲುಪುತ್ತವೆ. ಅಭಿಮನ್ಯುವಿನ ಕಥೆ ನಿನಗೆ ಗೊತ್ತಿರಬೇಕಲ್ಲವೆ ? ಅಂತೆಯೇ ಉತ್ತಮ ಬೆಳವಣಿಗೆಗಾಗಿ, ಹಿಂದಿನ ಕಾಲದ ಹೆಂಗಸರು ಜೋಕಾಲಿಯ ಮೇಲೆ ಕುಳಿತು ಹಾಡು ಹೇಳುವುದು, ಒಳ್ಳೆಯ ಧಾರ್ಮಿಕ ಕಥೆಗಳನ್ನು ಕೇಳುವುದು ಮಾಡುತ್ತಿದ್ದರು. ಆದರೆ ಇವೆಲ್ಲ ಮಾಡಲಿಕ್ಕೆ ನಿನ್ನ ನೋಕರಿ ಹಾಗೂ ನನ್ನ ಇಬ್ಬರು ಅಕ್ಕಂದಿರನ್ನು ನೋಡಿಕೊಳ್ಳುವುದು ಎಲ್ಲಾ ಇದೆ. ಸಂಸಾರವನ್ನು ಸಾಗಿಸುವುದರಲ್ಲಿ ಸಮಯವೇ ಸಿಗುತ್ತಿಲ್ಲವೇನೋ ? ಆದರೆ ನನಗೆ ಮಾಡಲು ಈಗ ಬೇರೆ ಕೆಲಸವಿಲ್ಲದಿರುವ ಕಾರಣ ಕೈ ಕಾಲು ಆಡಿಸಿ, ಮಗ್ಗಲು ಬದಲಾಯಿಸಿ, ನೀರಿನಲ್ಲಿ ತೇಲುತ್ತ, ಕಣ್ಣು ಮುಚ್ಚಿ ಆಲಿಸುತ್ತಿರುತ್ತೇನೆ ಹಾಗೂ ಆಲೋಚನೆ ಮಾಡುತ್ತಿರುತ್ತೇನೆ.

ಈಗ ನನ್ನ ಮೂರನೆಯ ಅಕ್ಕನಂತೆ ಕತ್ತಲೆಯಿಂದ ಕತ್ತಲೆಗೆ ಪ್ರವಾಸ ಮಾಡದೆ, ನನಗೆ ಸೂರ್ಯನ ಬೆಳಕು ಕಾಣಲಿದೆ. ನಿಸರ್ಗದ ಹೂವು, ಎಲೆ ಎಲ್ಲವನ್ನೂ ನೋಡಬಲ್ಲೆನು. ಬೆಳದಿಂಗಳನ್ನು ಕುಡಿದ ತೆರೆಗಳನ್ನು ನಾನು ನೋಡುವೆನು. ಇದರಿಂದ ನನಗೆ ಸಂತೋಷವಾಗಿರಲು ಸಾಧ್ಯವೇ ?

ಏನಂದೇ ? ಈಗ ಎಲ್ಲರೂ ಹಾಗೆಯೇ ಮಾಡುತ್ತಾರೆ, ಅಂತಲೇ !

ಸಮಾಜದ ಒತ್ತಡ... ಮುಪ್ಪಿನಲ್ಲಿ ಊರುಗೋಲು...

ವಂಶಕ್ಕೆ ದೀಪ... ಅಜ್ಜಿ, ಅಜ್ಜನ ಆಸೆ... ನಿಮಗೆ ಇಬ್ಬರು ಹೆಣ್ಣು ಮಕ್ಕಳೆ ? ಎಂದು ಜನರು ಆಡಿದ ಮಾತುಗಳು, ಎಂದೆಯೇ ?...

ಅಮ್ಮ, ಅಮ್ಮ, ನೀನು ಯಾರಿಗೆ ಮೋಸ ಮಾಡುತ್ತಿರುವೆ ? ನಿನ್ನ ಮನಸ್ಸಿಗೆ ? ನೀನು ಗಂಡು ಹುಡುಗನ ತಾಯಿ ಆಗಿರುವೆ ಎಂದು ಹೇಳಿಸಿಕೊಳ್ಳಬೇಕೆಂಬ ಸತ್ಯವನ್ನು ನೀನು ನಿನ್ನಿಂದಲೇ ಬಚ್ಚಿಡಬಲ್ಲೆಯಾ ? ನಿನ್ನ ಪ್ರತಿಯೊಂದು ಆಲೋಚನೆ ಹೊಕ್ಕಳ ಮೂಲಕ ನನಗೆ ತಲುಪುತ್ತದೆಯೆಂಬುದನ್ನು ನೆನಪಿನಲ್ಲಿಡು. ಈಗ ನನಗೆ ನನ್ನ ಸ್ವತಂತ್ರ ಅಸ್ತಿತ್ವವಿಲ್ಲದಿರುವ ಕಾರಣ, ನಿನ್ನ ಮನಸ್ಸು ನನಗೆ ತಿಳಿದಷ್ಟು ಯಾರಿಗೂ ತಿಳಿಯಲು ಸಾಧ್ಯವಿಲ್ಲ.

ಕಾರಣವೇನೇ ಇರಲಿ, ನಾನು ಸೂರ್ಯನ ಬೆಳಕಿನಲ್ಲಿ ಹೊರ ಬರುವ ಭಾಗ್ಯವನ್ನು ಪಡೆದಿರುವುದು ಸತ್ಯ ! ಅಂತಲೇ ನಾನು ಮಲಗಿದಲ್ಲೆ ನನ್ನ ಭವಿಷ್ಯದ ಕನಸನ್ನು ಕಾಣುತ್ತಿದ್ದೇನೆ. ನಿನಗೆ ಹೇಳಲೆ ? ಅವು ಎಷ್ಟು ಸುಂದರವಾಗಿವೆ ಗೊತ್ತೆ ?

ನಾನು ಈ ಜಗತ್ತಿನಲ್ಲಿ ಹೆಜ್ಜೆ ಇಡುವೆನು ಎನ್ನುವುದಕ್ಕಿಂತ ತಲೆ ಇಡುವೆನು ಎನ್ನುವುದು ಹೆಚ್ಚು ಸಮಂಜಸ. ಆಗ ನಿನ್ನ ಹಾಗೂ ಅಪ್ಪನ ಮುಖ ಸಂತಸದಿಂದ ಅರಳಲಿದೆ. ಅಪ್ಪಾ, ಅಮ್ಮಾ ಸಂತೋಷವಾಗಿದ್ದಾರೆಂದು, ತಮಗೆ ತಮ್ಮ ಹುಟ್ಟಿರುವನೆಂದು, ಇಬ್ಬರು ಅಕ್ಕಂದಿರೂ ಎಲ್ಲಾ ಕಡೆ ಸಂತಸದಿಂದ ಹೇಳುವವರಿದ್ದಾರೆ. ಹೌದು, ಇದು ಖಂಡಿತವಾಗಿಯೂ ಆಗಲಿದೆ ಎಂದು ಗೊತ್ತಿದ್ದರೂ ಕೂಡ ಈ ಘಟನೆ ಸಂಭವಿಸಿದ ಮೇಲೆ ಆಗುವ ಸಂತೋಷವಿದ್ದೇ ಇರುತ್ತದೆಯಲ್ಲವೆ ? ನಾಲ್ಕು ಜನರಲ್ಲಿ ಗಂಡು ಮಗುವಿನ ತಾಯಿಯೆಂದು ಹೇಳಿಕೊಳ್ಳುವಾಗ ಒಂದು ಐದನೆ ತಿಂಗಳಲ್ಲಿ ಬೇಕೆಂದು ಮಾಡಿಸಿದ ಗರ್ಭಪಾತ ಹಾಗೂ ಈಗ ಒಂಬತ್ತು ತಿಂಗಳು ಗರ್ಭದ ಭಾರ ಹೊತ್ತ ಆಯಾಸ ಇವೆಲ್ಲದರ ನಷ್ಟ ಪರಿಹಾರ ನನ್ನ ಒಂದು ಟ್ಯಾಹಾದಿಂದ ಆಗಲಿದೆ. ಹುಣ್ಣಿಮೆಯ ಚಂದ್ರನಂತೆ ಅರಳಿದ ನಿನ್ನ ಮುಖ ಕಣ್ಣ ಕೆಳಗಿನ ಕಪ್ಪು ಕಲೆಗಳನ್ನು ಮುಚ್ಚಿಬಿಡಲಿದೆ. ಹಾಗೆಯೇ ಯಾವಾಗಲೋ ಒಮ್ಮೆ ತಲೆ ಎತ್ತುವ ಸೊಂಟದ ನೋವನ್ನು ನೀನು ಮರೆತುಬಿಡುವೆ. ಪುತ್ರವತಿ ಎಂಬ ಒಂದೇ ಒಂದು ಶಬ್ದದಿಂದ ನಿನಗೆ ಮೋಕ್ಷವೇ ಸಿಗುವುದೇನೋ ಎಂದು ತೋರುತ್ತದೆ.

ಆದರೆ ಅಮ್ಮ, ಒಂದು ವಿಷಯ ನಿನ್ನ ಗಮನಕ್ಕೆ ಬರಬಹುದೆ ? ಈ ಎಲ್ಲದರ ಪರಿಣಾಮ, ನಾನು ಗಂಡುಮಗನೆಂಬ ಅಹಂಕಾರ ನನ್ನ ಹುಟ್ಟಿನೊಡನೆಯೇ ಕರ್ಣನ ಕವಚಕುಂಡಲಗಳ ಹಾಗೆ ಜೊತೆಗೆ ಬರಲಿದೆ. ಈ ಕೂಸಿನ ಔಷಧಿಯನ್ನು ನೀನೇ ನನಗೆ ನಿನ್ನ ಆಚಾರ ವಿಚಾರಗಳಿಂದ ಗರ್ಭದಲ್ಲಿಯೇ ಕುಡಿಸಿರುವೆ.

ನಾನು ದೊಡ್ಡವನಾದಂತೆ ಆ ಅಹಂಕಾರದ ಬಿಸಿ ನಿನ್ನನ್ನೂ ಸೇರಿಸಿ, ನನ್ನ ಜೀವನಕ್ಕೆ ಸಂಬಂಧಿಸಿದ ಎಲ್ಲಾ ಹೆಂಗಸರಿಗೂ ಸುಡಲಿದೆ. ಆದರೆ ಆಗ ಬಹಳ ತಡವಾಗಿರುತ್ತದೆ. ಏಕೆಂದರೆ ಆ ಅಹಂಕಾರವನ್ನು ನಾಶ ಮಾಡುವುದು ನನ್ನ ಎಟಕಿಗೂ ಮೀರಿರುತ್ತದೆ. ಏಕೆಂದರೆ ಆ ಅಹಂಕಾರ ನನ್ನ ಚರ್ಮದಷ್ಟೇ ನನ್ನೊಡನೆ ಒಂದಾಗಿರುತ್ತದೆ.

ಅಮ್ಮ ನೀನು ಕೇಳುತ್ತಿರುವೆಯಷ್ಟೆ ?

ಕನಸು ಕಾಣುವುದರಲ್ಲಿ ನನ್ನ ಸಮಯ ಎಷ್ಟು ಸುಂದರವಾಗಿ ಕಳೆಯುತ್ತದೆ ಗೊತ್ತೇ ? ಇಲ್ಲಿಯ ಬೆಚ್ಚಗಿನ ಸುರಕ್ಷಿತ ಕತ್ತಲೆಯಲ್ಲಿ ಕುಳಿತು ಭವಿಷ್ಯದ ಬಗ್ಗೆ ಆಲೋಚಿಸುವುದರಲ್ಲಿ ನನಗೆ ಬಹಳ ಸಂತೋಷವಾಗುತ್ತಿದೆ.

ಮೂಲ ಮರಾಠಿ : ಮಾಧುರಿ ಶಾನಭಾಗ

ನನಗೆ ಹೆಸರಿಡುವ ಸಮಾರಂಭವನ್ನು ವಿಜೃಂಭಣೆಯಿಂದ ಮಾಡುವ ನಿನ್ನ ಹಾಗೂ ಅಪ್ಪನ ನಿರ್ಧಾರ ನನ್ನ ಅಹಂಕಾರಕ್ಕೆ ನೀರೆರೆಯುತ್ತಿದೆ. ನನ್ನ ಇಬ್ಬರು ಅಕ್ಕಂದಿರು ಹಾಗೂ ಜನ್ಮತಾಳಲು ಅಶಕ್ಯಳಾದ ನನ್ನ ಮೂರನೆಯ ಅಕ್ಕನಿಗಿಂತ ನಿಮ್ಮಿಬ್ಬರಿಗೆ ನಾನು ಹೆಚ್ಚು ಬೇಕಿರುವೆನೆಂದು ನನಗೆ ಈ ದಿನವೇ ತಿಳಿದಿದೆ. ಸಮಯ ಬಂದರೆ ನಾನು ಇದರ ಲಾಭವನ್ನು ಶಸ್ತ್ರದಂತೆ ಉಪಯೋಗಿಸಿ ಪಡೆದುಕೊಳ್ಳುವವನಿದ್ದೇನೆ.

ಮನೆ ಮಂದಿಯ ಗಮನ ನಾನು ಕೇಳದೆಯೇ ತನಗೆ ತಾನೇ ಸಿಗಲಿದೆ. ನನ್ನ ಪ್ರತಿಯೊಂದು ಕೃತಿಯ ಬಗೆಗೂ ಮುದ್ದು ಮಾಡುವವರಿದ್ದೀರಿ. ನನ್ನ ಪ್ರಗತಿಯ ಪ್ರತಿಯೊಂದು ಮೆಟ್ಟಲನ್ನು ನೀನು ಮೊದಲ ಬಾರಿಗೆ ತಾಯಿಯಾದವಳಂತೆ ಅನುಭವಿಸುವವಳಿರುವೆ. ನಾನು ಅಂಬೆಗಾಲಿಟ್ಟಾಗ, ಹೆಜ್ಜೆ ಹಾಕಲು ಕಲಿತಾಗ, ನೀವು ಕೇವಲ ನನ್ನತ್ತಲೆ ನೋಡುವಿರಿ ಎಂಬ ಕಾಳಜಿ ನಾನು ವಹಿಸಲಿದ್ದೇನೆ. ಅಂದರೆ ನಾನೊಬ್ಬ ಕರಡಿ ಕುಣಿಸುವವನಾಗಿದ್ದು ನೀವೆಲ್ಲರೂ ನನ್ನ ಪ್ರೀತಿಯ ಹಗ್ಗದಿಂದ ಕಟ್ಟಲ್ಪಟ್ಟು ನಾನು ಕುಣಿಸುವಂತೆ ಕುಣಿಯುವ ಕರಡಿಗಳಾಗುವಿರಿ.

ನಾನು ಶಾಲೆಗೆ ಹೋಗುವ ವಯಸ್ಸಿಗೆ ಬಂದಾಗ ನನಗೆ ಒಳ್ಳೆಯ ಶಾಲೆಯಲ್ಲಿ ತರಬೇತಿ ನೀಡುವಿರಲ್ಲವೆ ? ಎಷ್ಟು ಬೇಡಿದರೂ ನೀವು ಡೊನೇಶನ್ ಕೊಡಲು ಸಿದ್ಧರಾಗಿರುವಿರಿ. ಅದಕ್ಕಾಗಿ ಬೇಕಾದರೆ ನೀನು ಅಪ್ಪನೊಡನೆ ಹಟಮಾಡುವೆ. ಹೆಚ್ಚಾಗುತ್ತಿರುವ ಖರ್ಚನ್ನು ಕಡಿಮೆ ಮಾಡಲು ದೊಡ್ಡ ಅಕ್ಕನ ಲಾಯ್‌ಬ್ರರಿಯನ್ನು, ಹಾಗೆಯೇ ಚಿಕ್ಕ ಅಕ್ಕನ ಡಾನ್ಸ್ ಕ್ಲಾಸನ್ನು ಬೇಕಾದರೂ ನಿಲ್ಲಿಸಬಿಡುವೆ. ಅದೇನು ಮಹಾ. ನನ್ನ ಬರುವಿಕೆಗಾಗಿ ಒಂದು ಜೀವದ ಬಲಿಯನ್ನೇ ತೆಗೆದುಕೊಂಡಿರುವಾಗ ಇಂಥ ಸಣ್ಣಪುಟ್ಟ ವಿಷಯದ್ದೇನು ಮಹತ್ವ ?

ಹೀಗಾದ ಮೇಲೆ ನನಗಾಗಿ ನೀವೆಲ್ಲರೂ ನಿಮ್ಮ ನಿಮ್ಮ ಇಚ್ಛೆಗಳನ್ನು, ಹಲವೊಮ್ಮೆ ಅವಶ್ಯಕತೆಗಳನ್ನು, ಆಮೆಯು ತನ್ನ ಅವಯವಗಳನ್ನು ಒಳಗೆ ಎಳೆದುಕೊಳ್ಳುವಂತೆ ಮುದುಡಿಕೊಳ್ಳುವ ಅಭ್ಯಾಸ ನಿಮಗೆ ಆಗುವುದು.

ನಾನು ಟ್ರಿಪ್‌ಗೆ ಹೋಗಬೇಕು !

ಮಗಳೇ, ಡಾನ್ಸ್‌ಗಾಗಿ ನಿನ್ನ ಚನಿಯಾ ಚೋಳಿ ಮುಂದಿನ ತಿಂಗಳು ತೊಗೊಳೋಣಾ ಆಯಿತಾ !

ನನ್ನ ಸ್ಕೂಲ್ ಬಸ್‌ನ ದರ ಹೆಚ್ಚಾಯಿತು. ನನ್ನ ಚಿತ್ರಕಲೆಗಾಗಿ ದುಬಾರಿ ಬಣ್ಣಗಳು ಬೇಕು.

ಮಗಳೇ, ನೀನು ಎಲ್ಲರಿಗಿಂತ ಹಿರಿಯಳಲ್ಲವೆ ? ನಿನ್ನ ಬಟ್ಟೆಯ ಹೂವಿನ ಕ್ಲಾಸನ್ನು ಮುಂದಿನ ರಜೆಯಲ್ಲಿ ಮಾಡುವೆಯಂತೆ ! ನನ್ನ ಜಾಣಮರಿ ! ಹೀಗೆ ಸಣ್ಣ ಪುಟ್ಟ ತ್ಯಾಗಗಳನ್ನು ನೀನಂತೂ ಮಾಡೇ ಮಾಡುವೆ, ಆದರೆ ನನ್ನ ಇಬ್ಬರು ಅಕ್ಕಂದಿರಿಂದಲೂ ಸಮಾಧಾನದ ಮಾತುಗಳನ್ನಾಡಿ ಮಾಡಿಸುವೆ.

ಈ ಎಲ್ಲದರ ಅಭ್ಯಾಸ ನನಗೆ ಎಷ್ಟರಮಟ್ಟಿಗೆ ಆಗುವುದೆಂದರೆ, ನಾನು ಅದರ ಹಿಂದಿನ ನಿಮ್ಮ ಭಾವನೆಯನ್ನು ಅರಿತುಕೊಳ್ಳದೆ ಅದನ್ನು ನನ್ನ ಹಕ್ಕೆಂದೇ ಭಾವಿಸುವೆ. ನನ್ನ ಸುತ್ತ ಇರುವ ಹೆಣ್ಣು ಮಕ್ಕಳು ಈ ರೀತಿಯ ತ್ಯಾಗವನ್ನು ಮಾಡಲೇಬೇಕೆಂದು ಅವರಿಗೆ ಹಾಗೆ ನನಗೂ ಹಾಗೆಯೇ ಅವರೂ ಮಾಡಿಯೇ ಮಾಡುತ್ತಾರೆಂದು ಭಾವಿಸುವ ಪಾಠವನ್ನು ಒಮ್ಮೆಯೇ ಕಲಿಸಿದಂತಾಗುವುದು.

ಸ್ವಲ್ಪ ದೊಡ್ಡವನಾದೆನೆಂದರೆ ಕೋಚಿಂಗ್ ಕ್ಲಾಸ್‌ಗಳಲ್ಲಿ, ಒಳ್ಳೆಯ ಕಾಲೇಜಿಗಾಗಿ ನನ್ನ ಬುದ್ಧಿವಂತಿಕೆ ಕಡಿಮೆ ಬಿದ್ದರೂ ನೀವು ನಿಮ್ಮ ಇನ್ನು ಹಲವಾರು ಆವಶ್ಯಕತೆಗಳನ್ನು ಬದಿಗೊತ್ತಿ ನನಗೆ ಯಾವುದರ ಕೊರತೆ ಆಗದಂತೆ ನೋಡಿಕೊಳ್ಳುವಿರಿ. ಅಮ್ಮ, ಅದಕ್ಕೆ ಸ್ಫೂರ್ತಿಯ ಧಾರೆಯನ್ನು ನೀನೇ ಹಿಡಿಯುವೆ.

ನನಗೆ ಪಿ.ಯು.ಸಿ. ಎರಡನೆಯ ಪರೀಕ್ಷೆಯ ಸಮಯದಲ್ಲಿ ನೆಗಡಿಯಾದರೆ ಅಥವಾ ಟೆನ್ಶನ್‌ನ ಪರಿಣಾಮವಾಗಿ ಕಡಿಮೆ ಮಾರ್ಕ್‌ಗಳು ಸಿಕ್ಕರೂ, ಸಾಲವಾದರೂ ತೆಗೆದು ನೀವಿಬ್ಬರೂ ನನಗೆ ಡೊನೇಶನ್ ಕೊಟ್ಟು ದುಬಾರಿ ಕೋರ್ಸಿಗೆ ಸೇರಿಸುವಿರಿ. ಅಲ್ಲಿ ನಾಲ್ಕು ವರ್ಷದ ಕೋರ್ಸ್‌ನ್ನು ಆರು ವರ್ಷಗಳಲ್ಲಿ ಮುಗಿಸುವೆ. ಅಲ್ಲಿಯವರೆಗೆ ನನ್ನ ದೊಡ್ಡಕ್ಕ ಟೈಪಿಂಗ್ ಕಲಿತು, ಪಾರ್ಟ್‌ಟಾಯಿಮ್ ಕೆಲಸ ಮಾಡುತ್ತಾ ಆರ್ಟ್ಸ್ ಕಲಿಯುವಳು. ಅವಳ ಕಂಠದೊಳಗಿನ ಮಧುರ ಸಂಗೀತ ಹಾಗೆಯೇ ಕರಗಿ ಹೋಗುವುದು. ಚಿಕ್ಕ ಅಕ್ಕ ನರ್ಸಿಂಗ್ ಕೋರ್ಸ್‌ನ್ನು ಆರಿಸುವಳು. ಅವಳ ಕೈ ಬೆರಳುಗಳು ಉದ್ದವಾಗಿದ್ದು, ಕೈ ಬಹಳ ನಾಜೂಕಾಗಿದೆ ಎಂದು ಅವಳ ಟೀಚರ್ ನಿನಗೆ ಹೇಳಿದ್ದರಲ್ಲವೆ ? ಅವಳು ಉತ್ತಮ ಚಿತ್ರಗಾರ್ತಿ ಅಥವಾ ಸರ್ಜನ್ ಆಗಬಹುದೆಂದು ? ಚಿಕ್ಕ ತಮ್ಮನ ಶಿಕ್ಷಣಕ್ಕಾಗಿ ಸ್ವಲ್ಪ ತ್ಯಾಗ ಮಾಡಿದರೇನು ಮಹಾ ?

ಅವರ ಈ ರೀತಿ ತಯಾರಾದ ತಾಳ್ಮೆಯ ಹೊಂದಾಣಿಕೆಯ ಸ್ವಭಾವದ ಕಾರಣ ಹೋದ ಮನೆಯಲ್ಲಿ ಸುಖವಾದ ಸಂಸಾರ ಮಾಡುವರು. ನಿನ್ನ ಕಲಿಸುವಿಕೆ ದಂಡವಾಗಲಿಕ್ಕಿಲ್ಲ. ಗಂಡಸರ ಸಲುವಾಗಿ ತಮ್ಮತನವನ್ನು ಬದಿಗೊತ್ತುವ ಅಭ್ಯಾಸ ಅವರಿಗೆ ಸುಖವನ್ನು ನೀಡಲಿದೆ, ಎಂದಲ್ಲವೆ ನಿನ್ನ ಮಾತು !

ನಾನು ಹೇಗೋ ಅತ್ತು ಕರೆದು ಡಿಗ್ರಿಯ ಮುಕುಟವನ್ನು ಧರಿಸಿದ ಮೇಲೆ ರಿಟಾಯರ್ ಆಗುವ ಹೊಸ್ತಿಲಲ್ಲಿ ನಿಂತ ಅಪ್ಪಾ ನನಗಾಗಿ ಎಲ್ಲೆಲ್ಲೊ ಕೆಲಸ ಕೊಡಿಸಲು ಖಂಡಿತವಾಗಿ ಪ್ರಯತ್ನಿಸುವರು. ಕಡೆಗೆ ದುಡ್ಡನ್ನು ಸುರಿದಾದರೂ ಅವರ ಪ್ರಯತ್ನಕ್ಕೆ ಯಶಸ್ಸು ದೊರೆಯುವುದು. ಅಲ್ಲಿಯವರೆಗೆ ನೀನು ಅವರನ್ನು ಸುಮ್ಮನಿರಲು ಬಿಡಲಿಕ್ಕಿಲ್ಲ. ಏನಾದರೂ ಕೈ ಕಾಲು ಆಡಿಸಬೇಡವೇ ? ಅವನೊಬ್ಬನೇ ಏನು ಮಾಡಿಯಾನು ? ಈಗ ನಾವು ಅವನಿಗೋಸ್ಕರ ಪ್ರಯತ್ನ ಮಾಡಲಿಲ್ಲವಾದರೆ ಇನ್ನಾರು ಮಾಡುವರು ? ನಿನ್ನ ಈ ವಾದ ಮೆಚ್ಚತಕ್ಕದ್ದೇ !

ಆ ನಂತರ ನನ್ನ ಭಾವನಾವಿರಹಿತ ವರ್ತನೆ ನಿನಗೆ ಅರಿಯಲಾರಂಭಿಸುವುದು. ನನಗಾಗಿ ನೀನು ಏನೆಲ್ಲಾ ಕಷ್ಟಗಳನ್ನು ಅನುಭವಿಸಿರುವ ಕಾರಣ, ಕಲ್ಪನೆಯಲ್ಲಿಯೇ ಕ್ಷಣಕಾಲ ನೀನು ಸಮಾಧಾನ ಮಾಡಿಕೊಳ್ಳುವಿ. ಆದರೆ ನಾನು ಮಾತ್ರ, ಅದರಲ್ಲೇನು ಮಹಾ ? ನಾನು ಬೇಕಂತಾ ತಾನೇ ನೀವು ಇಷ್ಟೆಲ್ಲ ಕಷ್ಟಪಟ್ಟದ್ದು ? ಇದು ನಿಮ್ಮ ಕರ್ತವ್ಯವೇ ಸರಿ ! ಎಂದು ಹೇಳಲು ಹಿಂಜರಿಯುವುದಿಲ್ಲ.

ಇದೇ ರೀತಿ ಕಷ್ಟಪಡುವ, ಸಹನೆ ಇಂದಿರುವ ದೊಡ್ಡಕ್ಕ –ಚಿಕ್ಕಕ್ಕನ ಹಾಗೆ ಯಾವಾಗಲೂ ಮನೆಯಲ್ಲಿಯ ಗಂಡಸರೊಡನೆ ಅಡ್‌ಜಸ್ಟ್ ಮಾಡಿಕೊಳ್ಳುವ ಹೆಣ್ಣು ನನಗೆ ಸಿಗುವಳು. ಅದಕ್ಕಾಗಿಯೂ ಸಹ ನೀನೇ ಒದ್ದಾಡುವೆ. ಆಮೇಲೆ ನನ್ನ ಸುಖಕ್ಕಾಗಿ ಅವಳನ್ನು ಬೇಕಾದ ಹಾಗೆ ಬಗ್ಗಿಸಲು, ತವರುಮನೆಯಿಂದ ಇದು ಅದು ತೆಗೆದುಕೊಂಡು ಬಾ ಎಂದು ಹೇಳುತ್ತಾ ಅವಳನ್ನು ಕಸಕ್ಕಿಂತಲೂ ಕಡೆಗಾಣುವ ನನ್ನ ಅಧಿಕಾರವನ್ನು ನಾನು ಖಂಡಿತವಾಗಿಯೂ ಉಪಯೋಗಿಸುವೆನು. ಏಕೆಂದರೆ ಅಲ್ಲಿಯವರೆಗೆ ನಾನು ಗಂಡಸು ಎಂಬ ಅಹಂಕಾರ ನನ್ನ ಉಸಿರಾಟದಷ್ಟು ನನ್ನೊಡನೆ ಬೆರೆತು ಹೋಗಿರುವುದು. ಅದರ ಬಿಸಿಯನ್ನು ನೀನು ಮತ್ತು ಅವಳು ಸಹಿಸುತ್ತಾ ಸಮಯ ಬಂದಾಗ ಅದಕ್ಕೆ ಎಣ್ಣೆ ನೀರು ಹಾಕಿ, ಇದು ನಮ್ಮ ಹಣೆಬರಹ ಎಂದನ್ನುತ್ತ ಈ ದುಷ್ಟಚಕ್ರವನ್ನು ಹೀಗೆಯೇ ತಿರುಗಿಸುವಿರಿ.

ಆ ವೇಳೆಗೆ ಇಪ್ಪತ್ತೊಂದನೆಯ ಶತಮಾನ ಬಂದು ಅನೇಕ ವರ್ಷಗಳೇ ಉರುಳಿಹೋಗಿರುತ್ತದೆ. ವಿಜ್ಞಾನವು ಬಹಳ ಪ್ರಗತಿ ಸಾಧಿಸಿರುವುದು. ಬೇಕಾದ ಸಂತಾನ ಖಂಡಿತವಾಗಿ ಹುಟ್ಟುವ ಶಾಸ್ತ್ರ ತಯಾರಿಸಲ್ಪಡುವುದು. ಇಲ್ಲವಾದರೂ ಈಗ ನೀನು ನನ್ನನ್ನು ಪಡೆಯಲು ಅನುಸರಿಸಿದ ದಾರಿಯನ್ನೇ ನಾನೂ ಅನುಸರಿಸಬಹುದು. ಆದರೆ ಮೊದಲ ಬಾರಿಗೇ ಗಂಡು ಮಗು ಹುಟ್ಟಬೇಕೆಂದು ಅವಶ್ಯಕವಾದ ಎಲ್ಲ ಕಾಳಜಿ ವಹಿಸುವೆನು. ಏಕೆಂದರೆ ನನಗೆ ಒಂದೇ ಮಗು ಬೇಕು. ಅದಕ್ಕೆ ಹೆಂಡತಿಯು ವಿರೋಧಿಸಿದರೆ ಅದನ್ನು ಅಲಕ್ಷ್ಯ ಮಾಡಬಹುದಲ್ಲವೆ ?

ಈಗ ನನಗೆ ಚಿರಕಾಲ ಹೇಳುವ ಒಂದು ಕಥೆ ನೆನಪಿಗೆ ಬರುತ್ತಿದೆ. ನೀನು ಚಿಕ್ಕವಳಾಗಿದ್ದಾಗ ಅಜ್ಜಿಯು ನಿನಗೂ ಹೇಳಿರಬಹುದು. ಒಬ್ಬ ಚಿಕ್ಕ ಹುಡುಗ ಶಾಲೆಯೊಳಗಿಂದ ಪೆನ್ಸಿಲ್ ಕದ್ದು ತರುತ್ತಾನೆ. ಆಗ ಅವನ ತಾಯಿ ಅವನಿಗೆ ಭೇಷ್ ಎನ್ನುತ್ತಾಳೆ. ಮುಂದೆ ಅದರ ಪರಿಣಾಮವಾಗಿ ಅವನು ಒಬ್ಬ ಕಳ್ಳ, ಕೊಲೆಗಾರನಾಗುತ್ತಾನೆ. ಮುಂದೆ ಅವನಿಗೆ ಮರಣದಂಡನೆಯಾಗುತ್ತದೆ. ಆಗ ಅವನು ತನ್ನ ತಾಯಿಯನ್ನು ಭೇಟಿಯಾಗುವ ಅಂತಿಮ ಇಚ್ಛೆಯನ್ನು ವ್ಯಕ್ತಪಡಿಸುತ್ತಾನೆ. ಹಾಗೆ ಅವಳು ಭೇಟಿಯಾದಾಗ ಅವಳನ್ನು ಬಲು ಜೋರಾಗಿ ಕಚ್ಚುತ್ತಾನೆ. ನೀನು ನನ್ನ ಮೊದಲ ಕಳುವನ್ನು ನಿಲ್ಲಿಸಲಿಲ್ಲ, ಆದ್ದರಿಂದ ನಾನು ಹೀಗೆ ಈ ಪಾಪಕರ್ಮದಲ್ಲಿ ತೊಡಗಿರುವೆ ಎಂದು ಹೇಳುತ್ತಾನೆ. ಈ ಕಥೆ ನಿನಗೆ ಗೊತ್ತಿದೆಯಲ್ಲವೆ ?

ಮುಂದೆ ನಾನು ಅಹಂಕಾರದ ಬಲೆಯಲ್ಲಿ ಸಿಕ್ಕಿ ಬೀಳುವೆನು. ಆಗ ನನ್ನ ಜೀವನದಲ್ಲಿ ಬರುವ ಪ್ರತಿಯೊಬ್ಬ ಹೆಂಗಸಿಗೆ — ಅದರಲ್ಲಿ ನೀನೂ ಸೇರಿರುವೆ – ನನ್ನ ಗಂಡಸಿನ ಅಹಂಕಾರದ ಬೇಗೆ ಅನುಭವಿಸುವಂತೆ ಮಾಡುವೆನು. ಅದರ ಉಗಮ, ಅಮ್ಮ, ಇಂದಿನ ನಿನ್ನ ನಿರ್ಣಯದಲ್ಲಿ ಅಡಗಿದೆ ಎಂಬುದು ನೆನಪಿರಲಿ.

ಅಂತೆಯೇ, ಜನ್ಮವನ್ನು ತಾಳದೆಯೇ ಹೆಂಗಸಿನ ಎಲ್ಲಾ ಯಾತನೆಗಳಿಂದ ಮುಕ್ತಿಗೊಳಿಸಿರುವ, ನನ್ನ ಮೊದಲು ಹುಟ್ಟದಿರದ ಅಕ್ಕನ ಪರವಾಗಿ ಧನ್ಯವಾದಗಳನ್ನು ಅರ್ಪಿಸುವುದೇ ಉಳಿದುಹೋಗಿದೆ. ಅವಳ ಅದುಮಿದ ಬಿಕ್ಕಿನ ಪ್ರತಿಧ್ವನಿ, ನಿನ್ನ ಗರ್ಭಾಶಯದ ಗೋಡೆಗಳ ಮೇಲೆ ಈಗಲೂ ಅಪ್ಪಳಿಸುತ್ತಿದೆ ಹಾಗೂ ಅವುಗಳನ್ನು ನಾನೇ ಅನುಭವಿಸಬಲ್ಲೆ.

ಅಮ್ಮಾ , ನೀನು ಕೇಳಿಸಿಕೊಳ್ಳುತ್ತಿರುವೆ ತಾನೇ ?

ಕನ್ನಡ ಅನುವಾದ : **ಮಾಣಿಕ್ ಪಟವರ್ಧನ್**
ನಂ. ೬, ೩ನೇ ಮಹಡಿ, ಮಾರುತಿ ಕಾಂಪ್ಲೆಕ್ಸ್, ೨ನೇ ರೇಲ್ವೇಗೇಟ್ ಎದುರು
ದೇಶಮುಖ ರಸ್ತೆ, ತಿಲಕವಾಡಿ, ಬೆಳಗಾಂ - ೬



ಇನ್ನು ಆಯ್ಕೆ ಪದ್ಧತಿ. ಆಯ್ಕೆಗಾಗಿ ಬರುವ ಚಿತ್ರಗಳ ಸಂಖ್ಯೆ ಕಡಿಮೆಯಿದ್ದರೆ ಆಯ್ಕೆ ಸಮಿತಿ ಸದಸ್ಯರೆಲ್ಲರೂ ಎಲ್ಲ ಚಿತ್ರಗಳನ್ನೂ ನೋಡಬಹುದು. ಆದರೆ ಆಯ್ಕೆಗಾಗಿ ಬರುವ ಚಿತ್ರಗಳ ಸಂಖ್ಯೆ ಹೆಚ್ಚಾದರೆ ಸಮಿತಿಯನ್ನು ಉಪಸಮಿತಿಗಳಾಗಿ ವಿಂಗಡಣೆ ಮಾಡಿ ಚಿತ್ರವೀಕ್ಷಣೆಯನ್ನು ಮಾಡಲಾಗುತ್ತದೆ. ಈ ಉಪಸಮಿತಿಗಳು ಶಿಫಾರಸ್ ಮಾಡುವ ಚಿತ್ರಗಳನ್ನು ಪೂರ್ಣಸಮಿತಿ ಮತ್ತೆ ವೀಕ್ಷಿಸುತ್ತದೆ. ಈ ಉಪಸಮಿತಿಗಳು ಶಿಫಾರಸು ಮಾಡದಿರುವ ಚಿತ್ರವನ್ನೂ ಸಮಿತಿಯ ಅಧ್ಯಕ್ಷರು ವಾಪಸು ಕರೆಸಿಕೊಂಡು ಎಲ್ಲರ ಜೊತೆ ನೋಡುವುದು ಸಾಧ್ಯ. ಹಾಗಾಗಿಯೂ ಇದೆ. ಅಧ್ಯಕ್ಷರು ಎಂಬ ಮಾತು ಬಂತು. ಮರೆತಿದ್ದೆ. ಈ ಆಯ್ಕೆ ಸಮಿತಿಗೆ ಒಬ್ಬರು ಅಧ್ಯಕ್ಷರು ಮತ್ತು ೧೫-೨೦ ಸದಸ್ಯರು ಇರುತ್ತಾರೆಂಬುದನ್ನು ಹೇಳಲಿಲ್ಲ.

ಅಭಿಪ್ರಾಯ. ಕಾರಣ, ನಮ್ಮ ದೇಶದಲ್ಲಿ ೨-೩ ಕೋಟಿಗೂ ಮೀರುವಷ್ಟು ಜನ ಮಾತನಾಡುವ ಭಾಷೆಗಳು ಎಷ್ಟಿವೆ, ಉಪಭಾಷೆಗಳು ಎಷ್ಟಿವೆ ಎಂದು ಯೋಚಿಸಿದರೆ, ನಾವು ಸದ್ಯದ ಪರಿಸ್ಥಿತಿಯಲ್ಲಿ ಈಗಿರುವುದೇ 'ವ್ಯವಸ್ಥೆ' ಎಂದು ಹೇಳಬೇಕಾಗುತ್ತದೆ. ಆದರೆ ಎಂಟನೆಯ ಷೆಡ್ಯುಲ್‌ನ ಭಾಷೆಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅವೆಲ್ಲಕ್ಕೂ ಪ್ರತ್ಯೇಕ ರಾಷ್ಟ್ರಪ್ರಶಸ್ತಿ ನೀಡಬಹುದು. - ಇಲ್ಲಿ ಗಮನಿಸಬೇಕಾದ್ದು **ಪ್ರಾದೇಶಿಕ** ಚಿತ್ರ ಎಂದಲ್ಲ. ಸಾಹಿತ್ಯ ಅಕಾಡೆಮಿ, ನಾಟಕ ಮತ್ತು ಇತರ ಅಕಾಡೆಮಿಗಳಲ್ಲೂ ಆಯ್ಕೆಯಲ್ಲಿ ಇದೇ ಮಾದರಿಯ ಕಷ್ಟ ಸುಖಗಳು ಇರುತ್ತವೆಯಲ್ಲವೆ ? ಅಂದಹಾಗೆ, ನ್ಯಾಯಾನ್ಯಾಯಗಳು ಕೇವಲ ಚಲನಚಿತ್ರ ರಂಗಕ್ಕೆ ಸೀಮಿತವಾಗಿಲ್ಲ. ಭ್ರಷ್ಟಾಚಾರ ತುಂಬಿದ ನಮ್ಮ ಸಮಾಜದ ಇತರ ಪ್ರಕ್ರಿಯೆಗಳಲ್ಲೂ ಇದೆ ಎಂಬುದನ್ನು ಖೇದದಿಂದ ಒಪ್ಪಬೇಕಾಗಿದೆ.

# ಪ್ರತಿಭಟನೆಯಿಂದ ಎಚ್ಚರ ಮೂಡಲಿ

*– ಟಿ. ಎಸ್. ರಂಗ*

**ಹೊಸತು** : ಚಲನಚಿತ್ರಗಳಲ್ಲಿ ವಿವಿಧ ಪ್ರಕಾರಗಳ ರಾಷ್ಟ್ರಪ್ರಶಸ್ತಿಗಳನ್ನು ನೀಡಲು ಆಯ್ಕೆಯ ಪದ್ಧತಿಗಳೇನು ? ಅವುಗಳಲ್ಲಿ ನೀವು ಗುರುತಿಸುವ ನ್ಯೂನತೆಗಳೇನು ?

**ಟಿ. ಎಸ್. ರಂಗ** : ಚಲನಚಿತ್ರಗಳ ರಾಷ್ಟ್ರಪ್ರಶಸ್ತಿಗಳನ್ನು ಒಂದು ನಿರ್ದಿಷ್ಟ ಅವಧಿಯಲ್ಲಿ (ಒಂದು ವರುಷ) ತಯಾರಾದ ಮತ್ತು ಸೆನ್ಸಾರ್ ಆದ ಚಿತ್ರಗಳಿಗೆ ನೀಡುವುದು. ಚಿತ್ರಗಳಲ್ಲಿ ಹಲವಾರು ಪ್ರಕಾರಗಳಿಗೆ ಪ್ರಶಸ್ತಿ ನೀಡಲಾಗುತ್ತೆ. ನಟನೆ, ಛಾಯಾಗ್ರಹಣ, ಕಥೆ, ನಿರ್ದೇಶನ, ಕಲಾನಿರ್ದೇಶನ ಹೀಗೆ; ಉತ್ತಮ ಚಿತ್ರಕ್ಕೆಂದು ಕೂಡ ಪ್ರಶಸ್ತಿ ಇದೆ. ಪ್ರಶಸ್ತಿಗಳಿಗೆ ಕಲಾವಿದರನ್ನು ಆಯ್ಕೆ ಮಾಡಲು ಚಲನಚಿತ್ರ ನಿರ್ದೇಶನಾಲಯ ಒಂದು ಆಯ್ಕೆ ಸಮಿತಿಯನ್ನು ನೇಮಕ ಮಾಡುತ್ತೆ. ನ್ಯಾಯವಾಗಿ ಈ ಆಯ್ಕೆ ಸಮಿತಿಯಲ್ಲಿ ಚಲನಚಿತ್ರ ಮಾಧ್ಯಮದ ಭಾಷೆ ಮತ್ತು ವ್ಯಾಕರಣ ತಿಳಿದಿರುವವರೇ ಇರಬೇಕೆಂಬ ಸದ್ಭಾವನೆ ಇದೆ. ಹಾಗೆ ನಡೆಯಲಿ ಎಂದೇ ನನ್ನ ಆಸೆ, ಅಭಿಲಾಷೆ. ಈ ಸದಸ್ಯರು ಎಲ್ಲರೂ ಚಲನಚಿತ್ರರಂಗದಿಂದಲೇ ಬರಬೇಕೆಂಬುದೇನಿಲ್ಲ. ಒಬ್ಬ ಸಾಮಾಜಿಕ ವಿಜ್ಞಾನಿ ಇರಬಹುದು. ಒಬ್ಬ ಪ್ರತಿಭಾನ್ವಿತ ಸಮಾಜಸೇವಕನಿರಬಹುದು. ಆದರೆ ಎಲ್ಲರಿಗೂ ಇನ್ನೊಬ್ಬರ ಮಾತನ್ನು ಕೇಳುವ, ಅರ್ಥಮಾಡಿಕೊಳ್ಳುವ, ಚರ್ಚೆ ಮಾಡುವ ಶಕ್ತಿಯಿರಬೇಕೆಂಬುದು ಅಪೇಕ್ಷಣೀಯ.

ಒಂದು ಚಿತ್ರವನ್ನು ವೀಕ್ಷಿಸುವಾಗ ಸಮಿತಿಯ ಸದಸ್ಯ - ನಿರ್ದೇಶನ, ನಟನೆ, ಸಂಗೀತ, ಛಾಯಾಗ್ರಹಣ, ಹೀಗೆ ಎಲ್ಲವನ್ನೂ ಗಮನಿಸುತ್ತಿರಬೇಕು. ಹೀಗೆ ಚಿತ್ರದಲ್ಲಿನ ಎಲ್ಲ ವಿಭಾಗಗಳನ್ನೂ ಸಂಪೂರ್ಣವಾಗಿ ಗ್ರಹಿಸಲು 'ಸಾಕಷ್ಟು ತಯಾರಿ' ಮತ್ತು ಸಹನೆ ಇರಬೇಕು. ಇದು ಈಗೀಗ ಕೊಂಚ ಅಪರೂಪವಾಗಿರುವಂತಿದೆ.

ಆಯ್ಕೆ ಸಮಿತಿಗೆ ನೇಮಕಗೊಂಡ ಸದಸ್ಯರು ಸಮಿತಿ ಕಾರ್ಯ ನಿರ್ವಹಿಸುತ್ತಿರುವಷ್ಟು ಸಮಯ ತಮ್ಮ ಪ್ರಾದೇಶಿಕ ಐಡೆಂಟಿಟಿಯನ್ನು ಮರೆತು, ರಾಷ್ಟ್ರೀಯ ಆಯ್ಕೆ ಮಂಡಲಿ ಸದಸ್ಯರು ಮಾತ್ರ ಆಗಿರಬೇಕು.

ನ್ಯೂನತೆಗಳು ಇರುವುದು ಕೇವಲ ಚಲನಚಿತ್ರ ಆಯ್ಕೆ ಸಮಿತಿಯಲ್ಲಿ ಮಾತ್ರವಲ್ಲ. ಇತರ ಶಿಸ್ತುಗಳಲ್ಲಿ, ಕ್ಷೇತ್ರಗಳಲ್ಲಿ ಸಹ ಅದು ಇದೆ. ಬೇರೆ ಎಷ್ಟೋ ಕ್ಷೇತ್ರಗಳಲ್ಲಿ ಅದು ಇಲ್ಲಿಗಿಂತಲೂ ಹೆಚ್ಚು ಅಪಾಯಕಾರಿಯಾಗಿದೆಯೆಂಬುದನ್ನು ಗಮನಿಸೋಣ.

**ಹೊ** : ಎಲ್ಲಾ ಭಾಷೆಗಳಿಗೂ ಪ್ರಾತಿನಿಧ್ಯವಿರುವಂತೆ ಆಯ್ಕೆಯ ಪದ್ಧತಿಗಳನ್ನು ಪರಿಷ್ಕರಿಸಲು ಸಾಧ್ಯವೆ ? ಅದಕ್ಕೆ ನಿಮ್ಮ ಸಲಹೆಗಳೇನು ?

**ರಂ** : ಎಲ್ಲ ಭಾಷೆಗಳಿಗೂ ಪ್ರಾತಿನಿಧ್ಯವಿರುವಂತೆ ಆಯ್ಕೆಯ ಪದ್ಧತಿಗಳನ್ನು ಪರಿಷ್ಕರಿಸಲು ಸದ್ಯದ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲವೆಂದು ನನ್ನ ಖಚಿತ

**ಹೊ** : ಈ ಬಾರಿಯ ಪ್ರಶಸ್ತಿಗಳ ಆಯ್ಕೆಯು ಕೆಲವು ಆಕ್ಷೇಪಣೆಗಳಿಗೆ ಎಡೆ ಮಾಡಿಕೊಟ್ಟಿದೆ. ಆ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ರಂ** : ಈ ಬಾರಿಯ ಆಯ್ಕೆಯು ಸಾಕಷ್ಟು ಆಕ್ಷೇಪಣೆಗಳಿಗೆ ಗುರಿಯಾಗಿದೆ, ನಿಜ. ಒಂದು ಮುಖ್ಯ ಕಾರಣ ಈ ಬಾರಿಯ ಆಯ್ಕೆ ಸಮಿತಿಯ ಅಧ್ಯಕ್ಷರು ಹಿರಿಯ ಉತ್ತಮ ನಟಿ (ರಾಜಕೀಯವಾಗಿ ಕಾಂಗ್ರೆಸ್‌ನಿಂದ ಭಾರತೀಯ ಜನತಾ ಪಕ್ಷಕ್ಕೆ ಹಾರಿದ ಅಳುಕು ಇತ್ತೆಂದು ಕಾಣುತ್ತೆ), ಆದರೆ ಅಧ್ಯಕ್ಷರಿಗಿರಬೇಕಾದ ಕಾರ್ಯದಕ್ಷತೆ, ಸ್ಪಷ್ಟನಿಲುವು ಇಲ್ಲದ ಪೇಲವ ವ್ಯಕ್ತಿಯಾಗಿ ಉಳಿದರು. ಈ ಬಾರಿಯ ಅಧ್ಯಕ್ಷರು ಸಮಿತಿಯ ಸದಸ್ಯರ ಮೇಲೆ ಹಿಡಿತವನ್ನು ಇಟ್ಟುಕೊಳ್ಳಲಾಗದ್ದೇ ಈ ಸಮಿತಿ ಸೋಲಲು ಮುಖ್ಯ ಕಾರಣ. ಮಂತ್ರಿಯೊಬ್ಬರ ಚುನಾವಣಾ ಪ್ರಚಾರದಲ್ಲಿ ಭಾಗವಹಿಸಿದ್ದಕ್ಕಾಗಿ, ಒಂದೆರಡು ಸಿನಿಮಾಗಳನ್ನು ನೋಡಿರುವುದಕ್ಕಾಗಿ ಸಮಿತಿಯ ಸದಸ್ಯರಾಗಿರುವವರಿಗೆ ಸಿನಿಮಾ ಭಾಷೆ ಮತ್ತು ವ್ಯಾಕರಣ ತಿಳಿದಿದೆಯೆಂದುಕೊಳ್ಳುವುದು ತಪ್ಪು. ಅಂಥವರು ಈ ಸಮಿತಿಯಲ್ಲಿ ಇದ್ದರಲ್ಲ !

ಆದರೆ ಸಿನಿಮಾ ಭಾಷೆ, ವ್ಯಾಕರಣ ತಿಳಿದವರು ಸಂಘ ಪರಿವಾರದವರಾಗಿದ್ದರೇನು ? ಭಾಷೆ, ವ್ಯಾಕರಣ ಒಬ್ಬರ

*ಗೀಜಗನ ಗೂಡು, ಸಾವಿತ್ರಿ ಮತ್ತು ಗಿಧ್ (ಹಿಂದಿ)ಗಳ ನಿರ್ದೇಶಕ ಶ್ರೀ ಟಿ. ಎಸ್. ರಂಗ, ಶಂಬಾ ಜೋಶಿ ಮತ್ತು ಇತರ ಅನೇಕ ಸಾಕ್ಷ್ಯಚಿತ್ರಗಳ ನಿರ್ದೇಶಕರೂ ಹೌದು. ರಾಷ್ಟ್ರೀಯ ಪ್ರಶಸ್ತಿ ಆಯ್ಕೆ ಸಮಿತಿ, ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿ, ಅಂತರರಾಷ್ಟ್ರೀಯ ಚಿತ್ರೋತ್ಸವ ಆಯ್ಕೆ ಸಮಿತಿಗಳಲ್ಲಿ ಹಲವು ಬಾರಿ ಕಾರ್ಯ ನಿರ್ವಹಿಸಿದ್ದಾರೆ. ಸಿನಿಮಾದ ಬಗ್ಗೆ ಆಳವಾದ ಅಭ್ಯಾಸ ಮಾಡಿರುವ ನಮ್ಮಲ್ಲಿನ ಕೆಲವರಲ್ಲಿ ಇವರೊಬ್ಬರು. ಉತ್ತರ ಕರ್ನಾಟಕದ ವಾಡೆಗಳನ್ನು, ಜನಜೀವನವನ್ನು ಸಾವಿತ್ರಿ ಮತ್ತು ಗಿಧ್ ನೈಜವಾಗಿ (೧೯೮೧) ಚಿತ್ರೀಕರಿಸಿವೆ.*

*'ಹೊಸತು'ವಿಗಾಗಿ ಸಂದರ್ಶನ ನೀಡಲು ಒಪ್ಪಿ ಶ್ರೀ. ರಂಗ ಅವರು ಡಾ॥ ಜಿ. ರಾಮಕೃಷ್ಣ, ಎಸ್. ಸುರೇಂದ್ರ,, ಯು. ಎಸ್. ಶ್ರೀನಿವಾಸನ್ ಮತ್ತು ಕೆ.ಪಿ. ಸ್ವಾಮಿಯವರ ಜೊತೆ ಒಂದು ಗಂಟೆಗೂ ಮಿಕ್ಕು ವಿವಿಧ ವಿಷಯಗಳನ್ನು ಕುರಿತಂತೆ ಅಭಿಪ್ರಾಯ ವಿನಿಮಯ ಮಾಡಿಕೊಂಡರು. ಆ ಸಂದರ್ಶನದ ಆಯ್ದ ಭಾಗಗಳನ್ನು ಇಲ್ಲಿ ನೀಡಲಾಗಿದೆ. ಈ ಲೇಖನ ತಯಾರಿಸಿದವರು ಶ್ರೀ ಯು. ಎಸ್. ಶ್ರೀನಿವಾಸನ್.*

ಸ್ವತ್ತಲ್ಲ. ಆ ಭಾಷೆ ಮತ್ತು ವ್ಯಾಕರಣದಿಂದ ಏನು ಆಪತ್ತು ಬರಿಸುತ್ತಾರೋ ಅದರ ಬಗ್ಗೆ ನಮ್ಮ ಎಚ್ಚರವಿರಬೇಕು.

**ಹೊ** : ಹಿಂದೆ ಯಾವಾಗಲೂ ಹೀಗೆ ಬಹಿರಂಗವಾಗಿ ಆಯ್ಕೆಯನ್ನು ದೂಷಿಸಿದ್ದುದು ಇಲ್ಲವೆಂದು ಹೇಳುತ್ತಾರೆ. ಈ ಬಾರಿ ಗೊಂದಲ ಉಂಟಾಗಲು ಕಾರಣವೇನು ?

**ರಂ** : ಗೊಂದಲಗಳು, ಅಸಮಾಧಾನಗಳು ಹಿಂದೆಯೂ ಇದ್ದವು. ಬಲಿಷ್ಠ 'ಅಧ್ಯಕ್ಷ'ರು ತಮ್ಮ ತಮ್ಮ ನಿಲುವುಗಳನ್ನು ಪರೋಕ್ಷವಾಗಿ ಸದಸ್ಯರ ಮೇಲೆ ಹೇರುತ್ತಿದ್ದರು.

ಮತ್ತೆ ಮತ್ತೆ ನಾವು ಹೇಳಿದ್ದನ್ನೇ ಹೇಳಬೇಕಾಗಿದೆ. ಸದಸ್ಯರಿಗೆ ಸಿನಿಮಾ ಭಾಷೆ - ವ್ಯಾಕರಣ ತಿಳಿದಿರಬೇಕು, ಪ್ರಾಮಾಣಿಕತೆ, ಸ್ಪಷ್ಟತೆಗಳಿರಬೇಕು, ಚರ್ಚೆಯಲ್ಲಿ ಭಾಗ ವಹಿಸುವ ಇಷ್ಟ ಇರಬೇಕು, ಇತರರ ಅನುಭವದಿಂದ ಪಾಠ ಕಲಿಯುವ ಮನಸ್ಸಿರಬೇಕು. ಈ ಬಾರಿ ಕೆಲವರು ತಮಿಳು ಸಿನಿಮಾ ಪ್ರತಿನಿಧಿಗಳಾಗಿದ್ದರು, ಇತರರು ಹಿಂದಿ, ಬಂಗಾಲಿ, ಹೀಗೆ. ಆದರೆ ಇವೆಲ್ಲವನ್ನೂ ಮರೆತು ಕೇವಲ ಆಯ್ಕೆ ಸಮಿತಿ ಸದಸ್ಯರಾಗಿ ಇದ್ದವರಾರು ಎಂದು ತಿಳಿದುಬಂದಿಲ್ಲ.

**ಹೊ** : ಆಯ್ಕೆ ಸಮಿತಿಯ ಸದಸ್ಯರ ನೇಮಕಾತಿ ಹೇಗಿರಬೇಕು ? ಮತ್ತು ಆಯ್ಕೆಯನ್ನು ಯಾರು ಮಾಡಬೇಕು ?

**ರಂ** : ಆಯ್ಕೆ ಸಮಿತಿಯನ್ನು ಈವರೆವಿಗೂ ನೇಮಕ ಮಾಡುತ್ತಿದ್ದವರೇ ಈ ಬಾರಿಯೂ ಸಮಿತಿಯನ್ನು ನೇಮಿಸಿದ್ದು. ಆದರೆ ಈ ಬಾರಿಯ ವಿಶೇಷವೇನೆಂದರೆ ಆಯ್ಕೆಯಾದವರು ಯಾರು, ಏತಕ್ಕಾಗಿ ಆಯ್ಕೆ ಆದರು ಎಂಬುದು ಸಿನಿಮಾಕ್ಕೆ ಸಂಬಂಧಿಸಿದ ವಿಷಯವಾಗಿ ಉಳಿದಿಲ್ಲ.

**ಹೊ** : ಈ ಬಾರಿಯ ಆಯ್ಕೆ ಸಮಿತಿಯಿಂದ ಕೆಲವರು ಹೊರಬಂದಿದ್ದಾರೆ, ಕೆಲವರು ಒಳಗೇ ಉಳಿದು ವ್ಯಾಜ್ಯ ಮುಂದುವರಿಸಿದ್ದಾರೆ. ಈ ಬಗ್ಗೆ ನಿಮಗೇನನ್ನಿಸುತ್ತದೆ ?

**ರಂ** : ಈ ಬಾರಿಯ ಪ್ರಶಸ್ತಿ ಆಯ್ಕೆ ಸಮಿತಿಯಿಂದ ಕೆಲವರು ಹೊರಬಂದಿದ್ದಾರೆ. ಹೀಗೆ ಹೊರಬಂದಿರುವವ ರಲ್ಲಿ ಮುಖ್ಯರು ಘೋಷ್ ಮತ್ತು ಒಳಗಿದ್ದು ಅನ್ಯಾಯದ ವಿರುದ್ಧ ಹೋರಾಡಿದವರು ನಟ ಧೃತಿಮಾನ್ ಚಟರ್ಜಿ. ಹೀಗೆ ಪ್ರತಿಭಟಿಸುತ್ತಿರುವ ಮಂದಿಯೆಲ್ಲ ಪ್ರತಿಭಾನ್ವಿತರೇ. ನಿಸ್ಸಂದೇಹವಾಗಿ ಅವರು ಭಾರತೀಯ ಚಿತ್ರರಂಗಕ್ಕೆ ನೀಡಿರುವ ಕೊಡುಗೆ ಅಪಾರ. ಆದರೆ ಅವರ ಪ್ರತಿಭಟನೆ ಹುರುಳಿನಿಂದ ಕೂಡಿದ್ದರೂ, ಈ ಮಹನೀಯರ ಪ್ರತಿಕ್ರಿಯೆ ಬಹಳ ತಡ ಎಂಬುದು ನಿಜ. ಕೊಂಚ 'ಅವಕಾಶವಾದಿಗಳು' ಇವರು ಎಂಬ ಗುಮಾನಿ ಬರುತ್ತೆ. ''ದಂಡಿನಲ್ಲಿ ಸೋದರ ಮಾವನೆ'' ಎಂಬ ನಾಣ್ನುಡಿಯಿದೆ ಯಲ್ಲ! ಆದರೆ ಇಲ್ಲಿ ಸೋದರಮಾವ ಮೆಕ್‌ಮೋಹನ್ ತನ್ನ ಸೋದರ ಸೊಸೆಗೆ ಅತ್ಯುತ್ತಮ ನಟಿ ಪ್ರಶಸ್ತಿಯನ್ನು ತನ್ನ ಮತ ಚಲಾಯಿಸದೆ ತಂದುಕೊಟ್ಟನೆಂಬ ಆಪಾದನೆಯಿದೆ. ನನ್ನ ಮಟ್ಟಿಗೆ ಇದು ಬಹಳ ಬೇಸರದ ಸಂಗತಿ. ಇವರೆಲ್ಲರೂ ನನ್ನ ಸ್ನೇಹಿತರು. ಇವರಲ್ಲಿ ಕೆಲವರ ಜತೆ ನಾನೂ ಆಯ್ಕೆ ಸಮಿತಿ ಸದಸ್ಯನಾಗಿ ಕೆಲಸ ಮಾಡಿದ್ದೇನೆ. ಕೊಂಚ ನಿಧಾನವಾಗಿ ಯೋಚಿಸಿ : ''ಈಗ ಆಗಿರುವುದು ಅನ್ಯಾಯ, ಆದ್ದರಿಂದ ಪ್ರತಿಭಟನೆ.'' ಪ್ರಮಾದವಶಾತ್ ಈ ಆಯ್ಕೆ ಸಮಿತಿ ಈ ಪ್ರತಿಭಟನಾಕಾರರ ಚಿತ್ರಗಳನ್ನೂ ಕಲಾವಿದರನ್ನೂ ಒಪ್ಪಿದ್ದರೆ ಇವರೇನು ಮಾಡುತ್ತಿದ್ದರು ? ಸುಮ್ಮನಿರುತ್ತಿದ್ದರೋ, ಇಲ್ಲ ಆಗಲೂ 'ಕೇಸರೀಕರಣ' ಎಂದು ಹೇಳುತ್ತಿದ್ದರೋ ? ಚರಿತ್ರೆ ನಮ್ಮನ್ನು ತಿದ್ದಲಿ. ಏನೇ ಆಗಲಿ ಇವರ ಪ್ರತಿಭಟನೆ ಅಧಿಕಾರಾರೂಢರನ್ನು ಕೊಂಚವಾದರೂ ಎಚ್ಚರಿಸಿದರೆ ಸಂತೋಷ.



''ಹಿಂದೂ ಸಂಸ್ಕೃತಿ''ಯನ್ನು ಪ್ರಚಾರ ಮಾಡಲು ಒಂದು ಕೆಟ್ಟ ಸಿನಿಮಾವನ್ನು ಬಳಸಿಕೊಳ್ಳಲು ಹೋದುದು ತೀರಾ ಅನಾಗರಿಕ ವರ್ತನೆ. ಈ ಕಾರಣಕ್ಕಾಗಿ ಅಧ್ಯಕ್ಷರು ಸಾರ್ವಜನಿಕರೆಲ್ಲರ ಕ್ಷಮೆ ಕೋರಬೇಕು.

ಇನ್ನೊಂದು ವಿಷಯ ತಿಳಿಸುವುದು ಮೇಲು ! ಈ ಆಯ್ಕೆ ಸಮಿತಿ 'ಉತ್ತಮ' ಸಿನಿಮಾವನ್ನು ಮಾತ್ರ ಆಯ್ಕೆ ಮಾಡುವುದು. ಜೊತೆಗೆ ಕೊಂಚ ಸಾಮಾಜಿಕ ಕಾಳಜಿಯೂ ಇರಬೇಕು.

ಬಸವ, ಗಾಂಧಿ, ಅಂಬೇಡ್ಕರ್, ಲೆನಿನ್, ಹೋ ಚಿ ಮಿನ್ಹ್, ಕ್ಯಾಸ್ಟ್ರೊ, ಚೆ ಗುವೆರಾ, ಇವರ ಜೀವನದ ಆಧಾರದ ಮೇಲೆ ಚಿತ್ರಗಳು ಬಂದಾಗ ಆಯ್ಕೆ ಸಮಿತಿ ಗಮನಿಸುವುದು ಈ ಮಹಾನ್ ವ್ಯಕ್ತಿಗಳನ್ನಲ್ಲ, ಅವರ ಹೆಸರಿನ ಚಲನಚಿತ್ರಗಳನ್ನು ಮಾತ್ರ.

ಈ ಬಾರಿಯ ಆಯ್ಕೆ ಸಮಿತಿಯ ಕೆಲವರು 'ಕೇಸರೀಕರಣ', ಅದು, ಇದು ಎಂಬ ಕಾರಣಗಳನ್ನು ಕೊಟ್ಟು ಸಮಿತಿಯಲ್ಲಿ ಕೆಲ ಸಮಯವಿದ್ದು ಹೊರ ಬಂದಿದ್ದಾರೆ. ಇವರು ನೀಡಿರುವ ಎಲ್ಲಾ ಕಾರಣಗಳು ಸರಿಯೋ ತಪ್ಪೋ ಎನ್ನುವ ನಿರ್ಣಯ ನಾವೀಗ ಮಾಡ ಬೇಕಿಲ್ಲ. ಆದರೆ ಸಮಿತಿಯ ಹಲವಾರು ಸದಸ್ಯರು ಆಯ್ಕೆ ಸಮಿತಿಯಲ್ಲಿರಲು ಅನರ್ಹರು ಎಂದು ಹೇಳಿರುವ ಒಂದು ಕಾರಣವನ್ನು ಪರೀಕ್ಷಿಸೋಣ. ಎಂದಿನಂತೆ ಈ ಬಾರಿಯ ಆಯ್ಕೆ ಸಮಿತಿಯ ಸದಸ್ಯರ ಹೆಸರುಗಳನ್ನು ಮುಂಚಿತ ವಾಗಿಯೇ ಪ್ರಕಟಗೊಳಿಸಲಾಗಿತ್ತು. ಈ ಪ್ರತಿಯೊಬ್ಬ ಸದಸ್ಯರ ಅರ್ಹತೆ - ಗಳಿಕೆ ಇತ್ಯಾದಿಗಳೆಲ್ಲಾ ಇತರರಿಗೆ ತಿಳಿದಿತ್ತು. ಆದರೂ ಇವರ್‍ಯಾರೂ 'ಚ'ಕಾರವೆತ್ತಿರಲಿಲ್ಲ.

ಸಂಘಪರಿವಾರದವರ ಜಾತಕಗಳನ್ನು ಪಡೆದಿರುವ ಪತ್ರಕರ್ತರೂ ಸುಮ್ಮನಿದ್ದರು.

ಅಂದಹಾಗೆ, ನಮ್ಮ ರಾಜಕೀಯ ಪಕ್ಷಗಳಲ್ಲಿ ಕಲೆ, ಸಂಸ್ಕೃತಿ, ಸಾಹಿತ್ಯಗಳಿಗೆ ಯಾವ ಸ್ಥಾನ ಇದೆ ? ಸಂಘಪರಿವಾರದವರಿಗೆ 'ಅವರ' ಸಂಸ್ಕೃತಿಯನ್ನು ಪ್ರಸಾರ ಮಾಡಲು ಯಾವೊಂದು ಅವಕಾಶವನ್ನೂ ಅವರು ಕಳೆದು ಕೊಳ್ಳುವುದಿಲ್ಲವೆಂಬುದನ್ನು ಮೊದಲು ತಿಳಿದು ಕೊಳ್ಳೋಣ. ಕರ್ನಾಟಕದವರಾದ ನಮಗೆ ಈ ವಿಷಯ ಹೆಚ್ಚು ಅರಿವಾಗಿರಬೇಕು.

**ಹೊ** : ಪ್ರಶಸ್ತಿ ಪಡೆದ ಚಲನಚಿತ್ರಗಳಿಗೆ ಮಾರು ಕಟ್ಟೆಯಲ್ಲಿ ದೊರೆಯುವ ವಿಶೇಷ ಸೌಲಭ್ಯಗಳೇನಾದರೂ ಉಂಟೆ ? ಆ ಬಗ್ಗೆ ಏನಾದರೂ ಸಲಹೆಗಳನ್ನು ನೀಡುತ್ತೀರಾ ?

**ರಂ** : ರಾಷ್ಟ್ರೀಯ ಪ್ರಶಸ್ತಿ ಗಳಿಸಿದ ಚಿತ್ರಗಳಿಗೆ, ಅಂತರರಾಷ್ಟ್ರೀಯ ಚಿತ್ರೋತ್ಸವಗಳಿಗೆ ಆಯ್ಕೆಯಾದ ಚಿತ್ರಗಳಿಗೆ ಮತ್ತು ರಾಜ್ಯಪ್ರಶಸ್ತಿ ಪಡೆದ ಚಿತ್ರಗಳಿಗೆ ಕೆಲವು ಸೌಲಭ್ಯಗಳಿವೆ. ಅದಕ್ಕೆ ಹಲವಾರು ಯೋಜನೆಗಳು ಅನ್ವಯವಾಗುತ್ತವೆ. ಪ್ರಶಸ್ತಿ ಪಡೆದ ಚಲನಚಿತ್ರಗಳಿಗೆ ಮಾರುಕಟ್ಟೆಯಲ್ಲಿ ದೊರೆಯುವ ಸೌಲಭ್ಯ ಅಂದರೆ, ಮೊದಲನೆಯದಾಗಿ ಮನರಂಜನೆ ತೆರಿಗೆ ವಿನಾಯಿತಿ, ದೂರದರ್ಶನದಲ್ಲಿ ಆದ್ಯತೆಯ ಮೇಲೆ ಪ್ರಸಾರ ಮತ್ತು ಮಾಮೂಲು ಸಂಭಾವನೆಗಿಂತ ಕೊಂಚ ಅಧಿಕ ಪ್ರಮಾಣದ ಸಂಭಾವನೆ. ಅದೃಷ್ಟವಿದ್ದು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ಮಂಡಲಿ ಸರಿಯಾಗಿ ಕೆಲಸ ಮಾಡಿದರೆ ಚಿತ್ರಗಳು ವಿದೇಶಯಾತ್ರೆ ಮಾಡಿ ಕೊಂಚ ಹಣ ಸಂಪಾದಿಸಬಹುದು.

ರಾಷ್ಟ್ರಪ್ರಶಸ್ತಿ, ಚಲನಚಿತ್ರೋತ್ಸವಗಳು, ಇತ್ಯಾದಿ ಆರಂಭವಾದುದು ಚಲನಚಿತ್ರಗಳಲ್ಲಿ ಶ್ರೇಷ್ಠತೆಗೆ ಆದ್ಯತೆ ದೊರಕಿಸಿಕೊಡಬೇಕು ಎಂಬ ಉದ್ದೇಶದಿಂದ.

೦೦೦

# ಯುವಜನತೆ ಹಾಗೂ ವೈಚಾರಿಕತೆ

ಡಾ॥ ಎಚ್. ಎನ್. ಮಂಜುರಾಜ್

**ಯು**ವಜನತೆ ಆಯಾ ದೇಶದ ಪ್ರಗಲ್ಭ ರಾಷ್ಟ್ರೀಯ ಸಂಪನ್ಮೂಲ. ಈ ಮಾನವ ಶಕ್ತಿ ಸದ್ಬಳಕೆಯಾದರೆ 'ಹೊಸ ನಾಡೊಂದನ್ನು, ರಸದ ಬೀಡೊಂದನ್ನು' ಕಟ್ಟಬಹುದು. ಬುದ್ಧ, ಬಸವ, ಗಾಂಧಿ, ವಿವೇಕಾನಂದರೆಲ್ಲರೂ ಯುವಶಕ್ತಿಯನ್ನು ತಮ್ಮ ಚಿಂತನ ಕೇಂದ್ರದಲ್ಲಿ ಕಣ್ಮಣಿಯನ್ನಾಗಿಸಿಟ್ಟುಕೊಂಡವರೇ ! ಆದರೆ ನಾವಿಂದು ಯುವಜನತೆಯನ್ನು ಬೇಕಾಬಿಟ್ಟಿ ಬೆಳೆಸಿದ್ದೇವೆ, ಪಾರ್ಥೇನಿಯಂ ಗಿಡದ ತರಹ ! ಸುಂದರವಾದ ಉದ್ಯಾನವನದಲ್ಲಿ ಅರಳಿ ಗಮಗಮಿಸಬೇಕಿದ್ದ ಕುಸುಮ ನಮ್ಮ ದೇಶದಲ್ಲಿ ಕಾಲಕಸವಾಗಿಬಿಟ್ಟಿದೆ. ಇದಕ್ಕೆ ಎರಡು ಮಜಲುಗಳಿವೆ. ಒಂದು, ನಮ್ಮನ್ನಾಳುವ ನೇತಾರರೂ ಪೋಷಕರೂ ಶಿಕ್ಷಕರೂ ಯುವಜನತೆಯನ್ನು ಸರಿದಾರಿಯತ್ತ ಕೊಂಡೊಯ್ಯುವ, ಜೀವನದ ನಿಜವಾದ ನೀತಿ ಮೌಲ್ಯ ಪಾಠಗಳನ್ನು ಹೇಳಿಕೊಡುವ ಕಾರ್ಯದಲ್ಲಿ ವಿಫಲರಾಗಿರುವುದು. ಮತ್ತೊಂದು, ಸ್ವತಃ ಯುವಕ ಯುವತಿಯರೇ ತಮ್ಮಲ್ಲಿನ ಅಗಾಧ ಕಲಿಕೆಯ, ಅರಿವಿನ ಪ್ರಜ್ಞೆಯಿಲ್ಲದೇ, ತಮ್ಮ ಸಾಮರ್ಥ್ಯದ ಸ್ಪಷ್ಟ ಚಿತ್ರಣವಿಟ್ಟುಕೊಳ್ಳದೇ ಅಬ್ಬೇಪಾರಿಗಳಾಗಿ ಹೋಗಿರುವುದು.

ಯುವಜನತೆ ಆ ರಾಷ್ಟ್ರದ ಬೆಳಕು, ನಂದಾದೀಪ. ಅದು ಸದಾ ಉಜ್ವಲವಾಗಿ ಬೆಳಗುತ್ತಿರುವಂತೆ ನೋಡಿಕೊಳ್ಳುವ ಜವಾಬ್ದಾರಿ ಎಲ್ಲರದು. ಮುದುಕರು ಪಥಭ್ರಷ್ಟರಾದರೆ ವರ್ತಮಾನವಷ್ಟೇ ಹದಗೆಡುತ್ತದೆ. ಯುವಕರು ನೀತಿಭ್ರಷ್ಟರಾದರೆ ಭವಿಷ್ಯವೇ ನಾಶಗೊಂಡು, ಕತ್ತಲೆಯ ಸಾಮ್ರಾಜ್ಯ ಸ್ಥಾಪಿತವಾಗುತ್ತದೆ. ಯುವಜನತೆ ಸಂಕಲ್ಪ ಮಾಡಿದರೆ ತಾವೂ, ತಮ್ಮ ಮುಂದಣ ಪೀಳಿಗೆಗಳೂ ಆದರ್ಶರಾಗಬಹುದು; ಸುಂದರ, ಸಹಬಾಳ್ವೆಯ ವಿಚಾರವಂತ ಸಮಾಜ ನಿರ್ಮಿಸಬಹುದು.

ಯುವಜನತೆ ಹಾಗೂ ವೈಚಾರಿಕತೆ ಒಂದು ಸಮಾಜದ ಎರಡು ಕಣ್ಣುಗಳಿದ್ದಂತೆ. ಎರಡೂ ಅತಿ ಮುಖ್ಯ. ಸಾಮಾನ್ಯವಾಗಿ ಹರೆಯದಲ್ಲಿ ಲೋಕಜ್ಞಾನದ ಸೆಳೆಮಿಂಚು ವ್ಯಕ್ತಿತ್ವವನ್ನಾವರಿಸಿ ವಾದ-ವಾಗ್ವಾದ-ಚರ್ಚೆ-ಸಂವಾದ-ಮಂಥನ ಪ್ರಕ್ರಿಯೆಗಳು ಜರುಗುತ್ತವೆ. ಪ್ರಶ್ನಿಸುವ, ಟೀಕಿಸುವ, ಹೊಸದಾಗಿ ಆಲೋಚಿಸುವ ಗುಣ ಉತ್ಪನ್ನವಾಗುತ್ತವೆ. ಇಂಥ ಸಂದರ್ಭದಲ್ಲಿ, ಯುವಜನತೆಯನ್ನು ವಿಚಾರವಂತರನ್ನಾಗಿ ಬೆಳೆಸುವ ಪೋಷಕಾಂಶಗಳನ್ನು ನೀಡಬೇಕು. ಇಂಥ ಪೋಷಕಾಂಶಗಳೇ ಅವರ ಬದುಕಿನ ರೀತಿಯಾಗಿ, ಚಿಂತನೆಯ ನೀತಿಯಾಗಿ ಕೆಲಸ ಮಾಡುತ್ತವೆ.

ವಿಚಾರ ಮಾಡುವ ಶಕ್ತಿ ಎಲ್ಲರಲ್ಲೂ ಇರುತ್ತದೆ. ಆದರೆ ಅದನ್ನು ನಿರ್ದಿಷ್ಟ ಪಾತಳಿಯಲ್ಲಿ ತರ್ಕಿಸುವ, ಸಿದ್ಧಾಂತಗಳ ಅಡಿಯಲ್ಲಿ ಪರೀಕ್ಷಿಸುವ ಕಾರ್ಯ-ಕಾರಣ ಸಂಬಂಧಗಳನ್ನು ಅನ್ವೇಷಿಸಿ ತುಲನೆ ನಡೆಸುವ ವಿಚಾರವಂತಿಕೆ ಎಲ್ಲರಲ್ಲೂ ಇರದು. ಅಕ್ಷರಸ್ಥರೆಲ್ಲರೂ ವಿದ್ಯಾವಂತರಲ್ಲ; ವಿದ್ಯಾವಂತರೆಲ್ಲರೂ ವಿಚಾರವಂತರಲ್ಲ! ಜಗತ್ತಿನಲ್ಲಿ ವಿಚಾರವಂತರು ತೀರ ಕಡಿಮೆ. ಹೇಗೋ ಬದುಕಿ ದಡ ಸೇರಬೇಕೆಂಬ ಅನುಕೂಲ ಪ್ರವೃತ್ತಿಯೇ ಬಹುತೇಕರಲ್ಲಿ. ವೈಜ್ಞಾನಿಕ ಮನೋಭಾವವಂತೂ ನಮ್ಮಲ್ಲಿ ವಿರಳಾತಿವಿರಳ. ವೈಚಾರಿಕತೆ ಮತ್ತು ವೈಜ್ಞಾನಿಕತೆ ಒಂದೇ ನಾಣ್ಯದ ಎರಡು ಮುಖಗಳು. ಒಂದನ್ನು ಬಿಟ್ಟು ಮತ್ತೊಂದಕ್ಕೆ ಅಸ್ತಿತ್ವವಿಲ್ಲ.

ವಿಚಾರ ಅಥವಾ ಸಂಗತಿಯೊಂದು ಎಲ್ಲ ಕಾಲ-ದೇಶ-ಪರಿಸರಗಳ ಹಂಗಿಲ್ಲದೇ ಪರೀಕ್ಷೆಗೆ ಒಳಪಟ್ಟು ಪ್ರಯೋಗಗಳ ಮೂಲಕ ಸ್ಥಿರಗೊಂಡು ಸಾರ್ವತ್ರಿಕ ಸತ್ಯವೊಂದನ್ನು ಪ್ರತಿಪಾದಿಸುವ ವಿಧಾನವೇ ಇದು. ಇಂಥಲ್ಲಿ ವ್ಯಕ್ತಿಪರತೆ ಅಥವಾ ವ್ಯಕ್ತಿನಿಷ್ಠ ಭಾವ-ಭಾವನೆ-ನಂಬಿಕೆಗಳಿಗೆ ಆಸ್ಪದವಿರದು. ಯಾವುದೇ ಭಾವನೆ-ನಂಬಿಕೆಯನ್ನು ಏಕ್‌ದಮ್ ಒಪ್ಪಿಕೊಳ್ಳದೆ, ತರ್ಕಶಕ್ತಿ ಮತ್ತು ವೈಜ್ಞಾನಿಕ ಮನೋಧರ್ಮಗಳಿಂದ ಪರೀಕ್ಷಿಸಿ ಸಕಲ ಜನಮನಗಳಿಗೆ ಒಳಿತನ್ನು ಹಾರೈಸುವ ರೀತಿಯಲ್ಲಿ ಪುನಾರಚಿಸಿ ನಡೆ-ನುಡಿಯಲ್ಲಿ ಕಂದರವಿರದಂಥ ಬದುಕಿನಲ್ಲಿ ಅಳವಡಿಸಿಕೊಳ್ಳುವ ಸತ್ಯಸಂತೋಷವೇ ವಿಚಾರವಂತಿಕೆ. ಸಮಾಜದ ಎಲ್ಲರೂ ಅದರಲ್ಲೂ ಯುವಜನತೆ ತಮ್ಮ ಬದುಕನ್ನು ವಿಚಾರವಂತಿಕೆಯ ಮೂಲಕ ಕಟ್ಟಿಕೊಳ್ಳಬೇಕು. ಸಂಪ್ರದಾಯ, ಅಂಧಾಚರಣೆ, ಮೂಢನಂಬಿಕೆ, ಅರ್ಥಹೀನವಾದ ವ್ಯರ್ಥ ಕಾರ್ಯಕಲಾಪಗಳನ್ನು ಕೈಬಿಡಬೇಕು. ಜಗತ್ತಿನಲ್ಲಿ ಆಗಿಹೋದ ವಿಚಾರವಂತರ ಜೀವನ ಮತ್ತು ಸಾಧನೆಗಳನ್ನು ಅರಿಯಬೇಕು. ವೈಚಾರಿಕತೆಯ ತತ್ವವನ್ನು ಮಾನವೀಯತೆಯ ನೆಲೆಗಟ್ಟಿನಲ್ಲಿ ಮಿಳಿತಗೊಳಿಸಬೇಕು. ಏಕೆಂದರೆ ಬೆಳಕಿನರಮನೆಗಿರುವ ನೂರಾರು ದಾರಿಗಳೆಲ್ಲ ಕೊನೆಗೆ ಕೊನೆಗೊಳ್ಳುವುದು ಮಾನವತೆಯೆಂಬ ಮಹಾತತ್ವದಲ್ಲಿ. ವೈಚಾರಿಕತೆ ಮತ್ತು ಮಾನವೀಯತೆಗಳ ಸಂಗಮದಲ್ಲಿ ಸಾಕ್ಷಾತ್ಕಾರವಾಗುವ ಹೊಚ್ಚ ಹೊಸತಾದ, ಅಚ್ಚಪ್ರಚ್ಛನ್ನ ಬಯಲ ಬೆಳಕೇ ಸಾರ್ಥಕ ಬದುಕಿನ ಸಲ್ಲಕ್ಷಣ. ಇಂಥ ಬದುಕನ್ನು ಆಯ್ದುಕೊಳ್ಳುವುದು, ಕೊನೆವರೆಗೂ ಸಿದ್ಧಾಂತಕ್ಕೆ ಬದ್ಧವಾಗಿದ್ದು ಬದುಕುವುದು, ವಿಜ್ಞಾನ ಮತ್ತು ವಿಚಾರಗಳೇ ಜಗತ್ತಿನ ಎಲ್ಲ ತತ್ವಾಚರಣೆಗಳ ಸಮೂಲ ಮಾನದಂಡವೆಂಬ ತಿಳಿವಳಿಕೆಯಲ್ಲಿ ಸೌಖ್ಯ ಹೊಂದುವುದು - ನಮ್ಮ ಈ ಹೊತ್ತಿನ ಯುವಜನತೆ ಕೈಗೊಳ್ಳಬೇಕಾದ ಜರೂರು ಕಾರ್ಯ.

ಸಮಾಜದ ಹೊಸ ನೀರು ಯುವಜನತೆ. ಹಳೆಯ ನೀರು ಹೊತ್ತು ತರುವ ಕಸಕಶ್ಮಲಗಳನ್ನು ಶೋಧಿಸಿ, ಸದ್ಬಳಕೆ ಮಾಡಿಕೊಳ್ಳಬೇಕಾದ ಕರ್ತವ್ಯ ಕೂಡ ಯುವಕ-ಯುವತಿಯರ ಹೆಗಲ ಮೇಲಿದೆ. ನಮ್ಮ ತಾತ ಮುತ್ತಾತಂದದಿರ ಹಳೆಯ, ಬಣ್ಣಗೆಟ್ಟ, ಕಾಂತಿಹೀನ ಚಿನ್ನಾಭರಣಗಳನ್ನು ಹೊಳೆಗೆಸೆಯುವುದೇ ? ಅವನ್ನು ಸಂಗ್ರಹಿಸಿ, ಕರಗಿಸಿ, ನಮಗೆ ಸರಿಯೆನಿಸಿದ, ಬೇಕಾದ ಆಕಾರದಲ್ಲಿ ಹೊಸ ಆಭರಣಗಳನ್ನು ಪಡೆಯುವ ಹಕ್ಕು ಮತ್ತು ಅವಕಾಶಗಳೆರಡೂ ನಮಗಿದೆ. ಏಕೆಂದರೆ ಮುಂದಕ್ಕೆ ಹೆಜ್ಜೆಯಿಡುವುದೆಲ್ಲಾ ಪ್ರಗತಿಯಲ್ಲ ಮತ್ತು ಒಳ್ಳೆಯದಾಗುತ್ತದೆಂಬ ನಂಬಿಕೆಯೂ ಸಲ್ಲ. ವಿಜ್ಞಾನದ ನೆಲಗಟ್ಟಿನ ಮೇಲೆ ವೈಚಾರಿಕತೆಯ ಬೆಳಕಿನಲ್ಲಿ ಮಾನವತೆಯೆಂಬ ಸುಂದರ ಸೌಧವನ್ನು ನಿರ್ಮಿಸಲು ಯತ್ನಿಸುವ ಎಲ್ಲ ಯುವಜನತೆ ಈ ಅಂಶವನ್ನು ನೆನಪಿಡಬೇಕು. ವಯಸ್ಸಾದವರಿಗೆ ಗೌರವ ಕೊಡುವುದು ನಮ್ಮ ಭಾರತೀಯ ಸಂಸ್ಕೃತಿಯ ಸಜ್ಜನಿಕೆಯ ಹೆಗ್ಗುರುತು. ಆದರೆ ವಿಚಾರಹೀನರಾದ, ಮಾನವತೆ ಮತ್ತು ವೈಚಾರಿಕತೆಗಳೆರಡನ್ನೂ ಗಾಳಿಗೆ ತೂರಿ ಬದುಕುತ್ತಿರುವ ನಿಷ್ಪ್ರಯೋಜಕ 'ಹಿರಿಯ'ರಿಗೆಲ್ಲ ವಯಸ್ಸಾಗಿದೆ ಎಂಬ ಕಾರಣಕ್ಕೇ ಗೌರವ ನೀಡುವುದು ಎಷ್ಟು ಸರಿ !? ಇಂಥವರಿಂದಲೇ ಅಲ್ಲವೇ ಈ ಸಮಾಜದ ಎಲ್ಲ ಅರ್ಥಹೀನ ಕಂದಾಚಾರಗಳು, ಅವೈಜ್ಞಾನಿಕ ಪದ್ಧತಿ ಆಚರಣೆಗಳು ಜೀವಂತವಾಗಿರುವುದು ! ಇವರು ವಿಚಾರವಂತರಾಗಿದ್ದರೆ ನಾವೇಕೆ



ಹೊಸ ಸಮಾಜವನ್ನು ಕಟ್ಟಲು ಹೊರಡುತ್ತಿದ್ದೆವು ? ಇಂಥ 'ಹಿರಿಯ'ರನ್ನೆಲ್ಲ ಬದಿಗೊತ್ತಿ ಯುವಜನತೆ ನಿರಂಕುಶಮತಿತ್ವದಿಂದ ಚಿಂತಿಸಬೇಕು. ತಾವು ನಡೆವ ದಾರಿಯನ್ನು ತಾವೇ ಕಂಡುಕೊಳ್ಳಬೇಕು. ಅಪ್ಪ ನೆಟ್ಟ ಆಲಕ್ಕೆ ನೇಣು ಹಾಕಿಕೊಳ್ಳುವುದನ್ನು ವಿಚಾರವಾದವೆಂದು ಒಪ್ಪಲಾದೀತೇ ?

'ದೇವರ ಹೆಸರಿನಲ್ಲಿ ಮೂಢನಂಬಿಕೆಗಳನ್ನು ಶ್ರದ್ಧೆಯಿಂದ ಆಚರಿಸುವ ಆಸ್ತಿಕನಿಗಿಂತ, ದೇವರ ವಿಚಾರವನ್ನೇ ಮರೆತು, ಸಾಕ್ರಟೀಸನಂತೆ ಎಲ್ಲ ವ್ಯವಸ್ಥೆಗಳನ್ನು ಪ್ರಶ್ನಿಸುವ, ಸ್ವಕರ್ತವ್ಯ ನಿರತನಾಗಿರುವ ವಿಚಾರವಂತ ನಾಸ್ತಿಕನೇ ಮೇಲೆ'ಂಬುದು ಕುವೆಂಪು ಅಭಿಮತ. ಹೇಳುತ್ತಾರವರು : 'ಹಳೆಮತದ ಕೊಳೆಯೆಲ್ಲ ಹೊಸಮತಿಯ ಹೊಳೆಯಲ್ಲಿ ಕೊಚ್ಚಿಹೋಗಲಿ.... ಬರಲಿ ವಿಜ್ಞಾನ ಬುದ್ಧಿ.'

ದೇವರು-ಧರ್ಮ-ಅಧ್ಯಾತ್ಮಗಳೆಲ್ಲ ಇಂದು ಮಲಿನಗೊಂಡಿವೆ. ಜ್ಯೋತಿಷ್ಯ-ಪವಾಡ-ಅವತಾರಗಳೆಲ್ಲ ಕಿಲುಬು ಹಿಡಿದು ಕೂತಿವೆ. ಜಾತಿ-ಮತ-ಸ್ವಜನ ಪಕ್ಷಪಾತಗಳಿಂದ ದೇಶಗಳು ಛಿದ್ರಛಿದ್ರವಾಗಿವೆ. ಇವಾವುವೂ ಲೋಕಸತ್ಯವನ್ನು ತಿಳಿಸಿಕೊಡಲಾರವು. ಇವೆಲ್ಲ ಸಂಕುಚಿತ ದೃಷ್ಟಿಯ ಸುಳ್ಳು ಸೃಷ್ಟಿಗಳು. ಆದಿಮಾನವನ ಭಯವೇ ಭಕ್ತಿಯಾಗಿ ಮಾರ್ಪಟ್ಟು ಇಂದು ದೈವವಿಶ್ವಾಸ, ಅಧ್ಯಾತ್ಮಸಿದ್ಧಿಗಳೆಂಬ ಮೂಢನಂಬಿಕೆಗಳು ವಿಶ್ವಾಸಹೀನನ, ಹೇಡಿಯ, ಸೋಮಾರಿಯ, ನಯವಂಚಕ ಮೋಸಗಾರನ ಹತಾರಗಳಾಗಿಬಿಟ್ಟಿವೆ. ಗಾಂಧೀಜಿಯ ಧ್ಯಾನಸಿದ್ಧಾಂತ, ಪರಮಹಂಸರು ಕಾಳಿಯನ್ನು ಕನವರಿಸಿದ್ದು, ಶಂಕರಾಚಾರ್ಯರ ಪರಕಾಯ ಪ್ರವೇಶ - ಪೂರ್ವಜನ್ಮ, ಪುನರ್ಜನ್ಮ ತತ್ವಗಳೆಲ್ಲಾ ವಿಚಾರವಾದದ ಅಡಿಯಲ್ಲಿ ನಗೆಪಾಟಲಿಗೀಡಾಗುತ್ತವೆ. ವಿಶ್ವದ ನಿಗೂಢತೆ, ಪ್ರಕೃತಿಯ ಭೀಕರತೆ ಮತ್ತು ಮನುಷ್ಯ ಜೀವನದ ವಿಚಿತ್ರತೆಗಳಿಗೆಲ್ಲ ಯಾವುದೋ ಅದೃಶ್ಯ ಶಕ್ತಿಯ ಹಣೆಪಟ್ಟಿ ಹಚ್ಚಿ, ರಾಹುಕಾಲವೆಂಬ ಭೂತವನ್ನು - ವಾಸ್ತುವೆಂಬ ಬೆದರುಬೊಂಬೆಯನ್ನು ಸೃಷ್ಟಿಸಿ, ಸರಾಗವಾಗಿ ನಡೆಯಬೇಕಾದ ಬದುಕನ್ನು ಹಲವು ಕಟ್ಟುಪಾಡುಗಳಿಂದ ಬಂಧಿಸಿಕೊಂಡು ನಾವು ಬಾಳ್ವೆಯನ್ನು ನರಕ ಮಾಡಿಕೊಂಡಿದ್ದೇವೆ. ಇವಕ್ಕೆಲ್ಲ ಬಿಡುಗಡೆಯೆಂದರೆ, ಶುದ್ಧ ವಿಚಾರವಾದ. ಲೋಕ ಚಾರುವಾಕನ ಚತುರ ನಿಲುವು, ಬುದ್ಧನ ವಿಚಾರವಂತಿಕೆ, ಸಾಕ್ರಟೀಸನ ಪ್ರಶ್ನಾ ಮನೋಭಾವ, ವಿವೇಕಾನಂದರ ಧೀರ ಗಂಭೀರ ಸ್ಥೈರ್ಯ ನಮ್ಮ ಯುವಜನತೆಗಿರುವ ಐಕ್ಯಕ ಆದರ್ಶ.

ಹಿಂದಿನವರು ಹೇಳಿದರೆಂದು ನಂಬದೆ, ಪ್ರತ್ಯಕ್ಷ ನೋಡಿ, ಪ್ರಮಾಣಿಸಿ, ವಿಶ್ವದ ಸಾರ್ವತ್ರಿಕ ಸತ್ಯಗಳ ಸ್ವಭಾವವನ್ನು ಅವು ಇರುವಂತೆಯೇ ಒಪ್ಪಿಕೊಳ್ಳುವ, ಯಾರದೋ ಅನುಭವವನ್ನೂ ಕನವರಿಕೆಯನ್ನೂ ಭ್ರಮಾಧೀನ ಬಡಬಡಿಕೆಗಳನ್ನೂ ನಮ್ಮ ಯುವ ಜನತೆ ನಂಬದೆ, ತಮ್ಮ ವೈಯಕ್ತಿಕ ಜೀವನ ಪಾತಳಿಯಲ್ಲಿ, ವಿಚಾರವಂತಿಕೆಯ ಮೂಸೆಯಲ್ಲಿಟ್ಟು ಪರೀಕ್ಷಿಸಬೇಕು. ಎಲ್ಲ ಅವೈಜ್ಞಾನಿಕ, ಅವೈಚಾರಿಕ ಸಂಗತಿ, ಸಿದ್ಧಾಂತಗಳನ್ನು ದೂರ, ಬಹುದೂರ ಅಟ್ಟಬೇಕು. ನವಸಮಾಜದ ಕ್ರಾಂತಿ ಶಿಶುಗಳಾಗಿ ವಿಜೃಂಭಿಸಬೇಕು ನಮ್ಮ ಈಗಿನ ಯುವಜನತೆ.

ಬೆಟ್ಟ ಕುಟ್ಟಿ ಪುಡಿ ಮಾಡಬಲ್ಲ, ಸಾಗರದ ಧೀಮಂತ ದಿಕ್ಕನ್ನೆ ಬದಲಾಯಿಸಬಲ್ಲ ಶಕ್ತಿ ನಮ್ಮ ಯುವಜನತೆಗಿದೆ. ಅಪವ್ಯಯಗೊಳ್ಳುತ್ತಿರುವ ಯುವಶಕ್ತಿ ಸದುಪಯೋಗಗೊಳ್ಳಲು ಇರುವ ಒಂದೇ ಅವಕಾಶ - ನಾವೆಲ್ಲ ವಿಚಾರವಂತರಾಗುವುದು. ಯುವಶಕ್ತಿ ಚಿರಾಯುವಾಗಲಿ; ವಿಚಾರಕ್ರಾಂತಿ ಉದ್ಬೋಧಗೊಳ್ಳಲಿ.

ತತ್ವಾನ್ವೇಷಕ ಕವಿ ಕುವೆಂಪು ಮಾತಿನಿಂದ ಮುಕ್ತಾಯ ಹೇಳುವುದಾದರೆ,

''ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?
ಎಂದೋ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು !
ನಿನ್ನೆದೆಯ ದನಿಯೆ ಋಷಿ !
ಮನು ನಿನಗೆ ನೀನು !''

**ಡಾ|| ಎಚ್. ಎನ್. ಮಂಜುರಾಜ್**
ಕನ್ನಡ ಅಧ್ಯಾಪಕ, ಸರ್ಕಾರಿ ಪದವಿ ಕಾಲೇಜು
ಕೃಷ್ಣರಾಜನಗರ

# ಬಡತನದ ಸಾಗರದಲ್ಲಿ ಸುಗ್ಗಿಯ ಸಮಸ್ಯೆ

'ಎರಡೇ ದಿನದ ಕೂಸನ್ನ ಮಾರ್ಯಾರ್ರಿ. ಹೊಟ್ಟಿಗ ತಿನ್ನಾಕ ಏನಿಲ್ಲ ಅಂತ ಕೂಸನ್ನೇ ಮಾರ್ಬಿಟ್ಟಾರ. ಒಂದು ಕೂಸಿಗಿ ಐನೂರಿಂದ ದೋ ಹಜಾರ್‌ತನಕ ರೊಕ್ಕ ಬಂದದ. ಬಂದದ್ದಷ್ಟೇ ಆಯ್ತು. ಇವತ್ತು ಹೋದ್ರ ಅವರ ಮನೀನಲ್ಲಿ ತಿನ್ನಾಕ ಶೇಂಗಾ ಸುದಾ ಇಲ್ಲ. ರೊಕ್ಕ ಇದ್ರೂನು, ಕೂಸಿಲ್ಲದ ಕರುಳು ಉಣ್ಣತಾದೇನ್ರೀ ?'

ಚಿಂಚೋಳಿ ತಾಲೂಕಿನ ಕೊಂಚಾವರಂ ಲಂಬಾಣಿ ತಾಂಡಾಗಳಲ್ಲಿ 'ಹಸಿವಿನ' ಸಮಸ್ಯೆ ಬಗೆಹರಿಸಿಕೊಳ್ಳಲು 'ಕರುಳ ಕುಡಿ'ಗಳನ್ನು ಮಾರಾಟ ಮಾಡಿದ ಇತ್ತೀಚಿನ ಪ್ರಸಂಗ ಚರ್ಚೆಯಾಗುತ್ತಿತ್ತು. 'ಹಸಿವೆ'ಯ ಸಮಸ್ಯೆ ಹೆಣ್ಣು ಮಕ್ಕಳನ್ನು ಮಾತ್ರ ಬಲಿ ತೆಗೆದುಕೊಂಡ ಮತ್ತೊಂದು ಆಯಾಮವೂ ಇಲ್ಲಿ ಸ್ಪಷ್ಟವಾಗಿತ್ತು.

ಮತ್ತೊಂದು ಪ್ರಸಂಗ ರಾಜಸ್ತಾನದ ಹಳ್ಳಿಯೊಂದರದು.

ದುಡಿಯಲು ಕೆಲಸವಿಲ್ಲದ, ತಿನ್ನಲು ಆಹಾರವಿಲ್ಲದ ಬಡ ಕಾರ್ಮಿಕನೊಬ್ಬ ಹಲವು ದಿನಗಳಿಂದ ಹಸಿದು ಕಂಗಾಲಾಗಿದ್ದ. ಮನೆಯಲ್ಲಿ ತಡಕಾಡಿದರೂ ಒಂದಗುಳೂ ಅನ್ನ ಸಿಗುವುದಿಲ್ಲ ಎಂಬ ಸತ್ಯ ಗೊತ್ತಿತ್ತು. ಆದರೂ ಹೊಟ್ಟೆಯ ಕುದಿತ ತಾಳಲಾರದೆ ಹಿಟ್ಟು ಕೇಳಿದ. ಹಸಿವಿನಿಂದ ಕಂಗಾಲಾಗಿದ್ದ ಹೆಂಡತಿ ಖಾಲಿ ಪಾತ್ರೆ ಕುಕ್ಕಿದಳು. ಗಂಡನ ಸಿಟ್ಟು ನೆತ್ತಿಗೇರಿತು. ಹೆಂಡತಿಯ ಜುಟ್ಟು ಹಿಡಿಯುವ ಮೊದಲೇ ಅವಳು ಗುಡಿಸಲಿನಿಂದ ಹೊರಕ್ಕೆ ಓಡಿದಳು. ಮತ್ತಷ್ಟು ಕೆರಳಿದ ಗಂಡ ಮೂಲೆಯಲ್ಲಿ ಮಲಗಿದ್ದ ಪುಟ್ಟ ಕಂದನನ್ನೇ ಹಿಡಿದೆತ್ತಿ ನೆಲಕ್ಕೆ ಅಪ್ಪಳಿಸಿದ. ಅಪ್ಪ-ಅಮ್ಮನ ಹಸಿವು ನೀಗಿಸಲಾಗದಿದ್ದ ಮಗು ಉಸಿರುಬಿಟ್ಟಿತು.

ರಾಜಸ್ತಾನದಲ್ಲಿ ಈ ವರ್ಷ ಬಂಪರ್ ಬೆಳೆ ಬಂದಿದ್ದು, ದಾಖಲೆಯೇ ನಿರ್ಮಾಣ ವಾಗಿದೆ ಎನ್ನುತ್ತದೆ ಪತ್ರಿಕಾ ವರದಿ.

ಕಳೆದ ಮೇನಿಂದ ಇಲ್ಲಿನವರೆಗೆ ಮಹಾರಾಷ್ಟ್ರದ ಆದಿವಾಸಿ ಪ್ರದೇಶಗಳಲ್ಲಿ ಎಂಟು ಸಾವಿರ ಮಕ್ಕಳು 'ಹಸಿವೆ'ಗೆ ಬಲಿಯಾಗಿದ್ದಾರೆ.

ಏನಾಗಿದೆ ಈ ದೇಶಕ್ಕೆ ?

ಲಕ್ಷಾಂತರ ಟನ್ ಆಹಾರ ಧಾನ್ಯದ ದಾಸ್ತಾನಿದ್ದರೂ ದೇಶದ ಮೂಲೆಮೂಲೆಗಳಲ್ಲಿ ಜನರು ಊಟಕ್ಕಾಗಿ ತಹತಹಿಸುತ್ತಿದ್ದಾರೆ. ಹಸಿವು ತಾಳಲಾರದೆ ಸಾವಿರಾರು ಹೆಂಗಸರು ಆತ್ಮಹತ್ಯೆಯ ದಾರಿ ಹಿಡಿದಿದ್ದಾರೆ. ತಮ್ಮೊಂದಿಗೆ ಮಕ್ಕಳ ಹಸಿವಿಗೂ 'ಸಾವಿನ' ಪರಿಹಾರ ಕೊಡುತ್ತಿದ್ದಾರೆ. ಇನ್ನೂ ಕೆಲವರು 'ಹೆಣ್ಣು ಮಕ್ಕಳನ್ನು' ಮಾರಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ.

ಪ್ರಪಂಚದ ಅತಿ ದೊಡ್ಡ ಹಾಗೂ ಯಶಸ್ವಿ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲೊಂದು ಎಂಬ ಹೆಗ್ಗಳಿಕೆಯ ಭಾರತಕ್ಕೆ ವರ್ಣಮಯ ಪ್ರಾಚೀನ ತುರಾಯಿಗಳಿವೆ. ಸೂಡಾನ್, ನಮೀಬಿಯಾ ದೇಶಗಳು ಕ್ಷಾಮದಲ್ಲಿ ವಿಲವಿಲನೆ ಒದ್ದಾಡಿದಾಗ ನೆರವಿನ ಹಸ್ತ ಚಾಚಿದ ಹೆಗ್ಗಳಿಕೆ ಇದೆ. ಅಮೆರಿಕದ ಕ್ರೌರ್ಯಕ್ಕೆ ಬಲಿಯಾದ ಕ್ಯೂಬಾಗೆ ಹಡಗು ತುಂಬ ಗೋಧಿ ಕಳುಹಿಸಿ ಆ ಜನರ ವಿಶ್ವಾಸ ಗಳಿಸಿದ ಹಿರಿಮೆ ಇದೆ. ''ನನ್ನ ದೇಶಕ್ಕೆ ಆ ಗತಿ ಎಂದಿಗೂ ಬರದಿರಲಿ. ಕೈ ಎತ್ತಿ ಕೊಡುವುದೇ ನಮ್ಮ ಧರ್ಮವಾಗಿರಲಿ'' ಎಂದು ಹಲವು ಕನಸುಗಾರರು ನೆಟ್ಟ ಹಸಿರು ಕ್ರಾಂತಿ, ಎಣ್ಣೆ ಬೀಜ ಕ್ರಾಂತಿ, ಹಾಲಿನ ಕ್ರಾಂತಿಗಳೆಲ್ಲ ಇಂದು ಸಮೃದ್ಧ ಫಲ ನೀಡುತ್ತಿವೆ.

ಆದರೇನು, ಖಜಾನೆ ಭರ್ತಿ; ಜನರೆಲ್ಲ ತಿರುಕರು, ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ.

ಒರಿಸ್ಸಾದ ಚಂಡಮಾರುತ, ಗುಜರಾತ್‌ನ ಭೂಕಂಪ, ತೆಹಲ್ಕಾ ಡಾಟ್ ಕಾಂ ಬಹಿರಂಗಪಡಿಸಿದ ರಕ್ಷಣಾ ಇಲಾಖೆಯ ಅವ್ಯವಹಾರ, ಚುನಾವಣೆಯ ರಾಜಕೀಯಗಳೆ ಬದುಕಿನ ಬಹುಮುಖ್ಯ ವಿಷಯಗಳೆಂಬಂತೆ ಮುಂದೆ ಮಾಡಿರುವ ನಮ್ಮ ಆಡಳಿತ ವ್ಯವಸ್ಥೆ, ರೈತರ ಆತ್ಮಹತ್ಯೆ, ಮಕ್ಕಳ ಮಾರಾಟ ಪ್ರಕರಣ, ಹಸಿವಿನಿಂದ ಆತ್ಮಹತ್ಯೆ - ಕೊಲೆ ಪ್ರಕರಣಗಳ ಬಗ್ಗೆ ಮೂಕವಾಗಿರುವುದನ್ನು ನೋಡಿದರೆ ನಮ್ಮನ್ನು ಆಳುವವರಿಗೊಂದು ಮನಸ್ಸಿದೆಯೇ ಎಂಬ ಅನುಮಾನ ಬರುತ್ತದೆ.

ಬದಲಾದ ವಿಶ್ವದ ರಾಜಕೀಯ ಪರಿಸ್ಥಿತಿಯಲ್ಲಿ ವಿಶ್ವಬ್ಯಾಂಕ್, ಅಂತರ್‌ರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ಮಾರುಕಟ್ಟೆ ಸಂಸ್ಥೆಗಳ ಬಾಲ ಹಿಡಿದು ಹೊರಟಿರುವ ಭಾರತ ತನ್ನ ಮನೆಯಂಗಳದಲ್ಲಿ ನಡೆಯುತ್ತಿರುವ ಬಡತನದ ತಾಂಡವ ನೃತ್ಯಕ್ಕೆ ಕಣ್ಣು ಮುಚ್ಚಿದೆ. ಖಾಸಗೀಕರಣ, ಉದಾರೀಕರಣ ಹಾಗೂ ಜಾಗತೀಕರಣದ ಮಂತ್ರಘೋಷದ ಮಧ್ಯೆ ಸತ್ತ ಬಡಜನರ ಗೋರಿಗಳ ಮೇಲೆ ಉಳ್ಳವರ ಮಹಲು ಕಟ್ಟುವುದನ್ನಷ್ಟೇ ನೋಡುತ್ತಿದೆ.

ಭಾರತದ ಇಂದಿನ ಸಮಸ್ಯೆ ಆಹಾರದ ಕೊರತೆಯದಲ್ಲ. ಬದಲಿಗೆ ಹೆಚ್ಚುವರಿಯ ಸಮಸ್ಯೆ. ಇಡೀ ದೇಶದಲ್ಲಿ ರೈತರು ಹೊಲ-ಗದ್ದೆಗಳ ತುಂಬ ಬೇಕಾದಷ್ಟು ಬೆಳೆ ತೆಗೆದುಕೊಟ್ಟಿದ್ದಾರೆ. ಸರ್ಕಾರದ ಎಲ್ಲ ಗೋದಾಮುಗಳನ್ನು ತುಂಬಿಸಿ ದೇಶಕ್ಕೆ ಸುಗ್ಗಿಯ ಸಗ್ಗ ಕೊಟ್ಟಿದ್ದಾರೆ. ಆದರೆ ಈ ದಾಸ್ತಾನಿನ ಮೇಲೆ ಅಧಿಕಾರದ ಮೆತ್ತೆ ಹಾಸಿ ಕುಳಿತ ಸರ್ಕಾರ ಆಹಾರ ಧಾನ್ಯ ವಿತರಣೆಯ ಪಡಿತರ ವ್ಯವಸ್ಥೆಯನ್ನು ನಾಶಮಾಡಿ ತನ್ನ ಜನರನ್ನು ಹಸಿವಿನ ಕೂಪಕ್ಕೆ ತಳ್ಳಿದೆ.

ಅಧಿಕೃತ ವರದಿಗಳ ಪ್ರಕಾರ ಭಾರತೀಯ ಆಹಾರ ನಿಗಮದ ದಾಸ್ತಾನು ಮಳಿಗೆಗಳಲ್ಲಿ ೪೫೦ ಲಕ್ಷ ಟನ್ ಆಹಾರಧಾನ್ಯ ದಾಸ್ತಾನಿದೆ. (ಕಾಪು ದಾಸ್ತಾನಿನ ಅವಶ್ಯಕತೆಯನ್ನು ೧೭೦ ಲಕ್ಷ ಟನ್‌ಗೆ ನಿಗದಿಪಡಿಸಲಾಗಿದೆ.) ಈ ದಾಸ್ತಾನಿನಲ್ಲಿ ಶೇ. ೫೦ ಭಾಗ ೩ ವರ್ಷಗಳಿಂದ ಮಾಡಿದ ಸಂಗ್ರಹಣೆ. ಶೇ. ೩೦ ಭಾಗ ಕಳೆದ ನಾಲ್ಕು ವರ್ಷಗಳಿಂದ ಮಾಡಿದ ಸಂಗ್ರಹಣೆ. ಅಂದರೆ ಕಳೆದ ಐದು ವರ್ಷಗಳಿಂದ ದೇಶದ ಆಹಾರ ಧಾನ್ಯ ಉತ್ಪಾದನೆ ಏರುಮುಖದಲ್ಲಿದೆ. ಆದರೆ ವಿಪರ್ಯಾಸವೆಂದರೆ, ಈ ದಾಸ್ತಾನನ್ನು ಹಸಿದವರಿಗೆ ತಲುಪಿಸುತ್ತಿದ್ದ ಪಡಿತರ ವ್ಯವಸ್ಥೆಗೆ ಸಹಾಯಧನವಿಲ್ಲದೆ ಹಂತಹಂತವಾಗಿ ಕೊಂದು ಹಾಕಲಾಗಿದೆ. ದಾಸ್ತಾನಾದ ಆಹಾರ ಧಾನ್ಯದ ಸೂಕ್ತ ಸಂರಕ್ಷಣೆಗೆ ಅಗತ್ಯ ವ್ಯವಸ್ಥೆ ಇಲ್ಲದೆ ಸಾವಿರಾರು ಟನ್ ಆಹಾರ ಬೂಸ್ಟು ಹಿಡಿಯುತ್ತಿದೆ. ನೂರಾರು ಟನ್ ಆಹಾರ ಇಲಿಗಳ ಪಾಲಾಗಿದೆ.

'ಬಡತನದ ಸಾಗರದಲ್ಲಿ ಸುಗ್ಗಿಯೇ ಒಂದು ಅಪರಾಧ' ಎನ್ನುವಂತಹ ಈ ಪರಿಸ್ಥಿತಿಯಲ್ಲಿ ದೇಶದ ಜನಸಂಖ್ಯೆಯ ಶೇ. ೨೫ ಭಾಗ ಪೌಷ್ಟಿಕ ಆಹಾರ ಇಲ್ಲದೆ ನರಳುತ್ತಿರುವ ವಾಸ್ತವ ನಮ್ಮನ್ನು ಅಣಕಿಸುತ್ತಿದೆ. ಸ್ವಾತಂತ್ರ್ಯಾನಂತರದಲ್ಲಿ ಐದು ವರ್ಷಕ್ಕಿಂತ ಕಡಿಮೆ ವಯಸ್ಸಿನ ೧೦ ಕೋಟಿಗೂ ಹೆಚ್ಚು ಮಕ್ಕಳು ಮೂಲಭೂತ ಸೌಕರ್ಯಗಳ ಕೊರತೆಯಿಂದ ಸಾವನ್ನಪ್ಪಿರುವ ದಾಖಲೆಗಳು ನಮ್ಮ ಪ್ರಜ್ಞೆಯನ್ನು ಕಾಡುತ್ತಿವೆ.

ಈಗ ಭಾರತದ ಮುಂದಿರುವ ಎರಡು ಮುಖ್ಯ ಸವಾಲುಗಳು:

ಒಂದು - ಹೆಚ್ಚುವರಿ ಉತ್ಪಾದನೆಯನ್ನು ನಿಯಂತ್ರಿಸುವುದು. ಎರಡು - ಈಗಿನ ಉತ್ಪಾದನೆಯನ್ನು ಸಮರ್ಪಕವಾಗಿ ವಿತರಿಸುವುದು.

ಎರಡನೆಯ ಸವಾಲು ತಕ್ಷಣದ ಪರಿಹಾರವನ್ನು ಬಯಸುತ್ತದೆ. ಯೋಜನಾ ಆಯೋಗ ಮತ್ತು ಆಹಾರ ಧಾನ್ಯ ನೀತಿ ನಿರೂಪಣಾ ಸಮಿತಿಗಳು ಈ ಸವಾಲಿಗೆ ಪರಿಹಾರವಾಗಿ

ಸತ್ಯಾ ಎಸ್.

ಸೂಚಿಸಿರುವುದು 'ಪಡಿತರ ವ್ಯವಸ್ಥೆಯ ಬಲಪಡಿಸುವಿಕೆ'ಯನ್ನು. ಬಡಜನರಿಗೆ, ಸೀಮಿತ ಕೊಳ್ಳುವ ಶಕ್ತಿ ಇರುವವರಿಗೆ ಪಡಿತರ ವಿತರಣೆ ವ್ಯವಸ್ಥೆಯು ಹೇಗೆ ಜೀವದಾಯಿನಿಯೋ ಹಾಗೆಯೇ ಹೆಚ್ಚುವರಿ ಆಹಾರದ ಸೂಕ್ತ ವಿತರಣೆಗೆ ಪಡಿತರ ವ್ಯವಸ್ಥೆಯೇ ದೀರ್ಘಾವಧಿ ಪರಿಹಾರ ಎನ್ನುತ್ತಾರೆ ಈ ಸಮಿತಿಗಳ ಹಿರಿಯ ತಜ್ಞರು.

ಆದರೆ - ವಿಶ್ವಬ್ಯಾಂಕ್ ಮತ್ತು ವಿಶ್ವ ಮಾರುಕಟ್ಟೆ ಸಂಸ್ಥೆಗಳ ನಿಯಮಗಳಿಗೆ ತಲೆಬಾಗಿ ನಿಂತಿರುವ ನಮ್ಮ ಸರ್ಕಾರ ಪಡಿತರ ವ್ಯವಸ್ಥೆಗೆ ನೀಡುತ್ತಿದ್ದ ಸಬ್ಸಿಡಿಯನ್ನು ಹಂತಹಂತವಾಗಿ ತೆಗೆಯುತ್ತಾ ಬಂದು ಇಂದು ಪಡಿತರ ವ್ಯವಸ್ಥೆ ಸಂಪೂರ್ಣವಾಗಿ ಕುಸಿದಿದೆ. ಮಾರುಕಟ್ಟೆ ಬೆಲೆಗಿಂತಲೂ ಕಡಿಮೆ ಬೆಲೆಯಲ್ಲಿ ಜೀವನಾವಶ್ಯಕ ವಸ್ತುಗಳನ್ನು ಮಾರಾಟ ಮಾಡುತ್ತಿದ್ದ ಪಡಿತರ ಅಂಗಡಿಯಲ್ಲಿ ಇಂದು ಯಾವುದಕ್ಕೂ ಬೆಲೆ ಕಡಿಮೆ ಇಲ್ಲ. ಜೊತೆಗೆ ಗುಣಮಟ್ಟ ಮಾರುಕಟ್ಟೆಗಿಂತಲೂ ಕಳಪೆಯಾಗಿದೆ. ಹೆಚ್ಚು ಬೆಲೆ, ಕಳಪೆ ಗುಣಮಟ್ಟದ ಜೊತೆಗೆ ಪೂರೈಸಲು ಕೊರತೆ. ಸಮಸ್ಯೆಯ ಚಕ್ರವನ್ನು ಪೂರ್ಣವಾಗಿಸಿದ ಈ ಮೂರು ಅಂಶಗಳಿಂದಾಗಿ ಜನರು ಇಂದು ಪಡಿತರ ಅಂಗಡಿಗೆ ಹೋಗದಂತಾಗಿದೆ. ಜೊತೆಗೆ ಇದು ಲಕ್ಷಾಂತರ ಜನರನ್ನು ನಿರುದ್ಯೋಗಿಗಳನ್ನಾಗಿಯೂ ಮಾಡಿದೆ. ಪಡಿತರ ಚೀಟಿ ಎನ್ನುವುದು ಈಗಂತೂ ಹಲವು ದಾಖಲೆ ಪತ್ರಗಳ ಮಧ್ಯೆ ಮತ್ತೊಂದು ಗುರುತಿನ ಚೀಟಿ ಮಾತ್ರವಾಗಿದೆ.

ಉಳ್ಳವರ ಮತ್ತು ಇಲ್ಲದವರ ನಡುವಿನ ಕಂದರ ದಿನೇ ದಿನೇ ಹೆಚ್ಚಾಗುತ್ತಿರುವಾಗ, 'ಇಲ್ಲದವರ' ಒಟ್ಟು ಸಂಖ್ಯೆಯೂ ಹೆಚ್ಚಾಗುತ್ತಿರುವಾಗ ಸರ್ಕಾರದ ಹೊಣೆಗಾರಿಕೆಯೂ ಹೆಚ್ಚಬೇಕಿತ್ತು. ಆದರೆ ಹೊಸ ಹೊಣೆಗಾರಿಕೆಯನ್ನು ಸ್ವೀಕರಿಸುವುದಿರಲಿ, ಜಾರಿಯಲ್ಲಿದ್ದ ನೆರವಿನ ಯೋಜನೆಯನ್ನೇ ಶಿಥಿಲಗೊಳಿಸಿ, ಜನರ ಬದುಕುವ ಹಕ್ಕನ್ನು ಸರ್ಕಾರ ಕಸಿದುಕೊಂಡಿದೆ. 'ಪರಿಹಾರ'ವಾಗಬೇಕಿದ್ದ 'ಪರಿಸ್ಥಿತಿ'ಯನ್ನು 'ಸಮಸ್ಯೆ'ಯಾಗಿ 'ಪರಿವರ್ತಿಸಿದೆ.'

ಈ ಮಧ್ಯೆ 'ಇದು ನಿಜವಾದ ಹೆಚ್ಚುವರಿ ಉತ್ಪಾದನೆ ಅಲ್ಲ. ಕೃತಕವಾಗಿ ನಿರ್ಮಿಸಲಾದ ಹೆಚ್ಚುವರಿಯ ಸಮಸ್ಯೆ. ಅಂದರೆ, ಜನರ ಕೊಳ್ಳುವ ಶಕ್ತಿಯನ್ನು ಕಸಿದುಕೊಂಡಿರುವ ಆರ್ಥಿಕ ವ್ಯವಸ್ಥೆಯಿಂದಾಗಿ ಉಳಿದುಹೋಗಿರುವ ದಾಸ್ತಾನು ಇದು' ಎಂಬ ವಾದವನ್ನು ಮುಂದಿಡಲಾಗುತ್ತಿದೆ. ಈ ವಾದ 'ಹೌದು' ಎಂದಾದರೂ ಸದ್ಯದ ಪರಿಸ್ಥಿತಿ ಗಂಭೀರ ಎಂದೇ ಅರ್ಥ. ಈ ನೆಲದಲ್ಲಿ ಬೆಳೆದ 'ಅನ್ನ'ವನ್ನು ಇಲ್ಲಿನ ದುಡಿವ ಜನರೇ ಕೊಂಡು ಉಣ್ಣುವ ಸ್ಥಿತಿಯಲ್ಲಿಲ್ಲ ಎಂದರೆ ಅದು ಆಡಳಿತ ವ್ಯವಸ್ಥೆಯ ವೈಫಲ್ಯವನ್ನು ತೋರಿಸುತ್ತದೆ.

ದಾಸ್ತಾನು ಮಳಿಗೆಗಳಲ್ಲಿ ಕೂಡಿಟ್ಟ ಧಾನ್ಯವನ್ನು ಕೆಡುವ ಮೊದಲೇ ವಿತರಣೆ ಮಾಡಲು ಹಾಗೂ ದೇಶದಲ್ಲಿ ಭುಗಿಲೆದ್ದಿರುವ ಹಸಿವಿನ ಹಾಹಾಕಾರವನ್ನು ಪರಿಹರಿಸಲು ಸದ್ಯಕ್ಕಿರುವ ಏಕೈಕ ಪರಿಹಾರ 'ಕೆಲಸಕ್ಕೆ ಕಾಳು' ಯೋಜನೆಯನ್ನು ಜಾರಿಗೆ ತರುವುದು. ಅಂದರೆ, ದುಡಿಯುವ ಕೈಗಳಿಗೆ ಹಣದ ಬದಲು ಆಹಾರ ಧಾನ್ಯವನ್ನು ನೀಡುವುದು. ದೇಶದ ಪ್ರಜ್ಞಾವಂತರೆಲ್ಲ – ಆರ್ಥಿಕ ತಜ್ಞರು, ಕೃಷಿ ವಿಜ್ಞಾನಿಗಳು, ಸಮಾಜ ವಿಜ್ಞಾನಿಗಳೂ ಸೇರಿದಂತೆ – ಒಕ್ಕೊರಲಿನಿಂದ ಸೂಚಿಸುತ್ತಿರುವುದು ಇದನ್ನೇ. ಮಾನವೀಯತೆಯುಳ್ಳ ಯಾವುದೇ ಆಡಳಿತ ವ್ಯವಸ್ಥೆ ಕೈಗೊಳ್ಳಬಹುದಾದ ಕ್ರಮ ಕೂಲಿಯ ಬದಲು ಕಾಳು ನೀಡುವ ಈ ಯೋಜನೆ. ಹಸಿದ ಹೊಟ್ಟೆಗೆ ಆಹಾರವನ್ನು, ದಾಸ್ತಾನು ಸಮಸ್ಯೆಗೆ ಪರಿಹಾರವನ್ನು ನೀಡುವ ಈ ಯೋಜನೆ ಗ್ರಾಮಾಂತರ ಪ್ರದೇಶಗಳಲ್ಲಿ ನಿರುದ್ಯೋಗ ಸಮಸ್ಯೆಯನ್ನೂ ಸಾಕಷ್ಟುಮಟ್ಟಿಗೆ ಪರಿಹರಿಸಬಲ್ಲದು.

ಆದರೆ, ಆರ್ಥಿಕ ಮೂಲಭೂತವಾದಿಗಳು ಈ ಯೋಜನೆಯನ್ನು ವಿರೋಧಿಸುತ್ತಾರೆ. 'ಆರ್ಥಿಕ ವ್ಯವಸ್ಥೆಯಲ್ಲಿ ಹಣ ಸದಾ ಚಲಾವಣೆಯಲ್ಲಿರಬೇಕು' ಎಂಬ ನೀತಿಯನ್ನು ಕುರುಡಾಗಿ ಪಾಲಿಸುವ ಕೆಲವು ಆರ್ಥಿಕ ತಜ್ಞರು ಈ ರೀತಿ 'ಬಿಟ್ಟಿ ವಿತರಣೆ'ಯು ಜನರ ಆರ್ಥಿಕ ಮಟ್ಟ ಸುಧಾರಿಸುವುದಿಲ್ಲ ಎಂಬ ಕಾರಣ ಮುಂದೊಡ್ಡುತ್ತಿದ್ದಾರೆ. ಈ ರೀತಿ 'ಬಿಟ್ಟಿ' ವಿತರಣೆಯಿಂದ ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳ ಬೆಲೆ ಕುಸಿಯಬಹುದೆಂಬ ಭೀತಿಯನ್ನೂ ವ್ಯಕ್ತಪಡಿಸಲಾಗಿದೆ. ಆದರೆ ಕಾಳಿಗಾಗಿ ಕೆಲಸ ಮಾಡಬೇಕಾದ ಪರಿಸ್ಥಿತಿ ಎದುರಿಸುತ್ತಿರುವ ಜನವರ್ಗ ಮಾರುಕಟ್ಟೆಯ ಬೆಲೆ ನಿಯಂತ್ರಿಸುವುದಿಲ್ಲ ಎಂಬುದು ಈ ತಜ್ಞರಿಗೆ ತಿಳಿಯಬೇಕಿದೆ.

ಇಂತಹುದೇ ತಜ್ಞರ ಮಾತಿಗೆ ತಲೆದೂಗುವ ಸರ್ಕಾರ, ಆಹಾರ ಧಾನ್ಯ ದಾಸ್ತಾನಿನ ಸಂರಕ್ಷಣೆ ವೆಚ್ಚ ಹೆಚ್ಚಾಗುತ್ತಿದೆ ಎಂದು ಬೊಬ್ಬೆ ಹಾಕುತ್ತಿದೆ. ಈ ಸಮಸ್ಯೆಗೆ ಪರಿಹಾರ ಸೂಚಿಸಲೆಂದೇ ಸಂಸದೀಯ ಸಮಿತಿಯೊಂದನ್ನು ರಚಿಸಿ, ಅದರ ಸಲಹೆಯಂತೆ ಸರ್ಕಾರ




ಸಾವಿರಾರು ಟನ್ ಆಹಾರ ಧಾನ್ಯವನ್ನು ಸಮುದ್ರಕ್ಕೆ ಸುರಿದ ದುರಂತಕ್ಕೂ ಭಾರತ ಇಂದು ಸಾಕ್ಷಿಯಾಗಿದೆ. ಹಸಿವಿನ ಆಕ್ರಂದನದ ನಡುವೆ ಸಾವಿರಾರು ಟನ್ ಆಹಾರವನ್ನು ಸಮುದ್ರಕ್ಕೆ ಸುರಿಯುವುದು, ಇಲಿ-ಹೆಗ್ಗಣಗಳಿಗೆ ಆಹಾರವಾಗಿ ಬಿಡುವುದು, ಬೂಸ್ಟ್ ಹಿಡಿಯಲು ಬಿಡುವುದು ಯಾವ ರಾಜಕೀಯ ನೀತಿಯೋ ಅರ್ಥವಾಗುತ್ತಿಲ್ಲ.

ಸರ್ಕಾರದ ಇಂತಹ ಹೃದಯಹೀನ ನಿಲುವನ್ನು ಪ್ರಶ್ನಿಸಿ ನಾಗರಿಕ ಹಕ್ಕುಗಳ ವೇದಿಕೆಯು ಸರ್ವೋಚ್ಚ ನ್ಯಾಯಾಲಯದ ಮೊರೆ ಹೊಕ್ಕಿದೆ. ರಾಜ್ಯ ಸರ್ಕಾರಗಳ ಮೂಲಕ ಬಡಜನರಿಗೆ ಉಚಿತ ಆಹಾರ ಧಾನ್ಯ ಪೂರೈಕೆಗೆ ವ್ಯವಸ್ಥೆ ಮಾಡಬೇಕೆಂದು ಈ ವೇದಿಕೆ ಆಗ್ರಹಪಡಿಸಿದೆ. ದೇಶದ ಬಡಜನರ ಪರಿಸ್ಥಿತಿಗೆ ಸ್ಪಂದಿಸಿರುವ ಸರ್ವೋಚ್ಚ ನ್ಯಾಯಾಲಯ ಹಸಿವಿನಿಂದ ಜನರು ಸಾಯುತ್ತಿರುವುದೇಕೆ ? ದಾಸ್ತಾನಿರುವ ಆಹಾರವನ್ನು ಏಕೆ ವಿತರಿಸುತ್ತಿಲ್ಲ ಎಂಬ ಪ್ರಶ್ನೆಗಳನ್ನಿಟ್ಟು ಕೆಲವು ರಾಜ್ಯ ಸರ್ಕಾರಗಳೂ ಸೇರಿದಂತೆ ಕೇಂದ್ರ ಸರ್ಕಾರಕ್ಕೆ ನೋಟೀಸು ನೀಡಿದೆ.

೧೯೬೨ರ ಬರಗಾಲ ತಡೆ ನಿಯಮದ ಪ್ರಕಾರ ಆರೋಗ್ಯವಂತ ವ್ಯಕ್ತಿಗೆ ಕೆಲಸ ಕೊಟ್ಟು, ಅದಕ್ಕೆ ಪ್ರತಿಯಾಗಿ ಕಾಳು ನೀಡಬೇಕು. ಮಕ್ಕಳು, ವೃದ್ಧರು ಹಾಗೂ ಅಸ್ವಸ್ಥರಿಗೆ ಉಚಿತವಾಗಿ ಆಹಾರ ನೀಡಬೇಕು. ಈ ನಿಯಮವನ್ನೇಕೆ ಜಾರಿಗೆ ತಂದಿಲ್ಲ ಎಂಬ ಪ್ರಶ್ನೆಯನ್ನು ನ್ಯಾಯಾಲಯ ಕೇಳಿದೆ.

ಈ ಮಧ್ಯೆ, ಆಹಾರ ಧಾನ್ಯ ಸಂಗ್ರಹಣೆ ಮತ್ತು ವಿತರಣೆಯ ಜವಾಬ್ದಾರಿಯಿಂದ ಸಂಪೂರ್ಣವಾಗಿ ನುಣುಚಿಕೊಳ್ಳಲು ಯತ್ನಿಸುತ್ತಿರುವ ಸರ್ಕಾರ ಈ ಜವಾಬ್ದಾರಿಯನ್ನು 'ವಿಕೇಂದ್ರೀಕರಣ'ದ ಹೆಸರಿನಲ್ಲಿ ರಾಜ್ಯ ಸರ್ಕಾರಗಳ ಹೆಗಲಿಗೆ ವರ್ಗಾಯಿಸುವ ನಾಟಕ ಆಡಿತು. ಈ ವಿಕೇಂದ್ರೀಕರಣ ವ್ಯವಸ್ಥೆಗೆ ಅಗತ್ಯವಾದ ಇತರೆ ಪೂರಕ ವ್ಯವಸ್ಥೆಗಳಿಲ್ಲದ ಕಾರಣ ಎಲ್ಲ ರಾಜ್ಯ ಸರ್ಕಾರಗಳೂ ಕೇಂದ್ರದ ಪ್ರಸ್ತಾವನೆಯನ್ನು ತಳ್ಳಿಹಾಕಿದವು. ಆದರೂ ಕೇಂದ್ರ ಸರ್ಕಾರ ಧೃತಿಗೆಡಲಿಲ್ಲ. ತನ್ನ ನಿರ್ಧಾರವನ್ನು ಹಿಂಬಾಗಿಲಿನಿಂದ ಜಾರಿಗೆ ತರಲು ಸಜ್ಜಾಗಿದೆ.

೧೯೬೪ರ ಭಾರತೀಯ ಆಹಾರ ನಿಗಮ ಕಾಯಿದೆಗೆ ತಿದ್ದುಪಡಿ ತರಲು ಸುಗ್ರೀವಾಜ್ಞೆಯೊಂದನ್ನು ರೂಪಿಸಿರುವ ಸರ್ಕಾರ ಎಲ್ಲ ಅಧಿಕಾರವನ್ನು ಆಹಾರ ನಿಗಮಕ್ಕೆ ಹಸ್ತಾಂತರಿಸಲಿದೆ. ಈ ತಿದ್ದುಪಡಿ ಜಾರಿಗೆ ಬಂದಲ್ಲಿ ಬೆಂಬಲ ಬೆಲೆ ನಿಗದಿಪಡಿಸುವುದು, ಸಂಗ್ರಹಣೆಯ ಪ್ರಮಾಣ, ದಾಸ್ತಾನಿನ ಪ್ರಮಾಣ ಇತ್ಯಾದಿಗಳನ್ನು ನಿಗದಿಪಡಿಸುವುದೂ ಆಹಾರ ನಿಗಮದ ಮರ್ಜಿಗೆ ಸೇರಿಹೋಗುತ್ತದೆ. ರೈತರ ಪಾಲಿಗಿದ್ದ 'ಬೆಂಬಲ ಬೆಲೆ'ಯ ಆಶಾಕಿರಣವೂ ಇಲ್ಲವಾಗುತ್ತದೆ. ಸರ್ಕಾರ ಆಗಿಂದಾಗ್ಗೆ ಪ್ರಕಟಿಸುವ ಸಬಲೀಕರಣದ ಯೋಜನೆಗಳು ತಿನ್ನಲು ಅನ್ನವೇ ಇಲ್ಲದ ಜನರ ಪಾಲಿಗೆ ಹಾಸ್ಯಾಸ್ಪದ ಯೋಜನೆಗಳಾಗುತ್ತವೆ.

ಸತ್ಯಾ ಎಸ್.
ವಿಕಿತನ್, ೫ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ಲೋಹಿತ್ ನಗರ, ಮಂಗಳೂರು - ೫೭೫ ೦೦೬

# ಗೂಬೆ

ಸುದರ್ಶನ ಚಿತ್ರಕಲಾಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದ. ಚಿತ್ರಕಲೆಯಲ್ಲಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣನಾಗಿದ್ದ. ಅಲ್ಲದೆ ಶ್ರೇಷ್ಠ ವಿದ್ಯಾರ್ಥಿಯೆಂದು ಚಿನ್ನದ ಪದಕ ಸಹ ಗಿಟ್ಟಿಸಿದ್ದ. ಇವನು ಚಿತ್ರಕಲೆಯೊಂದಿಗೆ ಛಾಯಾಚಿತ್ರ ಗ್ರಹಣದಲ್ಲಿ ಸಹ ನಿಪುಣನಾಗಿದ್ದ. ಅದರಲ್ಲೂ ಮುಖ್ಯವಾಗಿ ವನ್ಯ ಜೀವಿಗಳ, ಖಗ, ಮೃಗಗಳ ಛಾಯಾಚಿತ್ರಣದಲ್ಲಿ ಅವನಿಗೆ ಅತ್ಯುತ್ಸಾಹ. ಈ ಕಾರಣದಿಂದ ಆಗಾಗ್ಗೆ ಬಂಡೀಪುರ, ಮುದುಮಲೈ ಮೊದಲಾದ ವನ್ಯಜೀವಿ ತಾಣಗಳಿಗೂ ಹೋಗಿ ರೋಲ್‌ಗಟ್ಟಲೆ ಚಿತ್ರಗಳನ್ನು ತೆಗೆದಿದ್ದ. ಹೀಗೆ ಒಮ್ಮೆ ಬಂಡೀಪುರಕ್ಕೆ ಹೋಗಿದ್ದಾಗ.....

ಗೂಬೆ ಒಂದು ಸಣ್ಣ ಪ್ರಾಣಿ. ಇಲ್ಲಿ ಪ್ರಾಣಿ ಎಂದರೆ ಪ್ರಾಣವನ್ನು ಹೊಂದಿರುವುದು ಎಂಬ ಅರ್ಥವಷ್ಟೆ. ಇದೊಂದು ಸಣ್ಣ ಹಕ್ಕಿ. ಕಾಗೆ, ಗುಬ್ಬಚ್ಚಿಗಳಂತೆ ಪಟ್ಟಣಗಳಲ್ಲಿ ಕಾಣಲಾರದ ಹಕ್ಕಿ. ಇದು ನಿಶಾಚರ. ರಾತ್ರಿ ಹೊತ್ತು ಇತರ ಸಣ್ಣಪುಟ್ಟ ಜೀವಿಗಳನ್ನು ಕೊಂದು ತಿನ್ನುವ ಸಹಜ ಪ್ರಕೃತಿ. ನೋಡಲು ಕುರೂಪಿ. ಅಗಲವಾದ ಚಪ್ಪಟೆ ಮುಖ. ಅಗಲವಾದ ಕಣ್ಣುಗಳು. ಅದರ ಸುತ್ತಲೂ ಚಕ್ರಾಕಾರದಲ್ಲಿ ದಟ್ಟ ಕೂದಲು, ಸಣ್ಣ ಕೊಕ್ಕು. ಮೊನಚಾದ ಉಗುರುಗಳುಳ್ಳ ಕಾಲುಗಳು. ರಾತ್ರಿಹೊತ್ತಿನಲ್ಲಿ ಶಬ್ದವಿಲ್ಲದೆ ಹಾರಾಡಲು ಸಾಧಕವಾಗಿರುವ ನಯವಾದ ರೆಕ್ಕೆಪುಕ್ಕಗಳು. ಒಂದು ವಿಷಯದಲ್ಲಿ ಆನೆ ಮತ್ತು ಗೂಬೆಗೆ ವಿಶೇಷ ವೈಚಿತ್ರ್ಯವಿದೆ. ಆನೆಗೆ ಅದರ ಗಾತ್ರಕ್ಕೆ ಇರುವುದು ತೀರ ಸಣ್ಣ ಕಣ್ಣುಗಳು. ತದ್ವಿರುದ್ಧವಾಗಿ ಗೂಬೆಗೆ, ಅದರ ಗಾತ್ರಕ್ಕೆ ಇರುವುದು ತೀರಾ ದೊಡ್ಡ ಕಣ್ಣುಗಳು. ಇದಿಷ್ಟು ಗೂಬೆಯ ಸಾಮಾನ್ಯ ವರ್ಣನೆ.

ಏಕೋ, ಏನೋ ತಿಳಿಯದು, ಗೂಬೆಯನ್ನು ಮನುಷ್ಯ ವಿವಿಧ ರೀತಿಯಲ್ಲಿ ತಿಳಿದುಕೊಂಡಿದ್ದಾನೆ. ಸಾಧಾರಣವಾಗಿ ಇದನ್ನು ಬೈಗುಳ ಪದವನ್ನಾಗಿ, ಅಪಶಕುನ ಚಿಹ್ನೆಯನ್ನಾಗಿ ಕಾಣುತ್ತಾನೆ. ಗೂಬೆ, ಮುದಿಗೂಬೆ ಎಂಬ ಅವಹೇಳನ ಸಾಧಾರಣವಾಗಿ ಕೇಳುತ್ತೇವೆ. ಸದಾ ಜೋಲುಮುಖ ಹಾಕಿಕೊಂಡಿರುವ ವ್ಯಕ್ತಿಗೆ ಗೂಬೆ ಶಂಕರಿ ಎಂಬ ಬೈಗುಳ. ಸೋಮಾರಿಗೂ ಇದೇ ಬೈಗುಳದಿಂದ ಛೇಡಿಸುತ್ತೇವೆ.

ನಮ್ಮ ಕನ್ನಡದಲ್ಲಿ ಸಾಮಾನ್ಯವಾಗಿರುವ ನುಡಿಗಟ್ಟು ''ಗೂಬೆ ಕೂರಿಸು.'' ಇದರ ಅರ್ಥ ಅಪವಾದ ಹೊರಿಸು. ಗುರುತರವಾದ ಅಪವಾದಕ್ಕೆ ಈ ಮಾತು ಹೇಳುವುದು. ಸಣ್ಣ ಪುಟ್ಟ ವಿಚಾರಗಳಿಗೆ, ತಪ್ಪುಗಳಿಗೆ ಯಾರೂ ಗೂಬೆ ಕೂರಿಸುವುದಿಲ್ಲ. ಈ ನುಡಿಗಟ್ಟಿಗೆ ತಕ್ಕಂತಹ ಅಥವಾ ಹೊಂದುವಂತಹ ಅಪರಾಧಿಯಾದವನಿಗೆ, ಸಹವಾಸಕ್ಕೆ ಯೋಗ್ಯನಲ್ಲದ ವ್ಯಕ್ತಿಯ ಮೇಲೆ ಮಾತ್ರ ಗೂಬೆ ಕೂರಿಸಬಹುದು. ಗೂಬೆ ಅಪಶಕುನದ ಹಕ್ಕಿ! ಹಿಂದಿನ ಕಾಲದಲ್ಲಿ ಯಾರದಾದರೂ ಮನೆಯ ಮೇಲೆ ಗೂಬೆ ಕುಳಿತರೆ ಮನೆಯೇ ಬಿಟ್ಟು ಬೇರೆ ಕಡೆ ವಾಸಕ್ಕೆ ಹೋಗುತ್ತಿದ್ದರು. ಗೂಬೆ ಕೂತರೆ ಮನೆ ಅಪವಿತ್ರವಾಗುತ್ತೆ! ಕೆಡಕಿಗೆ ಕಾರಣವಾಗುತ್ತೆ! ಇದಿಷ್ಟೂ ಒಂದು ರೀತಿಯ ನಂಬಿಕೆಗಳು. ಪಾಪ, ಈ ಪುಟ್ಟ ಪ್ರಾಣಿ ಇಷ್ಟೆಲ್ಲಾ ಸಾಮರ್ಥ್ಯ ಹೊಂದಿದೆಯಲ್ಲವೆ ?

ಸುದರ್ಶನ, ತನ್ನ ವಸತಿ ಗೃಹದ ಕೋಣೆಯ ಕಿಟಕಿಯ ಮುಂದೆ ನಿಂತಿದ್ದ. ಆ ಕತ್ತಲಿನಲ್ಲಿ, ಎದುರಿನ ಮರದ ಮೇಲೆ ಹಕ್ಕಿಯಿರುವಂತೆ ಭಾಸವಾಯಿತು. ಇದು ಅರಣ್ಯ ಪ್ರದೇಶ. ಏನಾದರೂ ಚಿತ್ರೀಕರಣಕ್ಕೆ ವಸ್ತು ಸಿಕ್ಕೇ ಸಿಗುತ್ತೆ ಎಂಬ ವಿಶ್ವಾಸ. ತಕ್ಷಣವೇ ಟೆಲಿ ಫೋಟೋ ಲೆನ್ಸಿದ್ದ ಕ್ಯಾಮೆರ ಮತ್ತು ದೊಡ್ಡ ಫ್ಲಾಷ್‌ಗನ್ ಸಿದ್ಧಮಾಡಿಕೊಂಡು ಕ್ಯಾಮರ ಮೂಲಕ ಮರದ ರೆಂಬೆಯ ಕಡೆ ನೋಡಿದ. ಪಿಳಿ ಪಿಳಿ ಕಣ್ಣು ಬಿಟ್ಟುಕೊಂಡು ಎದುರಿಗೆ ಕೂತಿತ್ತು ಗೂಬೆ. ಪಟ್ಟಣದಲ್ಲಿ ಎಂದೂ ನೋಡದಿದ್ದ ಗೂಬೆ ಅವನಿಗಾಗಿ ಭಾವಚಿತ್ರಕ್ಕಾಗಿ ಪೋಸ್ ಕೊಡುವಂತಿತ್ತು. ಅವಸರದಲ್ಲಿ ನಾಲ್ಕೈದು ಚಿತ್ರ ತೆಗೆದ. ಫ್ಲಾಷ್ ಬೆಳಕಿನಿಂದ ಬೆಸತ್ತಿದ್ದ ಗೂಬೆ, ಒಂದೆರೆಡು ನಿಮಿಷಗಳಲ್ಲಿ ಹಾರಿಹೋಯಿತು. ಬಂಡೀಪುರದಲ್ಲಿ ಇನ್ನೂ ಒಂದೆರಡು ದಿನ ತಂಗಿದ್ದು, ಹಲವಾರು ವನ್ಯಜೀವಿಗಳ ಚಿತ್ರಗಳನ್ನು ತೆಗೆದು ಬೆಂಗಳೂರಿಗೆ ಹಿಂದಿರುಗಿದ. ಎಲ್ಲಾ ಫಿಲ್ಮ್ ರೋಲ್‌ಗಳನ್ನೂ ಪ್ರೋಸೆಸ್ ಮಾಡಿ ಪ್ರಿಂಟ್ ತೆಗೆದಾಗ, ಆಕಸ್ಮಿಕವಾಗಿ ಸೆರೆಹಿಡಿದ ಚಿತ್ರಗಳು ಅಮೋಘವಾಗಿದ್ದವು. ಪ್ರಕೃತಿ ಸಹಜ ವಾತಾವರಣದಲ್ಲಿ ಗೂಬೆ ಭಾವಚಿತ್ರ ಸೊಗಸಾಗಿ ಮೂಡಿಬಂದಿತ್ತು. ಇದೇ ಸಮಯದಲ್ಲಿ ಛಾಯಾಚಿತ್ರ ಸ್ಪರ್ಧೆಯನ್ನು ಫೋಟೊಗ್ರಾಫಿಕ್ ಸೊಸೈಟಿ ಏರ್ಪಡಿಸಿತ್ತು. ವನ್ಯಜೀವಿ ವಿಭಾಗದ ಸ್ಪರ್ಧೆಗೆ ಗೂಬೆ ಚಿತ್ರ ಕಳುಹಿಸಿದ. ಅವನ ಈ ಚಿತ್ರಕ್ಕೆ ಮೊದಲನೆ ಬಹುಮಾನವೆಂದು ಚಿನ್ನದ ಪದಕ ಸಹ ಲಭಿಸಿತು.

ಚಿನ್ನದ ಪದಕ ಸ್ವೀಕರಿಸುವ ಸಂದರ್ಭದಲ್ಲಿ ತೆಗೆದ ಚಿತ್ರದೊಂದಿಗೆ, ಒಳ್ಳೆ ಕಟ್ಟು ಹಾಕಿದ್ದ ಗೂಬೆ ಚಿತ್ರವನ್ನು ಬಹಳ ಉತ್ಸಾಹದಿಂದ ಹಜಾರದಲ್ಲಿ ತೂಗುಹಾಕಿದ. ಬಂದವರಿಗೆಲ್ಲಾ ಚಿನ್ನದ ಬಹುಮಾನ ದೊರಕಿರುವುದು ತಿಳಿಯಲೆಂದು. ಆದರೆ...

ಅವನ ತಾಯಿಗೆ ಇದು ಹಿಡಿಸಲಿಲ್ಲ. ಇದು ಎಂತಹುದು ? ಹೋಗಿ ಹೋಗಿ ಗೂಬೆ ಪಟ ಮನೆಯಲ್ಲಿಡುವುದೆ ? ಬೆಳಗಾಗಿ ಎದ್ದರೆ ಗೂಬೆ ನೋಡಿಕೊಂಡು ಏಳಬೇಕೆ ? ಛೇ, ಛೇ, ಮೊದಲು ಇದನ್ನು ತೆಗೆಸಿಹಾಕಬೇಕು. ತಾಯಿ ಹೇಳಿದರು : ''ಏನೋ ಮಗು, ನಿನಗೆ ಅಷ್ಟು ತಿಳಿಯೋದಿಲ್ಲವೆ, ಯಾರಾದರೂ ಮನೆಯಲ್ಲಿ ಗೂಬೆ ಪಟ ತಗಲುಹಾಕ್ತಾರ ? ಇದು ಬಹಳ ಕೆಟ್ಟದ್ದು, ಮೊದಲು ತೆಗೆದು ಬಿಸಾಡು.'' ಈವತ್ತು ನಾಳೆ ಎಂದು ಹೇಳಿ ಕಾಲ ಕಳೆದಿದ್ದ ಸುದರ್ಶನ ಅಮ್ಮನ ಒತ್ತಾಯ ತಡೆಯಲಾರದೆ ಗೂಬೆ ಪಟ ತನ್ನ ಕೋಣೆಗೆ ಸಾಗಿಸಿದ. ಆದರೂ ತಾಯಿಗೆ ಸಮಾಧಾನವಾಗಿರಲಿಲ್ಲ. ''ಥೂ, ಇನ್ನೂ ಪೀಡೆ ಮನೆಯಲ್ಲಿಯೇ ಇದೆ'' ಎಂಬ ಉದ್ಗಾರ ದಿನಂಪ್ರತಿ ಕೇಳಿಬರುತ್ತಿತ್ತು. ಸುದರ್ಶನನಿಗೆ ಇದು ಬಹುಮಾನಿತ ಕಲಾಕೃತಿ. ಬಿಸಾಡುವ ಮನಸ್ಸಿರಲಿಲ್ಲ.

ಸುದರ್ಶನನ ಸಹಪಾಠಿಯಾಗಿದ್ದ ಬಿಹಾರ್ ರಾಜ್ಯದ ಬುಡಕಟ್ಟಿಗೆ ಸೇರಿದ್ದ ಮೊಹಾಂತೋ ಬಹಳ ಕಾಲದ ನಂತರ ಮನೆಗೆ ಬಂದಿದ್ದ. ಸುಮಾರು ಕಾಲ ಅವರಿಬ್ಬರು ಕ್ಷೇಮ ಸಮಾಚಾರ ವಿಚಾರಿಸಿಕೊಂಡು ಮಾತನಾಡಿದರು. ಸುದರ್ಶನನ ಸಾಧನೆಗಳ ಬಗ್ಗೆ ಕುತೂಹಲದಿಂದ ಪ್ರಶ್ನಿಸಿದ. ಆಗ ಸುದರ್ಶನ ಇತ್ತೀಚೆಗೆ ಚಿನ್ನದ ಪದಕ ಗಳಿಸಿರುವುದನ್ನು ಮೊಹಾಂತೋವಿಗೆ ತಿಳಿಸಿದ. ಆಗ ಆ ಚಿತ್ರ ನೋಡಲೇಬೇಕೆಂದ ಮೊಹಾಂತೋವನ್ನು ತನ್ನ ಕೋಣೆಗೆ ಕರೆದೊಯ್ದ. ಮೊಹಾಂತೋ ಆ ಗೂಬೆ ಚಿತ್ರ ನೋಡಿದೊಡನೆ ಪುಲಕಿತನಾಗಿ, ಒಡನೆಯೇ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿದ. ಆಗ ಹೇಳಿದ : ''ಗೂಬೆ ನಮ್ಮ ಜನಾಂಗದ ವರ ದೇವತೆ, ನಮಗೆ ಬಹಳ ಶ್ರೇಷ್ಠವಾದದ್ದು. ಇಂತಹ ಸೊಗಸಾದ, ಜೀವಂತವಾಗಿ ಕಳೆಕಟ್ಟಿರುವ ಚಿತ್ರ ಇದುವರೆಗೆ ನಾನು ನೋಡಿರಲಿಲ್ಲ. ಓಹೋ ! ನೀನು ಚಿನ್ನದ ಪದಕಕ್ಕೆ ನಿಜವಾಗಲೂ ಅರ್ಹ.'' ಹೀಗೆ ಹೇಳಿ, ''ಏನೇ ಆಗಲಿ, ಎಷ್ಟೇ ಬೆಲೆಯಾಗಲೀ ಈ ಚಿತ್ರ ನಾನು ನನ್ನೊಡನೆ ಕೊಂಡೊಯ್ಯುತ್ತೇನೆ'' ಎಂದು ಹೇಳಿ, ತನ್ನ ಕೈ ಚೀಲದಲ್ಲಿದ್ದ ಚೆಕ್ ಬುಕ್ಕನ್ನು ತೆಗೆದು ಹತ್ತು ಸಾವಿರ ರೂಪಾಯಿ ಹಣ ಬೆಲೆಯಾಗಿ ಬರೆದೇಬಿಟ್ಟ. ಆಗ ಸುದರ್ಶನನಿಗೆ ಮಹದಾನಂದವಾಯಿತು. ಒಡನೆಯೇ ತಾಯಿಗೆ ವಿಷಯ ತಿಳಿಸಿದ. ತಾಯಿಯಿಂದ ಬಂದ ಉತ್ತರ: ''ಚೆಕ್ ಕ್ಯಾಷ್ ಆಗಲಿ, ಬಿಡಲಿ, ಸದ್ಯಕ್ಕೆ ಆ ಗೂಬೆ ಮನೆಯಿಂದ ತೊಲಗಿದರೆ ಸಾಕು.''

ನಮ್ಮಗಳ ನಂಬಿಕೆಯಂತೆ ಗೂಬೆ ಹಾನಿಕಾರಕ, ಅಪಶಕುನದ ಚಿನ್ಹೆ. ಆದರೆ ಮೊಹಾಂತೋವಿಗೆ ಪವಿತ್ರವಾದದ್ದು. ಶುಭ ಸೂಚಕ. ಯಾವುದು ಸರಿ ? ತದ್ವಿರುದ್ಧ ಎರಡೂ ನಂಬಿಕೆಗಳು ಮೂಢನಂಬಿಕೆಗಳಷ್ಟೆ ? ಗೂಬೆಗೆ ನಮ್ಮ ನಂಬಿಕೆಗಳು ಗೊತ್ತಿದೆಯೇ ? ಅದರ ಪಾಡಿಗೆ ಅದಿರುತ್ತೆ. ಅದರ ಹೆಸರಿನಲ್ಲಿ ನಾವು ಊಹಾಪೋಹ ಮಾಡಿ ತಲೆ ಕೆಡಿಸಿಕೊಳ್ಳುತ್ತೇವೆ. ಗೂಬೆಯನ್ನು ಅದರ ಪಾಡಿಗೆ ಬಿಡೋಣ. ಗೂಬೆಯಿಂದ ಒಳ್ಳೆಯದಾಗಲಿ ಕೆಟ್ಟದ್ದಾಗಲಿ ಆಗಿರುವ ನಿದರ್ಶನ ನೀವು ಯಾರಾದರೂ ರುಜುವಾತುಪಡಿಸುವಿರಾ ?

**ಯು. ಎಸ್. ವೆಂಕಟರಾಮನ್**
ನಂ. ೩೧೪, ೯ನೇ ಮುಖ್ಯರಸ್ತೆ, ಮಿಲ್ಕ್ ಕಾಲೋನಿ, ಬೆಂಗಳೂರು - ೫೬೦ ೦೫೫

# ಹತ್ತನೆಯ ಪಂಚವಾರ್ಷಿಕ ಯೋಜನೆ ಮತ್ತು ಉಚ್ಚ ಶಿಕ್ಷಣ : ಕೆಲವು ಅನಿಸಿಕೆಗಳು

*ಪಠ್ಯಕ್ರಮದಲ್ಲಿ ಭಾರತೀಯ ತತ್ವಶಾಸ್ತ್ರ, ಧರ್ಮ, ನೀತಿಶಾಸ್ತ್ರ ಮತ್ತು ತರ್ಕಶಾಸ್ತ್ರ ಇವುಗಳು ಐಚ್ಛಿಕ ಭಾಗವಾಗಿಯಾದರೂ ಇದ್ದರೆ ಉಚ್ಚ ಶಿಕ್ಷಣ ಹೆಚ್ಚು ಅರ್ಥಪೂರ್ಣ ಎನಿಸಿಕೊಳ್ಳುತ್ತದೆ. ಭೌತಶಾಸ್ತ್ರ ಅಥವಾ ಅರ್ಥಶಾಸ್ತ್ರದ ಅಧ್ಯಯನದ ಭಾಗವಾಗಿ ತತ್ವಶಾಸ್ತ್ರದ ಲೇಪು ಅಥವಾ ಒಂದು ಕಿರುಪರಿಚಯವಿದ್ದರೆ ಲೇಸು.*

**ಪ್ರೊ॥ ಎಂ. ವಿ. ನಾಡಕರ್ಣಿ**

**ಪ್ರಾ**ಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಬೇಕಾಗಿದೆ ಎಂಬ ಕಾರಣಕ್ಕಾಗಿ ಉಚ್ಚ ಶಿಕ್ಷಣವನ್ನು ಕಡೆಗಾಣಿಸುವ ಪ್ರವೃತ್ತಿ ಈಗೀಗ ಹೆಚ್ಚಾಗಿ ಕಂಡುಬರುತ್ತಿದೆ. ದೂರದೃಷ್ಟಿಯಿಲ್ಲದ, ಅಗ್ಗದ ಜನಪ್ರಿಯತೆ ಗಳಿಸುವ ಹುನ್ನಾರವೇ ಇದರ ಹಿನ್ನೆಲೆ ಎನ್ನಬಹುದು. ಜನತೆಯ ಭವಿಷ್ಯದ ಹಿತದೃಷ್ಟಿಯಿಂದ ಇದನ್ನು ಕೂಡಲೇ ಕೊನೆಗಾಣಿಸಬೇಕಾಗಿದೆ. ಸರ್ವತೋಮುಖ ಜ್ಞಾನಾರ್ಜನೆ, ಪ್ರಾಪಂಚಿಕ ಅರಿವುಗಳ ಅವಶ್ಯಕತೆ, ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ ಆರ್ಥಿಕ ಬೆಳವಣಿಗೆಗೆ ಚಾಲನಾಶಕ್ತಿ ಒದಗಿಸುವ ಮತ್ತು ಪ್ರಗತಿಗೆ ಬಹುಮುಖ್ಯ ಆಧಾರವಾಗಿರುವ ಉಚ್ಚ ಶಿಕ್ಷಣಕ್ಕೆ ತಕ್ಕ ಸ್ಥಾನವನ್ನು ನೀಡಬೇಕಾಗಿದೆ. ೧೯೫೦-೫೧ರ ಅವಧಿಯಲ್ಲಿ ಸೇವಾ ಕ್ಷೇತ್ರದಲ್ಲಿನ ಒಟ್ಟು ರಾಷ್ಟ್ರೀಯ ಉತ್ಪಾದನೆ ಶೇ. ೨೯ರಷ್ಟು ಇದ್ದದ್ದು ೧೯೯೮-೯೯ರಲ್ಲಿ ಶೇ. ೪೫ಕ್ಕೆ ಏರಿತಲ್ಲದೆ ಇನ್ನೂ ಗಣನೀಯವಾಗಿ ಹೆಚ್ಚಾಗುವ ಸಾಧ್ಯತೆಗಳಿವೆ. ದಕ್ಷಿಣ ಕೊರಿಯಾದಂತಹ ರಾಷ್ಟ್ರಗಳಲ್ಲಿ ಬಡತನ ನಿರ್ಮೂಲನಾ ಯೋಜನೆಗಳಲ್ಲಿಯೇ ಆಗಲಿ, ತ್ವರಿತ ವೇಗದಲ್ಲಿ ಆರ್ಥಿಕ ಪ್ರಗತಿಯನ್ನು ಸಾಧಿಸುವಲ್ಲಿಯೇ ಆಗಲಿ ಉಚ್ಚ ಶಿಕ್ಷಣ ಬಹು ಮುಖ್ಯಪಾತ್ರ ವಹಿಸಿದೆ. ವಿವಿಧ ಕ್ಷೇತ್ರಗಳಲ್ಲಿನ ತಜ್ಞರು ಹಾಗೂ ವಿದ್ಯಾವಂತ ಜನಸಮುದಾಯ ನಮ್ಮ ರಾಷ್ಟ್ರದ ಆರ್ಥಿಕ ಮತ್ತು ವಾಣಿಜ್ಯ ಕ್ಷೇತ್ರದ ವಿಸ್ತರಣೆಗಾಗಿ ತಮ್ಮದೇ ಆದ ಕೊಡುಗೆಯನ್ನಿತ್ತಿದ್ದಾರೆ. ಬಡತನ ನಿರ್ಮೂಲನ ಮತ್ತು ಆರ್ಥಿಕ ಪ್ರಗತಿ ಸಾಧಿಸುವ ನಿಟ್ಟಿನಲ್ಲಿ ಬೃಹತ್ ವ್ಯಾಪಾರೀ ಸಂಸ್ಥೆಗಳು ಮತ್ತು ಕೈಗಾರಿಕೋದ್ಯಮಗಳಲ್ಲಿ ಆನುವಂಶಿಕ ವ್ಯವಸ್ಥಾಪಕ ವರ್ಗ ನಡೆಯಲಾರದು. ಅದಕ್ಕೆ ಉಚ್ಚ ಶಿಕ್ಷಣ ಪಡೆದ, ವ್ಯವಸ್ಥಾಪನ ಶಾಸ್ತ್ರದಲ್ಲಿ ತರಬೇತಿ ಹೊಂದಿದ, ವರ್ಗವೇ ಬೇಕು. ವಿದೇಶಗಳಲ್ಲಿ ದುಡಿಯುತ್ತಿರುವ ನಮ್ಮ ವಿದ್ಯಾವಂತ ಯುವಕರು ಅಲ್ಲಿನ ಸ್ಥಳೀಯರ ವಿಶ್ವಾಸಕ್ಕೆ ಪಾತ್ರರಾಗಿರುವುದೂ ಅಲ್ಲದೆ ರಾಷ್ಟ್ರದ ಆರ್ಥಿಕ ಪ್ರಗತಿಗೆ ಅತ್ಯಗತ್ಯವಾಗಿರುವ ವಿದೇಶಿ ವಿನಿಮಯಗಳಿಸಲು ಕಾರಣರಾಗಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಉಚ್ಚ ಶಿಕ್ಷಣ ಎಷ್ಟು ಪ್ರಾಮುಖ್ಯತೆ ಪಡೆಯುತ್ತದೆಯೋ ಅಷ್ಟೇ ಪ್ರಾಮುಖ್ಯತೆಯನ್ನು ರಾಜಕೀಯದಲ್ಲಿಯೂ ಪಡೆಯಬೇಕೆನ್ನುವ ಅಂಶವನ್ನು ತಳ್ಳಿಹಾಕುವಹಾಗಿಲ್ಲ. ರಾಜಕೀಯ ನಾಯಕರು ರಾಷ್ಟ್ರದ ಹಿತಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಬಹಿರಂಗವಾಗಿ ಚರ್ಚಿಸಿ ಜನಸಾಮಾನ್ಯರ ಅಭಿಪ್ರಾಯಗಳಿಗೆ ಸ್ಪಂದಿಸಬೇಕಾಗುತ್ತದೆ. ಶಿಕ್ಷಣವೆಂಬುದು ಸಮಾಜದ ಎಲ್ಲ ಸ್ತರಗಳಲ್ಲಿಯೂ ಆಳವಾಗಿ ಮತ್ತು ವ್ಯಾಪಕವಾಗಿ ಬೇರೂರಿರುವ ಸಂದರ್ಭದಲ್ಲಿ ಮಾತ್ರ ಈ ಪ್ರಕ್ರಿಯೆ ಸಾಧ್ಯವೆನ್ನಬಹುದು. ದುರದೃಷ್ಟಕರವೆಂದರೆ ಉಚ್ಚ ಶಿಕ್ಷಣಕ್ಕಾಗಿ ಮುಂದೆಬರುವ ವಿದ್ಯಾರ್ಥಿಗಳ ಸಂಖ್ಯೆ ನಮ್ಮ ರಾಷ್ಟ್ರದಲ್ಲಿ ೧೯೯೭ರಲ್ಲಿ ಶೇ. ೭ರಷ್ಟಿದ್ದರೆ, ಅಮೆರಿಕದಲ್ಲಿ ಶೇ. ೮೧, ದಕ್ಷಿಣ ಕೊರಿಯ ಶೇ. ೭೮ ಮತ್ತು ಬ್ರಿಟನ್ನಿನಲ್ಲಿ ಶೇ. ೫೨ ಇದ್ದಿತು. ಜಾಗತಿಕ ಸರಾಸರಿ ಮಟ್ಟ ಶೇ. ೧೯.

ಇತರ ರಾಷ್ಟ್ರಗಳ ಮಾತು ಹಾಗಿರಲಿ, ನಮ್ಮಲ್ಲಿ ಉಚ್ಚ ಶಿಕ್ಷಣ ಪಡೆಯಲು ಇಚ್ಛಿಸುವವರ ಸಂಖ್ಯೆಯು ಜಾಗತಿಕ ಮಟ್ಟವನ್ನಾದರೂ ತಲುಪಬೇಕಾದುದು ಮುಖ್ಯ. ಆರ್ಥಿಕ ದೃಷ್ಟಿಯಿಂದ ಕೇವಲ ವಿದ್ಯಾರ್ಥಿಗಳಿಂದ ವಸೂಲಿ ಮಾಡುವ ಶುಲ್ಕದಿಂದಲೇ ಇಡೀ ಶಿಕ್ಷಣ ವ್ಯವಸ್ಥೆಯಲ್ಲಿ ಪರಿವರ್ತನೆ ತರುವುದು ಅಸಾಧ್ಯ. ಹಣಕಾಸಿನ ವಿಷಯದಲ್ಲಿ ಇನ್ನು ಮುಂದೆ ಹೆಚ್ಚುಹೆಚ್ಚಾಗಿ ಸ್ವಾವಲಂಬನಾ ನೀತಿಯ ಆಧಾರದ ಮೇಲೆ ಕಾರ್ಯ ನಿರ್ವಹಿಸಬೇಕಾಗಿರುವುದು ಅಗತ್ಯವೆನಿಸಿದರೂ ಉಚ್ಚ ಶಿಕ್ಷಣಕ್ಕೆ ಸರ್ಕಾರ ನೀಡಬೇಕಾದ ಬೆಂಬಲ, ಸಹಕಾರ ಯಾವ ದೃಷ್ಟಿಯಿಂದಲೂ ಕಡೆಗಣಿಸಲಾಗದು. ಮೇಲಾಗಿ ನಮ್ಮ ಸಮಾಜ ವ್ಯವಸ್ಥೆ ಅಸಮಾನತೆಗಳಿಂದ ತುಂಬಿದೆ. ಇದರಿಂದಾಗಿ ದುರ್ಬಲ ವರ್ಗದವರು ತಮ್ಮ ಶಿಕ್ಷಣಾಕಾಂಕ್ಷೆಯನ್ನು ಪೂರೈಸಿಕೊಳ್ಳುವ ದೃಷ್ಟಿಯಲ್ಲಿ ಹಿತಕರವಾದ ವಾತಾವರಣ ನಿರ್ಮಾಣ ಮಾಡಬೇಕಾಗಿದೆ. ಪ್ರತಿಭಾವಂತ ಹಾಗೂ ಬಡವಿದ್ಯಾರ್ಥಿಗಳಿಗೆ ಸರಕಾರ ಸಹಾಯ ಹಸ್ತ ನೀಡಬೇಕಾಗಿದೆ. ವಿಶ್ವವಿದ್ಯಾನಿಲಯಗಳು ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕೆನ್ನುವ ವಾದ ಅವುಗಳ ಕಾರ್ಯ ಚಟುವಟಿಕೆಗಳನ್ನು ಮಿತಿಗೊಳಿಸಲು ಕಾರಣವಾಗುತ್ತದೆ. ಹೆಚ್ಚಿನ ಮಟ್ಟಕ್ಕೆ ಹೋಗುವ ಮಾತು ಇನ್ನೆಲ್ಲಿ ? ಇಷ್ಟಾದರೂ ವಿಶ್ವವಿದ್ಯಾನಿಲಯಗಳಿಗೆ ಸ್ವಯಂಪ್ರೇರಿತವಾಗಿ ದೇಣಿಗೆ ನೀಡಿ ತಮ್ಮ ಮಕ್ಕಳನ್ನು ಉಚ್ಚ ಶಿಕ್ಷಣಕ್ಕೆ ನೋಂದಾಯಿಸುವ ಹಣವಂತರೂ ಇದ್ದಾರೆ. ಈಗಿನ ಪರಿಸ್ಥಿತಿಯಲ್ಲಿ ಅಂತಹ ಪ್ರಕ್ರಿಯೆಯನ್ನು ಪ್ರೋತ್ಸಾಹಿಸಿ ಅದರ ಪೂರ್ಣ ಪ್ರಯೋಜನವನ್ನು ವಿದ್ಯಾಸಂಸ್ಥೆಗಳು ಪಡೆಯಬೇಕಾಗಿದೆ. ಇಲ್ಲಿ ಎರಡು ವಿಷಯಗಳು ಬಹಳ ಮುಖ್ಯವೆನಿಸುತ್ತದೆ : ಒಂದು, ವಿದ್ಯಾರ್ಥಿಗಳ ಮೇಲಿನ ಶುಲ್ಕದ ಹೊರೆ ಮತ್ತು ಇನ್ನೊಂದು ಸರಕಾರದ ಹಣಕಾಸಿನ ಜವಾಬ್ದಾರಿ. ಇವೆರಡನ್ನೂ ಸಾಧುವಾದ ಮಿತಿಗಳಲ್ಲಿ ಇಡಬೇಕಾದರೆ ಸಮಾಜದಲ್ಲಿನ ಆರ್ಥಿಕವಾಗಿ ಮುಂದುವರೆದ ಜನ ವಿಭಾಗ ಸರಕಾರವೇ ಎಲ್ಲ ಜವಾಬ್ದಾರಿಯನ್ನೂ ನಿರ್ವಹಿಸುವುದು ಅಸಾಧ್ಯವೆಂಬುದನ್ನು ಅರಿತು ವಿಶ್ವವಿದ್ಯಾನಿಲಯಗಳಿಗೆ, ಸಂಶೋಧನಾ ಸಂಸ್ಥೆಗಳಿಗೆ ಉದಾರ ಧನ ಸಹಾಯ ನೀಡಿ ಅಲ್ಲಿನ ಕೊರತೆಗಳನ್ನು ನೀಗಿಸಲು ಮುಂದೆ ಬರಬೇಕಾಗಿದೆ. ಈ ರೀತಿಯ ಸಹಾಯ ಕೇವಲ ಚಿನ್ನದ ಪದಕ ನೀಡುವಂತಹ ಇಂಗಿತಗಳಿಗೆ ಮಾತ್ರ ಸೀಮಿತವಾಗುವ ದೃಷ್ಟಾಂತಗಳು ಹಲವಾರು ಇವೆ. ಅದಕ್ಕೂ ಮೀರಿ ದತ್ತಿ ಪೀಠಗಳನ್ನು ಸ್ಥಾಪಿಸುವುದು, ಆಧುನಿಕ ವೈಜ್ಞಾನಿಕ ಸಲಕರಣೆಗಳು, ಪುಸ್ತಕಗಳು ಮತ್ತು ನಿಯತಕಾಲಿಕಗಳನ್ನು ತರಿಸಿಕೊಳ್ಳುವುದಕ್ಕೆ ಮತ್ತು ಅಗತ್ಯವಾದ ಕಟ್ಟಡಗಳನ್ನು ನಿರ್ಮಿಸುವುದಕ್ಕೂ ಉಪಯೋಗವಾದರೆ ಆ ವರ್ಗದ ಉದಾರ ನೆರವು ಹೆಚ್ಚು ಅರ್ಥಪೂರ್ಣವಾಗುತ್ತದೆ.



ವಿಶ್ವವಿದ್ಯಾನಿಲಯಗಳ ಶಿಕ್ಷಣಾ ವ್ಯವಸ್ಥೆಗಳಿಗೆ ಹಣಕಾಸನ್ನು ಒದಗಿಸುವ ನಿಟ್ಟಿನಲ್ಲಿ ಇದುವರೆವಿಗೂ ನಿರ್ದಿಷ್ಟ ರೀತಿನೀತಿಗಳನ್ನು ಪರಿಪಾಲಿಸದೆ ನಡೆದು ಬಂದಿರುವ ಪರಿಣಾಮವಾಗಿ ಇಂದು ದಿಕ್ಕು ದಿವಾಣವಿಲ್ಲದ, ಗೊಂದಲದ ವಾತಾವರಣ ಉಂಟಾಗಿದೆ. ನಾಳೆ, ನಾಳಿದ್ದಿನ ಕಲ್ಪನೆ ಇವರಾರಿಗೂ ಇದ್ದಂತಿಲ್ಲ. ಇಂದಿನ, ಈ ಹೊತ್ತಿನ ಅಗತ್ಯತೆಗಳನ್ನು ಪೂರೈಸಿಕೊಂಡರೆ ಸಾಕು

ಎಂಬುದೇ ಸಾಮಾನ್ಯವಾಗಿ ಶಿಕ್ಷಣ ನೀತಿ ಮತ್ತು ವಿದ್ಯಾ ಸಂಸ್ಥೆಗಳ ಮನೋಧರ್ಮ. ಹಣಕಾಸಿನ ಕೊರತೆಯನ್ನು ನೀಗಿಸಲು ರಾಜ್ಯ ಸರಕಾರಗಳು ವಿಶ್ವವಿದ್ಯಾನಿಲಯಗಳಲ್ಲಿನ ನೌಕರಿಗಳಿಗೆ ಕಡಿವಾಣ ಹಾಕಿರುವುದು ಒಂದು ಮುಖ್ಯ ದೃಷ್ಟಾಂತ. ವಿಶ್ವವಿದ್ಯಾನಿಲಯ ಸಹಾಯಧನ ಆಯೋಗವು ಮೊದಲ ಐದು ವರುಷಗಳ ಅವಧಿಗೆ ಹೊಸದಾಗಿ ಪ್ರಾಧ್ಯಾಪಕರನ್ನು ನಿಯಮಿಸಿಕೊಳ್ಳಲು ಅನುಮತಿ ನೀಡಿದ್ದರೂ ರಾಜ್ಯ ಸರಕಾರಗಳು ಅಡ್ಡಗಾಲು ಹಾಕಿದ ಉದಾಹರಣೆಗಳೂ ಸಾಕಷ್ಟು ಇವೆ. ಇಂದಿನ ಪೂರೈಕೆಗಳನ್ನು, ಅವಶ್ಯಕತೆಗಳನ್ನು ಗಮನದಲ್ಲಿಟ್ಟು ಹೊಸದಾಗಿ ಕೋರ್ಸುಗಳನ್ನು, ಇಲಾಖೆಗಳನ್ನು ಪ್ರಾರಂಭಿಸಲು ಯೋಜಿಸುತ್ತಿರುವ ವಿಶ್ವವಿದ್ಯಾನಿಲಯಗಳು, ವಿದ್ಯಾ ಸಂಸ್ಥೆಗಳು ಶಿಕ್ಷಕರನ್ನು ಅತಿಥಿ ಶಿಕ್ಷಕರೆಂದು ಪ್ರತಿ ಗಂಟೆಯ ಆಧಾರದ ಮೇಲೆ ನೇಮಿಸಿಕೊಂಡು ತಮ್ಮ ಕೊರತೆಗಳನ್ನು ತಾವೇ ನೀಗಿಸಿಕೊಳ್ಳಬೇಕೆನ್ನುವುದು ಸರಕಾರದ ಅಪೇಕ್ಷೆ. ಇದು ದೆಹಲಿ, ಮುಂಬೈ, ಕೊಲ್ಕತಾ, ಚೆನ್ನೈ ಅಥವಾ ಬೆಂಗಳೂರಿನಂತಹ ದೊಡ್ಡ ನಗರಗಳಲ್ಲಿ ಸಾಧ್ಯವೆನಿಸಬಹುದು. ಏಕೆಂದರೆ, ಅಲ್ಲಿ ಅದಕ್ಕೆ ತಕ್ಕ ಪರಿಣಿತರಿದ್ದಾರೆ, ಅರ್ಹತೆಯುಳ್ಳ ಜನರಿದ್ದಾರೆ. ಆದರೂ ಅಂತಹ ವೃತ್ತಿಪರ ಶಿಕ್ಷಕರನ್ನು ಆ ರೀತಿಯ ತಾತ್ಕಾಲಿಕ ಏರ್ಪಾಡಿಗೆ ಒಲೈಸಿ ತರಗತಿಗಳನ್ನು ತೆಗೆದುಕೊಳ್ಳಲು ಒಪ್ಪಿಸಿ ಕರೆತರುವುದು ಕಷ್ಟಸಾಧ್ಯವೇ. ಇನ್ನು ಹಿಂದುಳಿದ ಅಥವಾ ಸಣ್ಣಪುಟ್ಟ ನಗರಪ್ರದೇಶಗಳಲ್ಲಿನ ಪರಿಸ್ಥಿತಿಯಂತೂ ತೀರ ಹದಗೆಟ್ಟಿರುವುದು ಎಲ್ಲರ ಅನುಭವವೂ ಕೂಡ. ನನ್ನ ದೃಷ್ಟಿಯಲ್ಲಿ ಒಂದರಿಂದ ಮೂರು ವರುಷಗಳ ಕರಾರಿನ ಆಧಾರದ ಮೇಲೆ ಪ್ರಾಧ್ಯಾಪಕರನ್ನು ನೇಮಿಸಿಕೊಳ್ಳಲು ಹಾಗೂ ವಿದ್ಯಾರ್ಥಿಗಳಿಂದ ವಸೂಲಿ ಮಾಡುವ ಶುಲ್ಕದ ಮೊತ್ತದಿಂದಲೇ ಅವರ ಸಂಬಳ ಸಾರಿಗೆಯನ್ನು ತಾವೇ ನಿಗದಿಪಡಿಸಿಕೊಳ್ಳುವ ಸ್ವಾತಂತ್ರ್ಯ ವಿಶ್ವವಿದ್ಯಾನಿಲಯಗಳಿಗೇ ಕೊಟ್ಟರೆ ಪರಿಸ್ಥಿತಿ ಸ್ವಲ್ಪಮಟ್ಟಿಗಾದರೂ ಸುಧಾರಿಸೀತು. ಕಂಪ್ಯೂಟರ್ ವಿಜ್ಞಾನ, ಜೀವಶಾಸ್ತ್ರ, ಪತ್ರಿಕೋದ್ಯಮ, ಮಾಹಿತಿ ತಂತ್ರವಿಜ್ಞಾನದಂತಹ ವೃತ್ತಿಪರ ಕೋರ್ಸುಗಳಲ್ಲಂತೂ ಇದನ್ನು ಕೂಡಲೇ ಜಾರಿಗೆ ತರುವುದು ಉಚಿತವೆನಿಸುತ್ತದೆ. ದಾನಶೀಲರು, ಹಿತೈಷಿಗಳು ಉದಾರವಾಗಿ ನೆರವು ನೀಡಲು ಮುಂದೆ ಬಂದದ್ದೇ ಆದರೆ ವಿದ್ಯಾರ್ಥಿಗಳ ಮೇಲಿನ ಶುಲ್ಕದ ಹೊರೆ ಕಡಿಮೆ ಆಗುವ ಸಾಧ್ಯತೆಯೂ ಇದೆ. ವಿದ್ಯಾರ್ಜನೆಯನ್ನು ಪ್ರೋತ್ಸಾಹಿಸುವ ಸಹೃದಯರು ಹೆಚ್ಚಾಗಿ ನೆಲೆಸಿರುವ ದೊಡ್ಡ ದೊಡ್ಡ ನಗರಗಳಲ್ಲಿನ ವಿಶ್ವವಿದ್ಯಾನಿಲಯಗಳು ತಮ್ಮ ಎಲ್ಲ ಅವಶ್ಯಕತೆಗಳಿಗೂ ವಿಶ್ವವಿದ್ಯಾನಿಲಯ ಸಹಾಯಧನ ಆಯೋಗವನ್ನಾಗಲಿ, ಸರಕಾರವನ್ನಾಗಲಿ ಅವಲಂಬಿಸುವುದು ಕೂಡ ಬಹುಮಟ್ಟಿಗೆ ನಿವಾರಣೆಯಾಗುತ್ತದೆ. ಸಾಮಾನ್ಯವಾಗಿ ಇಂತಹ ದಾನಶೀಲರ ಕೊಡುಗೆಗಳಿಗೆ ಆದಾಯ ತೆರಿಗೆ ರಿಯಾಯಿತಿ ಇದೆ. ಆ ರಿಯಾಯಿತಿಯನ್ನು ಪಡೆಯುವುದು ಸುಲಭ ಸಾಧ್ಯವೇನೂ ಅಲ್ಲ, ಆದಾಯ ತೆರಿಗೆ ಇಲಾಖೆಯ ಹತ್ತು ಹಲವು ಕಟ್ಟುಪಾಡುಗಳನ್ನು ದಾಟಿ ಅವರಿಂದ ಅನುಮತಿ ಪಡೆಯುವುದೇ ಒಂದು ಸಾಹಸ. ತಿಂಗಳಾನುಗಟ್ಟಲೆ ಹಿಡಿಯುವ ಈ ರೀತಿನೀತಿಗಳಲ್ಲಿ ತುರ್ತಾಗಿ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತಂದರೆ ವಿದ್ಯಾಸಂಸ್ಥೆಗಳಿಗೆ ಹೆಚ್ಚಿನ ಅನುಕೂಲವಾಗುವುದರಲ್ಲಿ ಅನುಮಾನವಿಲ್ಲ. ಅವಶ್ಯಕತೆಯಿದ್ದಲ್ಲಿ ಇದೇ ಹಣವನ್ನು ಮಹಾನಗರೇತರ ಪ್ರದೇಶಗಳಲ್ಲಿನ ವಿಶ್ವವಿದ್ಯಾನಿಲಯಗಳ ಅಭಿವೃದ್ಧಿಗೂ ಉಪಯೋಗಿಸಿ ಕೊಳ್ಳುವ ಅವಕಾಶಗಳೂ ನಿರ್ಮಾಣವಾಗುತ್ತವೆ. ಈ ಪ್ರಕ್ರಿಯೆಯಿಂದ ಶಿಕ್ಷಣವನ್ನು ಅರಸಿ ಬರುವ ಬಡ ವಿದ್ಯಾರ್ಥಿಗಳನ್ನೂ ಪ್ರೋತ್ಸಾಹಿಸಿದಂತಾಗುವುದಲ್ಲದೆ ಹಿಂದುಳಿದ ಪ್ರದೇಶಗಳ ಅಗತ್ಯತೆಗಳಿಗೂ ಸ್ಪಂದಿಸಿದಂತಾಗುತ್ತದೆ.

ಮಹಾನಗರೇತರ ಪ್ರದೇಶಗಳಲ್ಲಿನ ವಿದ್ಯಾ ಸಂಸ್ಥೆಗಳೂ ವಿಶ್ವವಿದ್ಯಾನಿಲಯಗಳೂ ದೊಡ್ಡ ದೊಡ್ಡ ನಗರಗಳಲ್ಲಿರುವ ವಿಶ್ವವಿದ್ಯಾನಿಲಯಗಳ ಮಟ್ಟಕ್ಕೆ ಬರಬೇಕಾದರೆ ಮೂಲತಃ ಒಂದು ಅಡಚಣೆಯಿದೆ. ಅದು ಬೋಧನಾ ಕ್ರಮದಲ್ಲಿ ಬಳಸುವ ಭಾಷಾ ಮಾಧ್ಯಮಕ್ಕೆ ಸಂಬಂಧಿಸಿದ್ದು. ಎಲ್ಲರ ಅನುಭವದಂತೆ ಮಹಾನಗರಗಳಲ್ಲಿನ ಕಾಲೇಜುಗಳಲ್ಲಿ ಇಂಗ್ಲಿಷ್ ಭಾಷೆಗೇ ಹೆಚ್ಚು ಪ್ರಾಮುಖ್ಯತೆ. ಇತರೆಡೆಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳನ್ನೇ ಹೆಚ್ಚು ಬಳಸಲಾಗುವುದು ಸಾಮಾನ್ಯ. ಅಲ್ಲಿನ ವಿದ್ಯಾರ್ಥಿಗಳೂ ಇಂಗ್ಲಿಷ್ ಭಾಷೆಯಲ್ಲಿನ ಪುಸ್ತಕಗಳು, ನಿಯತಕಾಲಿಕಗಳನ್ನು ಓದುವ ಪ್ರವೃತ್ತಿ, ಒಲವು ಅಥವಾ ಆತ್ಮವಿಶ್ವಾಸ ಬೆಳೆಸಿಕೊಳ್ಳುವುದಕ್ಕೆ ಸಹಜವಾಗಿಯೇ ಬಂದಿರುವ ಅಡೆತಡೆಗಳಿವೆ. ಇತ್ತೀಚೆಗಂತೂ ಉನ್ನತ ಮಟ್ಟದ ವ್ಯಾಸಂಗದ ದೃಷ್ಟಿಯಲ್ಲಿ, ಅದರಲ್ಲೂ ಪ್ರಕೃತಿ ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳ ಅಧ್ಯಯನಗಳಲ್ಲಿ, ಇಂಗ್ಲಿಷ್ ಪ್ರಕಟಣೆಗಳಲ್ಲಿಯೇ ಹೆಚ್ಚಿನ ಮಾಹಿತಿ ಲಭ್ಯವಿರುವುದರಿಂದ ಪ್ರಾದೇಶಿಕ ಭಾಷೆಗಳಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಇದೊಂದು ರೀತಿಯ ನಿರ್ಬಂಧವಾಗಿ ಪರಿಣಮಿಸುವುದೆಂದೇ ಹೇಳಬೇಕಾಗುತ್ತದೆ. ಇದೇ ವಿದ್ಯಾರ್ಥಿಗಳು ತಾವೇ ಶಿಕ್ಷಕರಾಗಿ, ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ಮುಂದೆ ನಿಲ್ಲುವಂತಹ ಸಂದರ್ಭಗಳು ಬಂದಾಗ ಹಲವಾರು ಸಮಸ್ಯೆಗಳು ಉದ್ಭವವಾಗುತ್ತವೆ. ಈ ಬಗ್ಗೆ ಸಂಬಂಧಪಟ್ಟವರಿಗೆ ಯಾವ ರೀತಿಯ ಕಾಳಜಿಯೂ ಇಲ್ಲದಿರುವುದು ಮತ್ತು ಈ ನಿಟ್ಟಿನಲ್ಲಿ ಉಂಟಾಗಿರುವ ಸಮಸ್ಯೆಗಳಿಗೆ ಪರಿಹಾರಗಳ ಬಗ್ಗೆ ಯಾರೂ ಚಿಂತಿಸದೇ ಇರುವುದು ವಿಷಾದನೀಯ.

ನಾನು ಗುಲಬರ್ಗಾ ವಿಶ್ವವಿದ್ಯಾನಿಲಯದ ಉಪ ಕುಲಪತಿಯಾಗಿ ಅಧಿಕಾರ ವಹಿಸಿಕೊಂಡ ಕೂಡಲೇ ಕನ್ನಡ ಭಾಷಾ ಮಾಧ್ಯಮದಿಂದ ಬಂದ ವಿದ್ಯಾರ್ಥಿಗಳಿಗೆ ಉಚ್ಚ ಶಿಕ್ಷಣದ ವ್ಯಾಸಂಗಕ್ಕೆ ಅವಶ್ಯಕವೆನಿಸಿದ ಮತ್ತು ವ್ಯಾವಹಾರಿಕವಾಗಿ ನೆರವಾಗಬಲ್ಲ ಸರಳವಾದ ಮತ್ತು ಪ್ರಾಥಮಿಕ ಇಂಗ್ಲಿಷ್ ಕೋರ್ಸನ್ನು ಪ್ರಾರಂಭಿಸಿದ್ದು ಈ ಬೃಹತ್ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ಒಂದು ಪುಟ್ಟ ಹೆಜ್ಜೆ ಮಾತ್ರ. ಇದರಿಂದಾಗಿ ಅಲ್ಪಸ್ವಲ್ಪ ಪರಿಹಾರ ದೊರಕಿಲ್ಲದೇ ಇಲ್ಲ. ಪದವಿಪೂರ್ವ ಮಟ್ಟದಲ್ಲಿಯೇ, ಅಂದರೆ, ಪಿ.ಯು.ಸಿ. ಮಟ್ಟದಲ್ಲಿಯೇ, ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಪಠ್ಯಕ್ರಮದ ಭಾಗವನ್ನಾಗಿ ಮಾಡಿದರೆ ಮಾತ್ರ ಸಮಸ್ಯೆ ಬಹುಮಟ್ಟಿಗೆ ಸುಧಾರಿಸುತ್ತದೆ. ಜಾಗತೀಕರಣ ಭರದಿಂದ ಸಾಗುತ್ತಿರುವ ಇಂದಿನ ದಿನಗಳಲ್ಲಿ ಇಂಗ್ಲಿಷ್ ಭಾಷೆಯ ಬಳಕೆ ಅನಿವಾರ್ಯವೆನಿಸುತ್ತದೆ. ದಿನನಿತ್ಯದ ವಿದ್ಯಮಾನಗಳ ಬಗೆಗಿನ ಅರಿವು — ಜ್ಞಾನ ಗಳಿಸುವುದು ಹಾಗಿರಲಿ, ಪದವೀಧರರಾಗಿ ನೌಕರಿ ಅರಸಿ ಹೊರಗೆ ಹೆಜ್ಜೆ ಇಟ್ಟಾಗ ಇಂಗ್ಲಿಷ್ ಭಾಷೆಯನ್ನು ಸಾಕಷ್ಟು ಬಲ್ಲದವರ ಪರಿ, ಅವರು ಎದುರಿಸಬೇಕಾದ ಸಮಸ್ಯೆಗಳು ಅಪಾರ.

ವಿಶ್ವವಿದ್ಯಾನಿಲಯಗಳು ತಮ್ಮ ಸರ್ವಾಂಗೀಣ ಪ್ರಗತಿ ಸಾಧಿಸುವ ನಿಟ್ಟಿನಲ್ಲಿ ಇನ್ನೊಂದು ಅಡಚಣೆ ಎದುರಿಸಬೇಕಾಗುತ್ತದೆ. ಈಗಿರುವಂತೆ, ಅಲ್ಲಿನ ಇಡೀ ವ್ಯವಸ್ಥೆ ಬೇರೆ ಬೇರೆ ವಿಭಾಗಗಳಾಗಿ ವಿಂಗಡಣೆ ಹೊಂದಿ ಅವುಗಳ ಮಧ್ಯೆಯೇ ಒಂದು ರೀತಿಯ ಪ್ರತ್ಯೇಕತೆ ಉಂಟಾಗಿರುತ್ತದೆ. ಇವುಗಳ ಮಧ್ಯೆ ಪರಸ್ಪರ ಹೊಂದಾಣಿಕೆ ಮೂಡಿ ಬರಬೇಕಾದ್ದು ಸಂಸ್ಥೆಗಳ ಒಟ್ಟಾರೆ ಬೆಳವಣಿಗೆಗೆ ಅತ್ಯಗತ್ಯ. ಈ ಪ್ರಕ್ರಿಯೆಯಿಂದ ನೇರವಾಗಿ ದೊರಕುವ ಫಲವೆಂದರೆ ವಸ್ತುನಿಷ್ಠ ಪರಿಕಲ್ಪನೆಗಳು ಹಾಗೂ ಸೃಜನಶೀಲತೆ. ಯಾವುದೋ ಒಂದು ವಿಷಯದ ಅಧ್ಯಯನಕ್ಕೆ ಅನವಶ್ಯಕವಾಗಿ ಒತ್ತುಕೊಡುವ ಕ್ರಿಯೆಯಿಂದ ಉಂಟಾಗುವ ನಕಾರಾತ್ಮಕ ಅಂಶಗಳನ್ನು ಇಲ್ಲಿ ನಿವಾರಿಸಿಕೊಳ್ಳಬಹುದು. ಎಂದರೆ, ವಿಶೇಷ ಅಧ್ಯಯನದ (ಮೇಜರ್) ಜೊತೆಗೆ ಇತರ ವಿಷಯಗಳನ್ನು (ಮೈನರ್) ಅಭ್ಯಸಿಸುವ ಕ್ರಮ ರೂಢಿಗೆ ಬಂದರೆ ವಿದ್ಯಾರ್ಥಿಯ ವ್ಯಕ್ತಿತ್ವದ ವಿಕಾಸಕ್ಕೆ ಅನುಕೂಲ. ಇದನ್ನೇ ಭಾಷೆಗಳ ಅಧ್ಯಯನದಲ್ಲೂ ಅನುಷ್ಠಾನಕ್ಕೆ ತರುವುದು ಸೂಕ್ತ. ಉದಾಹರಣೆಗೆ, ಕನ್ನಡ ಎಂ. ಎ. ಓದುತ್ತಿರುವ ಒಬ್ಬ ವಿದ್ಯಾರ್ಥಿಯು ತನ್ನ ಇಚ್ಛೆಗನುಸಾರವಾಗಿ ಬೇರೆರಡು ಭಾಷೆಗಳನ್ನು (ಇಂಗ್ಲಿಷ್, ಹಿಂದಿ ಅಥವಾ ಸಂಸ್ಕೃತ) ಆರಿಸಿಕೊಳ್ಳಬಹುದು. ಎಂ.ಫಿಲ್. ಮತ್ತು ಪಿಎಚ್.ಡಿ. ಪೂರ್ವ ತರಗತಿಗಳಲ್ಲಿಯೂ ಕೂಡ ಈ ಕ್ರಮವನ್ನು ಆಚರಣೆಗೆ ತರಬೇಕಾಗಿದೆ. ಇದಕ್ಕನುಸಾರವಾಗಿ ತಮ್ಮ ಪಠ್ಯಕ್ರಮದಲ್ಲಿ ಸೂಕ್ತ ಬದಲಾವಣೆಗಳನ್ನು ವಿಶ್ವವಿದ್ಯಾನಿಲಯಗಳು ಮಾಡಿಕೊಳ್ಳಬೇಕಾಗಿದೆ.

ವೈಜ್ಞಾನಿಕ ಅಥವಾ ವಿಶ್ಲೇಷಣಾ ಮನೋಭಾವದಿಂದ ಮಾತ್ರವೇ ಜ್ಞಾನ ವೃದ್ಧಿಯಾಗಲಾರದೆಂದು ನನ್ನ ಅನಿಸಿಕೆ. ಕೇವಲ ಓದಿನಿಂದ, ಪುಸ್ತಕಗಳಿಂದ ಪಡೆದ ತಿಳಿವಳಿಕೆಗೂ ಜೀವನಾನುಭವದಿಂದ ಪಡೆದ, ಸಮಗ್ರ ದೃಷ್ಟಿಯಿಂದ ಪಡೆದ ತಿಳಿವು — ಲೌಕಿಕ ಜ್ಞಾನಕ್ಕೂ ವ್ಯತ್ಯಾಸವಿದೆ. ಅರ್ಥಪೂರ್ಣ ಬದುಕಿಗೆ ಈ ಸಮಷ್ಟಿ ಜೀವನದೃಷ್ಟಿ ಬೇಕಾಗುತ್ತದೆ. ತತ್ವಶಾಸ್ತ್ರದ (Philosophy) ಆಳವಾದ ಅಧ್ಯಯನ, ಒಳನೋಟ ಈ ನಿಟ್ಟಿನಲ್ಲಿ ಸಹಾಯಕ. ಇದು ಎಲ್ಲ ಸಮಾಜಗಳಿಗೂ ಸಮಾಜ ಜೀವಿಗಳಿಗೂ ಅನ್ವಯಿಸುವ ಮಾತು. ಆದರೆ ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ತತ್ವಶಾಸ್ತ್ರದ ಅಧ್ಯಯನ ಎಲ್ಲೋ ಮೂಲೆಗುಂಪಾಗಿ ಕೂತಿದೆ. ತತ್ವಶಾಸ್ತ್ರವನ್ನೇ ವಿಶೇಷ ಅಧ್ಯಯನಕ್ಕಾಗಿ ಆರಿಸಿಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ತೀರ ಕಡಿಮೆ ಎಂಬುದೇನೋ ನಿಜ. ವಿದ್ಯಾರ್ಥಿಗಳು ಮಿಕ್ಕೆಲ್ಲ ವಿಷಯಗಳನ್ನೂ ಅಲಕ್ಷಿಸಿ ತತ್ವಶಾಸ್ತ್ರವೊಂದನ್ನೇ ಓದಬೇಕೆಂದು ನಾನು ಹೇಳುತ್ತಿಲ್ಲ.

*(೪೫ನೇ ಪುಟದಲ್ಲಿ ಮುಂದುವರೆದಿದೆ)*

# ಎ. ಎನ್. ಮೂರ್ತಿರಾಯರ ಅನುಭವ ಕಥನಗಳು

ಎ. ಚಂದ್ರಶೇಖರ ನಂಗಲಿ

ಲೇಖಕನೊಬ್ಬ ದೇಶ ಕಾಲ ವಿಶಿಷ್ಟವಾದ ಸಮಕಾಲೀನ ಅನುಭವಗಳನ್ನು ಅಭಿವ್ಯಕ್ತಿಗಾಗಿ ಆಯ್ದುಕೊಂಡಾಗ - ಸಾಹಿತ್ಯ ಕ್ಷೇತ್ರದ ಅನನ್ಯತೆಯನ್ನು ಹೇಗೆ ಉಳಿಸಿಕೊಳ್ಳುವುದು ? ಎಂಬ ಚಿಂತನೆ ನಮ್ಮಲ್ಲಿ ಸಾಕಷ್ಟು ನಡೆದಿದೆ. ಇಂಥ ಸಂದರ್ಭಗಳಲ್ಲಿ ''ಘಟನೆಗಳ ವಿನ್ಯಾಸ ಹೊರಚೆಲ್ಲುವ ವಿಚಾರವನ್ನು ವ್ಯಕ್ತಿಯ ಮಟ್ಟದಲ್ಲಿ ಉಳಿಸದೆ ಸಾಧಾರಣೀಕರಿಸಬೇಕು'' - ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಘಟನೆಗಳನ್ನು 'ವ್ಯಕ್ತಿನಿಷ್ಠ' ಅನುಭವಗಳೆನ್ನುವುದಾದರೆ ಇವುಗಳ ವಿನ್ಯಾಸ ಹೊರಚೆಲ್ಲುವ ವಿಚಾರ 'ವಸ್ತುನಿಷ್ಠ' ನಿರೂಪಣೆಯಾಗಿರಬೇಕು. ಅಂದರೆ, 'ಅನುಭವ ಗ್ರಹಣ'ದಲ್ಲಿ ವ್ಯಕ್ತಿನಿಷ್ಠತೆಯನ್ನು ರೂಪಿಸಿಕೊಳ್ಳುವ ಲೇಖಕನೊಬ್ಬ 'ನಿರೂಪಣಾ ಕ್ರಮ'ದಲ್ಲಿ ವಸ್ತುನಿಷ್ಠತೆಯನ್ನು ಸಾಧಿಸಬೇಕಾಗುತ್ತದೆ. ಮುಂದುವರಿದು ಜೀವನದ ವ್ಯಕ್ತಿಗತ ಅನುಭವಗಳನ್ನು ವ್ಯಕ್ತಿಯ ಮಟ್ಟದಲ್ಲಿ ಉಳಿಸದೆ ಸಾಧಾರಣಗೊಳಿಸುವ ಪರಿಯನ್ನು ಸಾಹಿತ್ಯ ಕ್ಷೇತ್ರದ ಅನನ್ಯತೆಯೆಂದು ಒಪ್ಪಿಕೊಳ್ಳಬಹುದು.

ಪ್ರಸ್ತುತ ಶ್ರೀ ಎ. ಎನ್. ಮೂರ್ತಿರಾಯರ ಮೂರು ಕೃತಿಗಳನ್ನು ಈ ನೆಲೆಯಲ್ಲಿ ಪರಿಶೀಲಿಸುವುದು ಈ ಲೇಖನದ ಉದ್ದೇಶ. ಪರಿಶೀಲನೆಗೆ ಆರಿಸಿಕೊಂಡ ಕೃತಿಗಳು *ಅ) ಚಿತ್ರಗಳು-ಪತ್ರಗಳು, ಆ) ಅಪರ ವಯಸ್ಕನ ಅಮೆರಿಕಾ ಯಾತ್ರೆ* ಮತ್ತು *ಇ) ಸಂಜೆಗಣ್ಣಿನ ಹಿನ್ನೋಟ.* – ಈ ಕೃತಿಗಳು ಮೂಲತಃ 'ವ್ಯಕ್ತಿನಿಷ್ಠತೆ'ಯ ನೆಲೆಯಲ್ಲಿ ಮೂಡಿ ಬಂದಿದ್ದರೂ ತಮ್ಮದೇ ಆದ ಅಭಿವ್ಯಕ್ತಿ ಕ್ರಮ, ನಿರೂಪಣಾ ಶೈಲಿ ಮತ್ತು ವಿಶಿಷ್ಟ ರಚನಾತಂತ್ರದ ಮೂಲಕ ಶ್ರೀ ಮೂರ್ತಿರಾಯರು ಸಾಹಿತ್ಯದ ಈ ಅನನ್ಯತೆಯನ್ನು ಸಾಧಿಸಿರುವ ಹಲವಾರು ಅಂಶಗಳನ್ನು ಒಳಗೊಂಡಿವೆ ಹಾಗೂ ಏಕಕಾಲಿಕ ನೆಲೆಯಲ್ಲಿ 'ವ್ಯಕ್ತಿನಿಷ್ಠತೆ' ಮತ್ತು 'ವಸ್ತುನಿಷ್ಠತೆ'ಗಳ ಮೇಳವನ್ನು ಸಾಧಿಸುವುದರ ಮೂಲಕ ಈ ಬರಹಗಳು ಕೇವಲ ವರದಿ, ದಿನಚರಿ ಅಥವಾ ಚರಿತ್ರೆಯ ಟಿಪ್ಪಣಿಗಳಾಗಿ ಉಳಿಯದೆ, ಮೌಲಿಕ ಕೃತಿಗಳಾಗುತ್ತವೆ.

'ಚರಿತ್ರೆ' ಅಥವಾ 'ಇತಿಹಾಸ'ದಲ್ಲಿ ಮೇಲುನೋಟಕ್ಕೆ ಗಮನಿಸಬೇಕಾದ ಅಂಶವೆಂದರೆ 'ಕಾಲಾನುಕ್ರಮಣಿಕೆ'. ಸಾಹಿತಿಯೊಬ್ಬ ಉದ್ದೇಶಪೂರ್ವಕವಾಗಿ ಈ ಕಾಲಾನುಕ್ರಮಣಿಕೆಯನ್ನು ಕುಟ್ಟಿ ಕೆಡಹುತ್ತಾನೆ. ಆದ್ದರಿಂದಲೇ ಸಾಹಿತ್ಯ ಕೃತಿಯೊಂದರಲ್ಲಿ 'ವಸ್ತು'ವಿನ (ಅದು ಪೌರಾಣಿಕ, ಐತಿಹಾಸಿಕ ಅಥವಾ ಸಮಕಾಲೀನ ಯಾವುದಾದರೂ ಆಗಿರಬಹುದು) ದೇಶ ಕಾಲಗಳ ಆಯಾಮ ತೀರ ಪಾರದರ್ಶಕವಾಗಿರುತ್ತದೆ. ಅಂದರೆ, ಸಾಹಿತ್ಯ ಕೃತಿಯೊಂದರ ವಿಭಾವಗಳ ಮೂಲಕ ವಿವಿಧ ಕಾಲದೇಶಗಳಲ್ಲಿ ವಿವಿಧ ಸಹೃದಯ ಸಮುದಾಯದಿಂದ ನಿತ್ಯ ನೂತನವಾದ ಗ್ರಹಿಕೆ ಮತ್ತು ಒಳನೋಟಗಳು ಅನಾವರಣಗೊಳ್ಳುತ್ತಿರುತ್ತವೆ. ಇದು ಸಾಧ್ಯವಾಗುವುದು ವಸ್ತುವನ್ನು 'ಪ್ರಕ್ರಿಯಾತ್ಮಕ' ಗೊಳಿಸುವ ಸಾಹಿತಿಯ ವಿಶಿಷ್ಟ ಪ್ರತಿಭೆಯಿಂದ ಎಂಬುದನ್ನು ನೆನಪಿನಲ್ಲಿಡಬೇಕು. ರೋಮನ್ ಪುರಾಣ ಜಗತ್ತಿನ ಹಿಮ್ಮುಖ - ಮುಮ್ಮುಖಗಳನ್ನುಳ್ಳ ಜೇನಸ್‌ನೊಂದಿಗೆ ತಮ್ಮನ್ನು ತಾವೇ ಹೋಲಿಸಿಕೊಳ್ಳುವ

***ಇದೇ ಜೂನ್ ೧೬ಕ್ಕೆ ಪ್ರೊಫೆಸರ್ ಎ. ಎನ್. ಮೂರ್ತಿರಾಯರು ೧೦೨ನೆಯ ವರ್ಷಕ್ಕೆ ಕಾಲಿಟ್ಟರು. ಈ ಶತಾಯುಷಿಗೆ 'ಹೊಸತು' ಶುಭವನ್ನು ಕೋರುತ್ತಾ ಅವರ ಜೀವನವನ್ನು ಮೆಲುಕುಹಾಕುವ ಮೂರು ಕೃತಿಗಳ ಬಗೆಗಿನ ಒಂದು ಪ್ರಬಂಧವನ್ನು ಪ್ರಕಟಿಸುತ್ತಿದೆ. ಒಂದು ವಿಚಾರಗೋಷ್ಠಿಯಲ್ಲಿ ಮಂಡಿಸಲಾಗಿದ್ದ ಪ್ರಬಂಧದ ಸಂಕ್ಷಿಪ್ತ ರೂಪ ಇದು.***

ಮೂರ್ತಿರಾಯರು ಕಾಲಾನುಕ್ರಮಣಿಕೆಯ ಬಗ್ಗೆ ತಮ್ಮ ನಿಲುವೇನೆಂಬುದನ್ನು ಸ್ಪಷ್ಟಪಡಿಸಿದ್ದಾರೆ:

''ನಾನು ಕಾಲಾನುಕ್ರಮವನ್ನು ಅಷ್ಟೇನೂ ಕಟ್ಟುನಿಟ್ಟಾಗಿ ಪಾಲಿಸಿಲ್ಲ. ನೆನಪು ಹಿಂದಕ್ಕೂ ಮುಂದಕ್ಕೂ ಓಲಾಡುತ್ತಲೇ ಬಂದಿದೆ.'' (ಪು. ೪೪೮)

ಕಾಲಾನುಕ್ರಮಣಿಕೆಯನ್ನು ಮುರಿದು ಅನುಭವ ಸಮಷ್ಟಿಯನ್ನು ಒಂದು ಏಕಸೂತ್ರದಲ್ಲಿ ಬಂಧಿಸುವ, ಪುನರ್ ಸಂಯೋಜಿಸುವ ಮೂರ್ತಿರಾಯರ ನಿರೂಪಣಾ ಕ್ರಮವನ್ನು ವರ್ಡ್ಸ್‌ವರ್ತ್ ಹೇಳುವ - Emotion recollected in tranquility ಎಂಬುದಕ್ಕೆ ಹೋಲಿಸಬಹುದು. ಇದನ್ನು ಸ್ವತಃ ಮೂರ್ತಿರಾಯರೇ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ (*ಅಪರ ವಯಸ್ಕನ ಅಮೆರಿಕಾ ಯಾತ್ರೆ*, ಪು. ೨೯).

ಇದರಿಂದಾಗಿಯೇ ಮೂರ್ತಿರಾಯರ ಗದ್ಯಕ್ಕೆ ಸೃಜನಶೀಲತೆಯ ಛಾಪು, ಕಾವ್ಯಾತ್ಮಕ ಗುಣಗಳು ಮೂಡಿ ಬಂದಿವೆ. ''ಪ್ರತಿದಿನವೂ ಕಾಮನ್ ರೂಮಿನಲ್ಲಿ ನಡೆಯುತ್ತಿದ್ದ ಹರಟೆ - ಚರ್ಚೆ - ವ್ಯಾಖ್ಯಾನ - ಚೇಷ್ಟೆಗಳ ದಿನಚರಿಯನ್ನು ಬರೆದಿಡಲಿಲ್ಲ ಎಂದು ಈಗ ವ್ಯಸನ ಪಡುತ್ತಿದ್ದೇನೆ. ಬರೆದಿದ್ದರೆ ಅದೊಂದು ಸುಂದರ ಕಾವ್ಯ - ಇಡೀ ಕಾಮನ್ ರೂಮು ಬರೆದ ಕಾವ್ಯ - ಆಗುತ್ತಿತ್ತು''



(*ಸಂಜೆ..... ಪು. ೨೪೧*) ಎನ್ನುವ ಮೂರ್ತಿರಾಯರು ತಮ್ಮ 'ಗದ್ಯ'ವನ್ನು 'ಕಾವ್ಯ' ಎಂದೇ ಭಾವಿಸಿದ್ದಾರೆ.

ಅಪಕ್ವಚಿತ್ತರಲ್ಲಿ ಆತ್ಮರತಿಯಾಗಿಯೋ ಅಥವಾ ಸಿನಿಕತನವಾಗಿಯೋ ಪರಿಣಮಿಸಿಬಿಡುವ 'ವ್ಯಕ್ತಿನಿಷ್ಠತೆ' ಮೂರ್ತಿರಾಯರ ಸಂಜೆಗಣ್ಣಿನಲ್ಲಿ 'ವಸ್ತುನಿಷ್ಠ' ವಿನ್ಯಾಸವಾಗುವ ಬಗೆ ಅಭ್ಯಾಸಯೋಗ್ಯವಾಗಿದೆ.

ಈ ಸಂದರ್ಭದಲ್ಲಿ ಮೂರ್ತಿರಾಯರೇ ಹೇಳುವ ಮಾತುಗಳು ಗಮನಾರ್ಹ !

### I. ಬದುಕಿನ ಗತಿಶೀಲತೆಯ ಚಿತ್ರಣ

''ವೃದ್ಧಾಪ್ಯದಲ್ಲಿ ಕಿರಿಯರ ಸ್ನೇಹ ಲಭಿಸುವುದು ಕಷ್ಟ. ಲಭಿಸಿದರೆ ಅದು ನಮಗೆ ಆರೋಗ್ಯಕರ. ನಮ್ಮಂತೆ ವೃದ್ಧರಾದವರೊಡನೆಯೇ ಬೆರೆಯುತ್ತಿದ್ದರೆ – ಆಡಿದ ಮಾತನ್ನೇ ಆಡಿ, ಹಿಂದೆ ಮೆಚ್ಚಿದ್ದನ್ನೇ ಮತ್ತೆ ಮೆಚ್ಚಿ, ಹಿಂದೆ ಬಂದ ತೀರ್ಮಾನಗಳಿಗೆ ಮತ್ತೆ ಬಂದು, ನಾವು ಪಾಚಿಗಟ್ಟಿ ನಿಂತ ನೀರಿನಂತಾಗಬಹುದು'' (*ಸಂಜೆಗಣ್ಣಿನ ಹಿನ್ನೋಟ*, ಪು. ೨೯೦).

ಇಂತಹ ಮನೋಧರ್ಮ ಉಳ್ಳವರಿಗೆ ಮಾತ್ರ ಬದುಕಿನಲ್ಲಿ ಯಾವುದು ಸ್ಥಾವರ ? ಯಾವುದು ಜಂಗಮ ? ಎಂಬ ಒಳನೋಟಗಳು ಲಭ್ಯವಾಗುತ್ತವೆ. ಸ್ಥಾವರವಾದ ಆಲೋಚನೆಗಳು, ಜಡ್ಡುಗಟ್ಟಿದ ನಂಬಿಕೆಗಳು, ಪಾಚಿಗಟ್ಟಿದ ಆಚರಣೆಗಳು- ಇವುಗಳಿಂದ ನಮ್ಮನ್ನು ನಾವು ಬಿಡಿಸಿಕೊಂಡು ಬದುಕಿನ ಚಲನಶೀಲತೆಯ ಕಡೆ ಸಾಗುವುದೆಂದರೆ ಕತ್ತಲೆಯಿಂದ ಬೆಳಕಿನೆಡೆಗೆ ಪ್ರಯಾಣ ಹೊರಟಂತೆ ! ಮೂರ್ತಿರಾಯರ 'ಆತ್ಮಕಥೆ' ಸಂಜೆಗಣ್ಣಿನ ಹಿನ್ನೋಟದಲ್ಲಿ ಮುಖ್ಯವಾಗಿ ನಾವು ಗುರುತಿಸಬೇಕಾದ ಅಂಶವೆಂದರೆ ಬದುಕಿನ ಗತಿಶೀಲತೆಯ ಗ್ರಹಿಕೆ. ಬಾಳಿನ ಬೇರೆ ಬೇರೆ ಸಂದರ್ಭಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಬಗೆಬಗೆಯ ಅವಸ್ಥೆಗಳಲ್ಲಿ ಉನ್ನತವಾದ ಮಾನವೀಯ ಮೌಲ್ಯಗಳ ಶೋಧನೆ ನಡೆಸುತ್ತಾ ಗುಣಾತ್ಮಕ ಅಂಶಗಳನ್ನು ಎತ್ತಿಹಿಡಿಯುವ ಕ್ರಮದಲ್ಲಿ ಸಹಜವಾಗಿಯೇ - ಬದುಕಿನ ಗತಿಶೀಲತೆಯ ಒಳನೋಟಗಳು ಅನಾವರಣಗೊಂಡುಬಿಡುತ್ತವೆ.

ನಾನು ದ್ವಿಜತ್ವವನ್ನು ಪಡೆದ ಬಗೆ – ಎಂಬ ಅಧ್ಯಾಯದ ಆರಂಭದಲ್ಲಿ ಮೂರ್ತಿರಾಯರು ತಮಗೆ ಉಪನಯನವಾದ ಸಂದರ್ಭವನ್ನು ವಿವರಿಸುತ್ತಾ - ''ಮುಂಜಿಯಾದ ದಿನದಿಂದ ನಾನು ಥಿಯರಿಯ ಪ್ರಕಾರ ದ್ವಿಜನಾದೆ'' ಎನ್ನುತ್ತಾರೆ. ಏಕೆಂದರೆ ಬದುಕಿನಲ್ಲಿ ಅವರು ಬ್ರಾಹ್ಮಣ ಧರ್ಮದ ಕನಿಷ್ಠತಮ ಕರ್ತವ್ಯಗಳಾವುದನ್ನೂ ಪಾಲಿಸಲಿಲ್ಲ. ಆದ್ದರಿಂದ ''ನಾನು ದ್ವಿಜನಾಗಿ ಉಳಿದದ್ದು ಹುಟ್ಟು, ಜುಟ್ಟು ಇವೆರಡರಿಂದ ಮಾತ್ರ'' ಎನ್ನುತ್ತಾರೆ. ಈ ಭಾಗದಲ್ಲಿ 'ದ್ವಿಜತ್ವ'ದ ವಿವರಣೆ ಬಾಹ್ಯ ಲಕ್ಷಣ ಬದ್ಧವಾದುದಷ್ಟೆ ಅಲ್ಲ! ಸ್ಥಾವರವಾದ ನೆಲೆಯಿಂದ ಮೂಡಿದ್ದಾಗಿದೆ. ಇದೇ ಅಧ್ಯಾಯದ ಕೊನೆಯಲ್ಲಿ ಮೂರ್ತಿರಾಯರು ಮತ್ತೆ 'ದ್ವಿಜತ್ವ'ದ ಬಗ್ಗೆ ಮಾತಾಡುತ್ತಾರೆ:

''ನಾನು ಕಾಲೇಜಿಗೆ ಸೇರಿ ನೀತಿಶಾಸ್ತ್ರ, ರಾಜ್ಯಶಾಸ್ತ್ರ ಇತ್ಯಾದಿಗಳ ಅಧ್ಯಯನವನ್ನು ಆರಂಭಿಸಿದ್ದರಿಂದ ನಿಜವಾಗಿ ವೇದಾಧ್ಯಯನಗಳನ್ನು ಆರಂಭಿಸಿದಂತಾಯಿತು: ನನಗೆ 'ದ್ವಿಜತ್ವ' ಸಿದ್ಧಿಸಿದಂತಾಯಿತು. ಈ 'ದ್ವಿಜತ್ವ' ಜಾತಿ

ಮತಗಳ ಕಟ್ಟಿಲ್ಲದೆ ಎಲ್ಲರಿಗೂ ಸಿದ್ಧಿಸಬಹುದಾದದ್ದು'' (ಸಂಜೆಗಣ್ಣಿನ ಹಿನ್ನೋಟ, ಪು. ೧೪೬).

ಚರಿತ್ರೆಯ ಗತಿಯಲ್ಲಿ ಸ್ಥಾವರವಾಗಿ ಬೇರೂರಿದ್ದ, ಬಾಹ್ಯ ಲಕ್ಷಣಬದ್ಧವಾದ 'ದ್ವಿಜತ್ವ'ದ ಕಲ್ಪನೆಯನ್ನು ಮೂರ್ತಿರಾಯರು 'ನಿಸ್ಸೀಮ' ನೆಲೆಯಲ್ಲಿಟ್ಟು ವ್ಯಾಖ್ಯಾನಿಸುವುದರ ಮೂಲಕ ಬದುಕಿನ ಗತಿಶೀಲತೆಯ ಕಡೆ ಮುಖ ಮಾಡಿದ್ದಾರೆ.

ಆಗಿನ ನಾಟಕಗಳು - ಎಂಬ ಅಧ್ಯಾಯದಲ್ಲಿ ಮೂರ್ತಿರಾಯರು ಅಂದಿನ ಕಂಪೆನಿ ನಾಟಕಗಳ ಬಗ್ಗೆ ಉಪಯುಕ್ತವಾದ ಅನೇಕ ಮಾಹಿತಿಗಳನ್ನೊದಗಿಸಿದ್ದಾರೆ. ವರದಾಚಾರ್ಯರು ತಾವು ವಹಿಸುತ್ತಿದ್ದ ಹಿರಣ್ಯಕಶಿಪುವಿನ ಪಾತ್ರದಲ್ಲಿ ಮಾಡಿಕೊಂಡ ಬದಲಾವಣೆಯೊಂದನ್ನು ಮೆಚ್ಚಿಕೊಳ್ಳುವ ಮೂರ್ತಿರಾಯರು ''ಹಿಂದೆ ಆಚಾರ್ಯರಿಗೆ ಹಿರಣ್ಯಕಶಿಪುವಿನ ಪಾತ್ರ ಪೂರ್ತಿ ಅರ್ಥವಾಗಿರಲಿಲ್ಲ. ಅವನ ದರ್ಪ, ಅಹಂಕಾರ, ಅಂಧಶ್ರದ್ಧೆಗಳಿಂದ ಮುಚ್ಚಿಹೋಗಿದ್ದ ಮಾನವತೆಯ ಅರಿವು ಆಚಾರ್ಯರಲ್ಲಿ ಅವತ್ತು ಜಾಗ್ರತವಾಯಿತು. ಹಿರಣ್ಯಕಶಿಪುವಿನ ಪಾತ್ರದ ಸೃಷ್ಟಿ ಅಂದು ಪೂರ್ಣವಾಯಿತು'' (ಪು. ೮೬) ಎಂದಿದ್ದಾರೆ. ಇಲ್ಲಿ ಮೂರ್ತಿರಾಯರು ಕಂಪೆನಿ ನಾಟಕಗಳ 'ಚರ್ವಿತ ಚರ್ವಣ' ಎನ್ನಬಹುದಾದ ಪ್ರಯೋಗಗಳಲ್ಲೂ ಪ್ರಕಟಗೊಳ್ಳಬಹುದಾದ ಉತ್ತಮಾಂಶಗಳನ್ನು ಗುರುತಿಸಿದ್ದಾರೆ. ಹಾಗೆಯೇ ನಮ್ಮ ಕಂಪೆನಿ ನಾಟಕಗಳಲ್ಲಿದ್ದ ಹಾಸ್ಯದ ಮಟ್ಟವೇ ಕೆಳದರ್ಜೆಯದಾಗಿತ್ತೆಂದು ಅಭಿಪ್ರಾಯಪಡುವ ಮೂರ್ತಿರಾಯರು ಇದಕ್ಕೆ ವಿನಾಯಿತಿಯಾಗಿ ಗುಬ್ಬಿ ಕಂಪೆನಿಯ 'ಸಾಹುಕಾರ' ಮತ್ತು ಹಿರಣ್ಣಯ್ಯ ಮಂಡಲಿಯ 'ಲಂಚಾವತಾರ' ನಾಟಕಗಳನ್ನು ಹೆಸರಿಸಿದ್ದಾರೆ. ಇವೆರಡು ನಾಟಕಗಳಲ್ಲಿನ ಹಾಸ್ಯ ಕಳೆಗಟ್ಟುವುದಕ್ಕೆ ಸ್ವಾಭಾವಿಕ ಎನ್ನಿಸುವುದಕ್ಕೆ ಕಾರಣ ಕೈಲಾಸಂ ಹಾಕಿಕೊಟ್ಟಿದ್ದ ಸಂಪ್ರದಾಯವೆಂದು ಮೂರ್ತಿರಾಯರು ಅಭಿಪ್ರಾಯಪಟ್ಟಿದ್ದಾರೆ. ಕೈಲಾಸಂರವರು ವಾಸ್ತವಿಕ ಜೀವನದಿಂದ ಹಾಸ್ಯ ಸ್ವಾಭಾವಿಕವಾಗಿ ಉದ್ಭವಿಸಬಹುದು ಎಂಬುದನ್ನು ತೋರಿಸಿಕೊಟ್ಟ ಮೇಲೆ ಇವೆರಡು ನಾಟಕಗಳು ಬಂದದ್ದು ಎಂದು ಗುರುತಿಸಿರುವ ಮೂರ್ತಿರಾಯರು ತನ್ಮೂಲಕ ಕನ್ನಡ ನಾಟಕ ಚರಿತ್ರೆಯಲ್ಲಿ ಚಲನಶೀಲವಾದ ಆಯಾಮ ಯಾವುದೆಂಬುದನ್ನೂ, ಇದರಿಂದ ಪ್ರಯೋಜನ ಪಡೆದ ಕಂಪೆನಿ ನಾಟಕಗಳ ಪ್ರಯೋಗಗಳನ್ನೂ ಇಂದಿನ ತಲೆಮಾರಿಗೆ ತಿಳಿಸಿಕೊಟ್ಟಿದ್ದಾರೆ.

ಬದುಕಿನ ಗತಿಶೀಲತೆಯ ಆಯಾಮಗಳನ್ನು ಗ್ರಹಿಸುವಲ್ಲಿ ಮೂರ್ತಿರಾಯರ ಗಮನ ಎಷ್ಟು ವೈವಿಧ್ಯಮಯವಾಗಿ ಸಾಗುತ್ತದೆಯೆಂಬುದಕ್ಕೆ ಮತ್ತೊಂದು ನಿದರ್ಶನವನ್ನೊದಗಿಸಬಹುದು:

ತಂದೆಯ ಮರಣದ ನಂತರ ದೊಡ್ಡ ಕುಟುಂಬದ ಹೊರೆ ಹೊತ್ತ ಮೂರ್ತಿರಾಯರು ತಾವು ಅನಿವಾರ್ಯವಾಗಿ 'ಯಜಮಾನ' ಪಟ್ಟವನ್ನಲಂಕರಿಸಿದ ಸಂದರ್ಭವನ್ನು ವಿವರಿಸುತ್ತಾ – ''ಈ ಯಜಮಾನಿಕೆ ನಾನು ಬಯಸಿ ತಂದುಕೊಂಡದ್ದಲ್ಲ ... ನಾನು ಹಿರಿಯ ಮಗ. ಮನೆಯಲ್ಲಿ ಸಂಪಾದನೆ ಮಾಡುತ್ತಿದ್ದವನು ನಾನೊಬ್ಬನೇ – ಯಜಮಾನಿಕೆ ಮೆಟ್ಟಿಕೊಳ್ಳದೆ ಬಿಟ್ಟೀತೆ'' – ಎನ್ನುತ್ತಾರೆ. ಹೀಗೆ ಬಯಸದೆ ಬಂದ ಮರ್ಯಾದೆ ರಾಮಣ್ಣನ ಪಟ್ಟದಿಂದಾಗಿಯೇ ಮನೆಮಂದಿಗೆಲ್ಲ ದೂರವಾದೆನೆಂದು ಮುಜುಗರಪಟ್ಟುಕೊಳ್ಳುವ ಮೂರ್ತಿರಾಯರು ತಮ್ಮ ಸಾನ್ನಿಧ್ಯದಲ್ಲಿ ಮನೆಯಲ್ಲಿ ಇಲ್ಲವಾಗುತ್ತಿದ್ದ ಉಲ್ಲಾಸದ ಕ್ಷಣಗಳನ್ನು ನೆನೆಯುತ್ತಾರೆ. ಒಮ್ಮೆ ತಮ್ಮಷ್ಟಕ್ಕೆ ತಾವು ಗುಂಪಾಗಿ ಕುಳಿತು ಅಣಕವಾಡುತ್ತಾ ನಗುವಿನ ಅಲೆಗಳನ್ನೆಬ್ಬಿಸಿ ಹರ್ಷಿಸುತ್ತಿದ್ದ ಮನೆಮಂದಿಯೆಲ್ಲ 'ಯಜಮಾನ'ರಾದ ಮೂರ್ತಿರಾಯರು ಹೆಜ್ಜೆಯಿಡುತ್ತಿದ್ದಂತೆಯೇ ಗುಂಪೆಲ್ಲ ಚಲ್ಲಾಪಿಲ್ಲಿಯಾಗಿಬಿಡುವುದನ್ನು ಸ್ಮರಿಸಿಕೊಂಡು - ''ದೇವರಾಣೆ! ಈ ಶಿಕ್ಷೆಗೆ ಅರ್ಹನಾಗುವಂಥ ಯಾವ ಅಪರಾಧವನ್ನೂ ನಾನು ಮಾಡಿಲ್ಲ'' ಎನ್ನುತ್ತಾರೆ. ಎಲ್ಲ ಕಡೆಗಳಲ್ಲೂ ಸಮಾಜದ ವಿಕಾಸದಲ್ಲಿ ಅದೊಂದು ಹಂತ - ಎಂದು ಯಜಮಾನಿಕೆಯನ್ನು ವ್ಯಾಖ್ಯಾನಿಸುವ ಮೂರ್ತಿರಾಯರು ಈ ಯಜಮಾನಿಕೆಯ ಪಟ್ಟ-ಪ್ರತಿಷ್ಠೆಗಳು ಕಾಲಕ್ರಮೇಣ ಮುರಿದುಬಿದ್ದ ಬಗೆಯನ್ನು ಸೊಗಸಾಗಿ ನಿರೂಪಿಸಿದ್ದಾರೆ.

''ನನ್ನ ಮೊಮ್ಮಕ್ಕಳು ಬಂದಮೇಲೆ ಈ ಯಜಮಾನಿಕೆಯ ಭೂತಕ್ಕೆ ಮಂತ್ರ ಚಿಕಿತ್ಸೆ ನಡೆಯಿತು. ಎಳೆಯರು ನನ್ನ ಮೈಮೇಲೆಲ್ಲ ಹರಿದಾಡಿ, ಮೂಗು ಹಿಡಿದೆಳೆದು, ತಲೆಗೂದಲನ್ನು ಕೆದರಿ, ಕಿವಿಯಲ್ಲಿ ಶಿಳ್ಳೆ ಊದಿ, ನನ್ನನ್ನು ಕುದುರೆಯಾಗಿ ಮಾರ್ಪಡಿಸಿ ಸವಾರಿ ಮಾಡುತ್ತಿದ್ದರೆ ಯಜಮಾನಿಕೆ ಹೇಗೆ ಉಳಿದೀತು! ನನ್ನನ್ನು ಮೆಟ್ಟಿದ್ದ ಆ ದೆವ್ವವನ್ನು ಮೊಮ್ಮಕ್ಕಳು ತೊಲಗಿಸಿ ನನಗೆ ಸಂತೃಪ್ತಿ ಕೊಟ್ಟರು'' (ಪು. ೨೩೮).

ಈ ಭಾಗದಲ್ಲಿ ಮೂರ್ತಿರಾಯರು ಯಜಮಾನ ಪಟ್ಟದ ಪ್ರತಿಷ್ಠೆ ತತ್ಪರಿಣಾಮಗಳನ್ನು ವಿವರಿಸುತ್ತಿದ್ದಂತೆಯೇ - ಕಾಲಾನುಕ್ರಮಣಿಕೆಯನ್ನು ಮುರಿದು - ಯಜಮಾನಿಕೆ ಉರುಳಿಬಿದ್ದ ಬಗೆಯನ್ನು ನಿರೂಪಿಸಿದ್ದಾರೆ. ಹೀಗೆ, ಒಬ್ಬನೇ ವ್ಯಕ್ತಿಯ ವಿಭಿನ್ನ ಅವಸ್ಥೆಗಳನ್ನು ಒಗ್ಗೂಡಿಸುವುದರ ಮೂಲಕ ಆತನ ಬಾಳಿನ ಗುಣಾತ್ಮಕ ಅಂಶ ಯಾವುದೆಂಬುದನ್ನು ತೋರಿಸಿದ್ದಾರೆ. 'ಯಜಮಾನ' ಪಟ್ಟದಲ್ಲಿ ಬೀಗುತ್ತಾ ಮನೆಮಂದಿಗೆಲ್ಲ ದೂರವಾಗುವ ಬದಲು ಅದನ್ನು ಉರುಳಿಸಿ ಮಾನವತೆಯ ಸಾರ್ಥಕತೆಯನ್ನು ಅಪ್ಪಿಕೊಳ್ಳಬಹುದೆಂಬ ಗ್ರಹಿಕೆ ಇದರಿಂದ ಮೂಡಿಬರುತ್ತದೆ.

**II ದೇವರು, ಧರ್ಮ, ಮತಸಂಬಂಧವಾದ ಆಚರಣೆಗಳನ್ನು ಕುರಿತು**

''ಮತಧರ್ಮಕ್ಕೂ ದೇವರಿಗೂ ಸಂಬಂಧಪಟ್ಟ ಭಕ್ತಿಯ ಆವೇಶ, ಉನ್ಮಾದ, ಪರವಶತೆ - ಅದನ್ನು ಹೇಗಾದರೂ ಕರೆಯಿರಿ - ನನಗೆ ಅಂದಿನಿಂದ ಇಂದಿನವರೆಗೆ ಏನೇನು ಹಿಡಿಸದು'' *(ಸಂಜೆಗಣ್ಣಿನ ಹಿನ್ನೋಟ)*, ಎಂದು ಹೇಳಿರುವ ಮೂರ್ತಿರಾಯರು ತಮ್ಮ ಮಾವನಿಗೆ ಕೊಟ್ಟ ಮಾತಿನಂತೆ ವೇದಮಂತ್ರಗಳ ಪಠನ ಮಾಡುತ್ತಾ ಶಾಸ್ತ್ರೋಕ್ತವಾಗಿ ದೇವತಾರ್ಚನೆಯನ್ನು ಎಂಟು ತಿಂಗಳು ಮಾಡಿದ್ದನ್ನು ವಿವರಿಸಿದ್ದಾರೆ. ವೇದಮಂತ್ರ ಶ್ರವಣವನ್ನು ಇಂದಿಗೂ ಪ್ರಿಯವೆಂದೇ ಭಾವಿಸುವ ಮೂರ್ತಿರಾಯರು ದೇವತಾರ್ಚನೆಯನ್ನು ಕಾಲೇಜಿನ ಪಾಠ ಪ್ರವಚನ, ಸಂಗೀತಗಳಿಗೆ ಹೋಲಿಸುತ್ತಾ ಇವುಗಳಿಂದ ಲಭಿಸುವ ''ಆನಂದಕ್ಕಿಂತ ಹೆಚ್ಚಿನ ಆನಂದವೇನೂ ದೇವತಾರ್ಚನೆಯಿಂದ ಬರಲಿಲ್ಲ'' (ಪು. ೧೯೬) ಎನ್ನುತ್ತಾರೆ.

ಮತಧರ್ಮಗಳಿಗೆ ಸಂಬಂಧಪಟ್ಟಂತೆ ಮೂರ್ತಿರಾಯರ ನಿಲುವುಗಳೇನೆಂಬುದನ್ನು ತಿಳಿಯಬೇಕಾದರೆ 'ಸಂಜೆಗಣ್ಣಿನ ಹಿನ್ನೋಟ' ಮತ್ತು 'ಅಪರ ವಯಸ್ಕನ ಅಮೆರಿಕಾ ಯಾತ್ರೆ'ಗಳಲ್ಲಿ ಕಂಡುಬರುವ ಎರಡು ಸಂದರ್ಭಗಳನ್ನು ಪರಿಶೀಲಿಸಬಹುದು. ಒಮ್ಮೆ ಸುಳ್ಳು ಹೇಳಿದ್ದಕ್ಕಾಗಿ ತೀವ್ರವಾಗಿ ಪಶ್ಚಾತ್ತಾಪಪಡುವ, ಆತ್ಮ ಶೋಧನೆ ಮಾಡಿಕೊಳ್ಳುವ ಸಂದರ್ಭವೊಂದನ್ನು ಮಹಾತ್ಮ ಗಾಂಧಿ ತಮ್ಮ ಆತ್ಮಚರಿತ್ರೆಯಲ್ಲಿ ವಿವರಿಸಿದ್ದಾರೆ. ಇದು ಎಲ್ಲರಿಗೂ ಗೊತ್ತಿದೆ. ಆದರೆ ಸುಳ್ಳಿನ ಮೂಲಕವೇ ಕಾಶಿಯ ಪಂಡರಿಗೆ ಪಂಗನಾಮ ತಿದ್ದಿದ ಬಗೆಯನ್ನು ಮೂರ್ತಿರಾಯರಲ್ಲಿ ಕಾಣಬಹುದು. ಕಾಶಿಯಲ್ಲಿ ಎದುರಾದ ಪಂಡರಿಗೆ ತನ್ನ

---

ಯಾವನೊಬ್ಬನೂ ಆಳುದ್ದದ ದೇಹವನ್ನು [illegible]
ಮತ್ತೊಬ್ಬನೆದುರಿಗೆ [illegible] ಅವನ [illegible] ದಮ್ಮಯ್ಯನೆ ಅಂಗಲಾಚಿ
[illegible]ಬಾರದು. ಇದು ಸಾಧ್ಯವಾದಾಗ ಸಮಾಜ ಪ್ರತಿಷ್ಠೆಯನ್ನು
ಉತ್ಕೃಷ್ಟ ಕಾಣುವುದು —— ಇದೇ ನನ್ನ ಜೀವನದ ಗುರಿ.
"ಹೊಸತು" ಈ [illegible] ಸಾಗಲೆಂದು ಹಾರೈಸುತ್ತೇನೆ.

ಎ. ಎನ್. ಮೂರ್ತಿರಾವ್
13. 6. 2001.

ಹೆಸರು "ವಿಲಿಯಮ್ ಸಾಮ್ಯುಯೆಲ್ಸ್, ಮೈ ಕಿರಿಸ್ತಾನ್ ಹೂಂ" - ಎಂದು ಹೇಳಿದ್ದ ಮೂರ್ತಿರಾಯರು ನ್ಯಾನ್ಸಿಯ ತಂಗಿ ಲಿಂಡ ಜೊತೆ ನಡೆಸಿದ ಚರ್ಚೆಯಲ್ಲಿ I have accepted Christ ಎನ್ನುತ್ತಾರಲ್ಲದೆ ಲಿಂಡ ಕೇಳಿದಂತೆ "ನೀವು ಮತ್ತೇನೇ ಆಗಿರಿ, ಕ್ರೈಸ್ತರೂ ಆಗಿದ್ದೀರಿ" - ಎಂಬ ಪ್ರಶ್ನೆಗೆ "ಭಾಗಶಃ" - ಎಂದು ಉತ್ತರಿಸಿದ್ದಾರೆ. ಇವೆರಡು ಪ್ರಸಂಗಗಳನ್ನು ಒಟ್ಟಿಗೆ ನೋಡಿದಾಗ ಮತಸಂಬಂಧವಾದ ಆಚರಣೆಗಳ ಬಗ್ಗೆ ಮೂರ್ತಿರಾಯರಿಗಿದ್ದ ಆರೋಗ್ಯಕರವಾದ ಹಾಸ್ಯ ಮನೋಧರ್ಮ, ಎಲ್ಲ ಧರ್ಮಗಳ ಉತ್ತಮಾಂಶಗಳನ್ನು ಒಪ್ಪಿಕೊಳ್ಳುವ ಹೃದಯವಂತಿಕೆಗಳ ಪರಿಚಯ ನಮಗೆ ಆಗುತ್ತದೆ.

"ಸಮರ್ಪಕವಾದ ಕಾರಣಗಳಿದ್ದರೆ ಸಂಪ್ರದಾಯಕ್ಕೆ ರಿಯಾಯಿತಿ ತೋರಿಸುವುದರಲ್ಲಿ ತಪ್ಪೇನೂ ಇಲ್ಲ" (ಪು. ೧೮೬ ಸಂಜೆ) ಎಂದು ಸ್ಪಷ್ಟವಾಗಿ ಸಾರಿ ಹೇಳುವ ಮೂರ್ತಿರಾಯರು ತಮಗೆ ಬಹುಪ್ರಿಯವಾದ 'ಮಂದೇವರ ಹಬ್ಬ'ವನ್ನು ವಿವರಿಸಿದ್ದಾರೆ. "ಈ ಹಬ್ಬದ ಆಚರಣೆ ನನಗೆ ಹಿತ"ವೆಂಬುದಕ್ಕೆ ಮೂರ್ತಿರಾಯರು ಮೂರು ಕಾರಣಗಳನ್ನು ಕೊಟ್ಟಿದ್ದಾರೆ:

೧. ಅದರ ಕಲಾವಂತಿಕೆಗಾಗಿ.

೨. ಅಂದು ಪ್ರಥಮ ಗೌರವ ಸಲ್ಲಿಸುವುದು ಸ್ತ್ರೀಯರಿಗೆ ಎಂಬ ಕಾರಣಕ್ಕಾಗಿ.

೩. ಅಲ್ಲದೆ ಪೊಂಗಲು, ಯರೆಯಪ್ಪಗಳ ರುಚಿಯನ್ನು ನಾನು ಕಡೆಗಣಿಸುವವನಲ್ಲ, ಎನ್ನುತ್ತಾರೆ.

ಹೀಗೆ, ಈ ಮೂರು ಕಾರಣಗಳನ್ನು ಒಟ್ಟಿಗೆ ಇಟ್ಟು ನೋಡಿದಾಗ ಮಾತ್ರ ಮೂರ್ತಿರಾಯರ ಪ್ರಜ್ಞಾವಂತಿಕೆಯ ಸ್ವರೂಪ ಸ್ಪಷ್ಟವಾಗುತ್ತದೆ. 'ಸಂಜೆಗಣ್ಣಿನ ಹಿನ್ನೋಟ'ದ ಬಗ್ಗೆ ಒಂದು ಪರಿಶೀಲನೆ ನಡೆಸಿರುವ ಜಿ. ಎಸ್. ಶಿವರುದ್ರಪ್ಪನವರು ಮಂದೇವರ ಪೂಜೆ ಮತ್ತು ವೇದ ಮಂತ್ರ ಶ್ರವಣಗಳ ಬಗ್ಗೆ ಮೂರ್ತಿರಾಯರು ಹೇಳುವ ಮಾತುಗಳನ್ನು ಉದಾಹರಿಸುತ್ತಾ,

"ಸಂಪ್ರದಾಯದೊಳಗಿರುವ ಮತ-ಧಾರ್ಮಿಕ ಆಚರಣೆಗಳನ್ನು ಬೇರೊಂದು ಕಲಾತ್ಮಕ ನಿಲುವಿನಿಂದ ನೋಡುವ ಮೂರ್ತಿರಾಯರ ಈ ನಿಲುವು ಸಂಪ್ರದಾಯದ 'ಜಡತೆ'ಯನ್ನು ತಿರಸ್ಕರಿಸುವ ಒಂದು ಧರ್ಮ ನಿರಪೇಕ್ಷ ವಿಧಾನವಾಗಿದೆ" - ಎಂದಿದ್ದಾರೆ (ಸುಧಾ ೨೧, ಅಕ್ಟೋಬರ್ ೧೯೮೦). ಜಿ.ಎಸ್.ಎಸ್. ಹೇಳುವಂತೆ ಮೂರ್ತಿರಾಯರದು ಸಂಪ್ರದಾಯದ 'ಜಡತೆ'ಯನ್ನು ತಿರಸ್ಕರಿಸುವ ಒಂದು ಧರ್ಮ ನಿರಪೇಕ್ಷ ವಿಧಾನವೆಂಬುದನ್ನು ಒಪ್ಪಬಹುದಾದರೂ ಮೂರ್ತಿರಾಯರು ಸಂಪ್ರದಾಯದೊಳಗಿರುವ ಮತಧಾರ್ಮಿಕ ಆಚರಣೆಗಳನ್ನು ಕುರಿತು ಮಾತನಾಡುವಾಗ ಕಲಾತ್ಮಕ ನಿಲುವಿನಿಂದ ನೋಡುತ್ತಾರೆನ್ನುವುದು ಹೆಚ್ಚುಗಾರಿಕೆಯಲ್ಲ! ಇಂತಹ ಆಚರಣೆಗಳಲ್ಲಿ ಮೂರ್ತಿರಾಯರು ಮಾನವ ಸಮುದಾಯದ ಮೈ-ಮನಗಳಿಗೆ ಆರೋಗ್ಯಕರವಾದ ಮೌಲ್ಯಗಳೇನೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

'ಮಂದೇವರ ಪೂಜೆ'ಯನ್ನು ಮೂರ್ತಿರಾಯರು ವಿವರಿಸುತ್ತಾ, ಮಂದೇವರು ಹೆಣ್ಣುದೇವತೆ, ಒಡ್ಡರ ಗುಡಿಯಮ್ಮನಿಗೆ ಕಲಶವಿಟ್ಟು ತೆಂಗಿನ ಹೊಂಬಾಳೆಯಿಂದ ಅಲಂಕರಿಸಿ ಪೂಜಿಸುವ ವಿಧಿವಿಧಾನಗಳನ್ನು ಪರಿಚಯಿಸಿದ್ದಾರೆ. ಜೊತೆಗೆ, ಬಂಧುಗಳಿಲ್ಲದ ಇಬ್ಬರು ಮುತ್ತೈದೆಯರನ್ನು ಪೂಜೆಗೆ ಮತ್ತು ಊಟಕ್ಕೆ ಕರೆದು, ಅವರಿಬ್ಬರ ಕಾಲು ತೊಳೆದು ಹೂವೀಳ್ಯ ಅರ್ಪಿಸುವ ವಿವರಗಳನ್ನಿತ್ತಿದ್ದಾರೆ. ಇದಿಷ್ಟು ಸ್ಥೂಲವಾಗಿ ಮಂದೇವರ ಪೂಜೆಯ ಸ್ವರೂಪ. ಆದರೆ, ಕೃತಿಯ ಒಟ್ಟು ವಿನ್ಯಾಸದಲ್ಲಿ 'ಮಂದೇವರು' ಎಂದರೆ 'ಒಡ್ಡರ ಗುಡಿಯಮ್ಮ' ಎಂಬ ಸ್ಥಗಿತವಾದ ನೆಲೆ ಬಿದ್ದುಹೋಗುತ್ತದೆ. ಇದಕ್ಕೆ ನಿದರ್ಶನವಾಗಿ 'ಮನೆದೇವರು ನಮ್ಮನ್ನು ಬಿಟ್ಟು ಹೋದದ್ದು' ಎಂಬ ಅಧ್ಯಾಯವನ್ನು ನೋಡಬಹುದು. ಈ ಭಾಗದಲ್ಲಿ ಮೂರ್ತಿರಾಯರ ಸೋದರ ಕಿಟ್ಟು ಗಂಭೀರ ಭಾವನೆಯಿಂದ ಶ್ರೀಮತಿ ಜಯಮ್ಮನವರನ್ನು ಕುರಿತು "ನಮ್ಮ ಮನೆತನಕ್ಕೆ ನೀವೇ ಮಂದೇವರು" (ಪು. ೪೧೩) ಎನ್ನುವಾಗ ನವಿರಾದ ಹಾಸ್ಯದ ಜೊತೆ ಹೃದಯಸ್ಪರ್ಶಿಯಾದ ವಾತಾವರಣವೊಂದು ನಿರ್ಮಾಣವಾಗುತ್ತದೆ. ಮಂದೇವರ ಕಲ್ಪನೆ ನಮ್ಮ ಕಣ್ಮುಂದೆಯೇ ಸ್ಥಾವರದಿಂದ ಜಂಗಮಕ್ಕೆ ಬದಲಾಗಿಬಿಡುತ್ತದೆ. ಈ ದೃಷ್ಟಿಯಿಂದ ನೋಡಿದರೆ ದೇವರ ಬಗ್ಗೆ ಮೂರ್ತಿರಾಯರು ತಳೆಯುವ ನಿಲುವು ಜಾನಪದ ಜೀವನಕ್ಕೆ ಹತ್ತಿರವಾದದ್ದು. ಭೂಮಿ ತಾಯಿ, ಕಲ್ಲಮ್ಮ, ಬಸವಣ್ಣ ಮುಂತಾದ ಮೂರ್ತವೂ ಜೀವಂತವೂ ಆದ ವಿವರಗಳನ್ನೇ ದೇವರೆಂದು ತಿಳಿಯುವುದು ಜಾನಪದ ಜೀವನದ ವಿಶಿಷ್ಟಾಂಶವಾಗಿದೆ. ಅಂತೆಯೇ, ಮೂರ್ತಿರಾಯರು ಕೂಡ ತಮ್ಮ ಬದುಕಿಗೆ ಕಣ್ಣಾದ 'ಗೃಹಲಕ್ಷ್ಮಿ'ಯನ್ನು 'ಮಂದೇವರು' ಎಂದು ಭಾವಿಸಿದ್ದಾರೆ.

ಜಾನಪದ ಜೀವನದಲ್ಲಿ ಮಕ್ಕಳನ್ನು ದೇವರ ಸಮಾನ ಎಂದು ತಿಳಿಯುವುದು ಎಲ್ಲರಿಗೂ ಗೊತ್ತಿದೆ. ಮಕ್ಕಳನ್ನು ತಂದೆ ತಾಯಿಗಳು ಫಲಾಪೇಕ್ಷೆಯಿಲ್ಲದೆ ಬೆಳೆಸಬೇಕೆಂಬುದನ್ನು ಒಪ್ಪಿಕೊಳ್ಳುವ ಮೂರ್ತಿರಾಯರು ಮಕ್ಕಳು ಎಳವೆಯಲ್ಲಿ ನಮಗೆ ನೀಡುವ ಆನಂದವೇ ತಂದೆ-ತಾಯಿಗಳಿಗೆ ಸಲ್ಲಿಸಿದ ಋಣವೆಂದು ತಿಳಿಯುತ್ತಾರೆ. ಎಳೆಮಕ್ಕಳ ಸ್ಪರ್ಶ ಸೌಖ್ಯ, ಬಟ್ಟಲುಗಣ್ಣಿನ ಹೊಳಪು ಇವನ್ನು ನೆನೆಯುತ್ತಾ "ಕಣ್ಣೋಟ ಶಿವನ ಕೈಯಲಗು ಹೊಳೆದಾಂಗ" (ಪು. ೪೭೭) ಎಂಬ ಜಾನಪದಗೀತೆಯ ಸಾಲೊಂದನ್ನು ಉಲ್ಲೇಖಿಸುವ ಮೂರ್ತಿರಾಯರು ತನ್ಮೂಲಕ ದೇವರ ಸ್ವರೂಪದ ಬಗ್ಗೆ ಜಾನಪದ ಜೀವನದ ವಿಶಿಷ್ಟಾಂಶವೊಂದನ್ನು ಎತ್ತಿಹಿಡಿದಿದ್ದಾರೆ.



ಶ್ರೀ ಎ. ಎಂ. ಸುಬ್ಬರಾಮಯ್ಯ, ಶ್ರೀ ಜಿ. ರಾಮಕೃಷ್ಣ ಮತ್ತು ಪ್ರೊ॥ ಮೂರ್ತಿರಾವ್

"ದೇವರ ಬಗ್ಗೆ ನನಗೆ ನಂಬಿಕೆ ಬರಲೊಲ್ಲದು" ಎಂದು ಸ್ಪಷ್ಟವಾಗಿ ಸಾರಿ ಹೇಳುವ ಮೂರ್ತಿರಾಯರು ಇಹಜೀವನದ ಬಗ್ಗೆ ಗಾಢವಾದ ನಂಬಿಕೆಯನ್ನು, ಜೀವನ ಪ್ರೀತಿಯನ್ನು ಸಮೃದ್ಧವಾಗಿ ಬೆಳೆಸಿಕೊಂಡಿದ್ದಾರೆ. ಎಲ್ಲ ಮಾನವರ ಸಹಜೀವನದ ಔನ್ನತ್ಯಸಿದ್ಧಿಗಾಗಿ ಕೈಲಾದದ್ದನ್ನು ಮಾಡುವುದು ಕರ್ತವ್ಯವೆಂದು ನಂಬಿರುವ ಮೂರ್ತಿರಾಯರು ಇಹ-ಪರಗಳ ಚಿಂತನೆ ನಡೆಸುತ್ತಾ "ಇದು ಇಹದ ಕಂಪಾರ್ಟ್‌ಮೆಂಟು, ಅದು ಪರದ ಕಂಪಾರ್ಟ್‌ಮೆಂಟು" ಎಂದು ಗೆರೆ ಕುಯ್ದು ಹಾಗೆ ಬೇರ್ಪಡಿಸುವುದು ಸರಿಯೆ, ಸಮಾಜಕ್ಕೆ ಕ್ಷೇಮಕರವೆ ಎಂಬುದು ಪರಿಶೀಲಿಸಬೇಕಾದ ಪ್ರಶ್ನೆ ಎಂದಿದ್ದಾರೆ (ಪು. ೧೧೦). ಇಂತಹ ಕಡೆಗಳಲ್ಲಿ ಮೂರ್ತಿರಾಯರ ನಿಲುವು ವಚನಕಾರರ ತಾತ್ವಿಕ ದೃಷ್ಟಿಕೋನವನ್ನು ನೆನಪಿಸುತ್ತದೆ. ಇಹ-ಪರಗಳೆಂಬ ಸೀಮಾರೇಖೆಗಳನ್ನು ಅಳಿಸಿಹಾಕಿದ ವಚನಕಾರರು ತನ್ಮೂಲಕ ಎತ್ತಿಹಿಡಿದ ಇಹಜೀವನದ ಘನತೆಯನ್ನೇ ಮೂರ್ತಿರಾಯರು ಕೂಡ ಎತ್ತಿಹಿಡಿದಿದ್ದಾರೆ. ಮೂರ್ತಿರಾಯರು ತಮ್ಮ ಮಗ ಸುಬ್ಬರಾಮಯ್ಯನವರಿಗೆ ಬರೆದ ಪತ್ರಗಳಲ್ಲೂ ಈ ಅಂಶವನ್ನು ಮನಗಾಣಬಹುದು. ತನ್ನ ವಿದೇಶಿ ಮಿತ್ರರ ಪ್ರಶ್ನೆಗಳಿಗೆ ತಂದೆಯಿಂದ ಉತ್ತರ ಬಯಸಿದ 'ಸುಬ್ಬರಾಮು'ಗೆ ಬರೆದ ಪತ್ರಗಳಲ್ಲಿ ಮೂರ್ತಿರಾಯರು ದೇವರು, ಧರ್ಮ, ಮತಸಂಬಂಧವಾದ ಆಚರಣೆಗಳನ್ನು ಪ್ರಸ್ತಾಪಿಸುತ್ತಾ ಸಂಕ್ಷಿಪ್ತವಾಗಿ ವಿಶ್ಲೇಷಣೆ ನೀಡಿದ್ದಾರೆ. ಯಾವುದೇ ವಿಧವಾದ ಭಾವಾವೇಶ, ಅತ್ಯುತ್ಸಾಹ, ಪೂರ್ವಾಗ್ರಹಗಳಿಲ್ಲದ ಮುಕ್ತ ಮನಸ್ಸಿನಿಂದ ನೀಡಿರುವ ವಸ್ತುನಿಷ್ಠ ದೃಷ್ಟಿಕೋನವೊಂದು ಈ ಪತ್ರಗಳಲ್ಲಿ ಎದ್ದು ಕಾಣುತ್ತದೆ. ಈ ಸಂದರ್ಭದಲ್ಲಿ ನಾನು ಗಮನಿಸಿದ ಅಂಶವೊಂದನ್ನು ನಿಮ್ಮ ಮುಂದಿಡಬಯಸುತ್ತೇನೆ: ಮೂರ್ತಿರಾಯರು ಶಿವಪೂಜೆ ಮತ್ತು ಲಿಂಗಪೂಜೆಗಳನ್ನು ಪರಸ್ಪರ ಬೇರೆ ಬೇರೆಯೆಂದು ವ್ಯಾಖ್ಯಾನಿಸುತ್ತಾರೆ. ಲಿಂಗಪೂಜೆ ಹುಟ್ಟಿದ್ದು ಹೇಗೆ ಎಂಬುದು ಮತಧರ್ಮಗಳ ಇತಿಹಾಸವನ್ನು ಅಭ್ಯಸಿಸುವವನು ಕೇಳಬೇಕಾದ ಪ್ರಶ್ನೆ ಎನ್ನುವ ಮೂರ್ತಿರಾಯರು ಆದರೆ ಇಂದು ಶಿವಪೂಜೆ ಮಾಡುವವನಿಗೆ ಆ ಪ್ರಶ್ನೆಯೇ ಅಸಂಗತ ಎನ್ನುತ್ತಾರೆ. ಆದ್ದರಿಂದಲೇ ಶಿವಪೂಜೆಯನ್ನು ಪುರುಷ ಚಿಹ್ನೆಯ ಪೂಜೆಯೆಂದು ಅವಹೇಳನ ಮಾಡುವ ಪಾಶ್ಚಾತ್ಯ ದೃಷ್ಟಿಕೋನದ ಆವೇಶಗಳಿಗೆ ಅರ್ಥವಿಲ್ಲವೆಂಬುದನ್ನು ಮನಗಾಣಿಸಿದ್ದಾರೆ.

ಮನುಷ್ಯರೆಲ್ಲರೂ ರೂಪಿಸಿಕೊಳ್ಳಬೇಕಾದ ಸಜ್ಜನಿಕೆಗೆ ದೈವಭಕ್ತಿಯಿಂದ ಉತ್ತೇಜನ ದೊರಕುವುದಾದರೆ, ಅಂತಹ ದೈವಭಕ್ತಿ ಸಂತತವಾಗಿರಲೆಂದು ಹಾರೈಸುವ ಮೂರ್ತಿರಾಯರು ದೇವರು – ಧರ್ಮಗಳ ಹೆಸರಿನಲ್ಲಿ ಬದುಕನ್ನು ಕೀಳಾಗಿ ನೋಡುವ ದೃಷ್ಟಿಯನ್ನು ಖಂಡಿಸಿದ್ದಾರೆ. ತಮ್ಮ ಮಗ ಸುಬ್ಬರಾಮುಗೆ ಬರೆದ ಪತ್ರಗಳಲ್ಲಿ ಕೊನೆಯಲ್ಲಿ ತಮ್ಮ ನಿಲುವೇನೆಂಬುದನ್ನು ಸ್ಪಷ್ಟಪಡಿಸಿದ್ದಾರೆ :

"ಸಹಜೀವನವನ್ನು ಉತ್ತಮಗೊಳಿಸಲು ನಾವು ಸಾಕಷ್ಟು ಶ್ರಮಪಟ್ಟಿಲ್ಲ. ಆ ವಿಷಯದಲ್ಲಿ ಇನ್ನೂ ದಕ್ಷರಾಗಿಲ್ಲ. ನಮ್ಮ ವೈರಾಗ್ಯ ಬಹುಮಟ್ಟಿಗೆ ಅಭಾವ ವೈರಾಗ್ಯ ಎಂದು ನನಗೆ ಎಷ್ಟೋ ವೇಳೆ ಅನ್ನಿಸಿದೆ...." (ಚಿತ್ರಗಳು - ಪತ್ರಗಳು, ಪು. ೩೩೮)

ನಮ್ಮ ಸಹಜೀವನವನ್ನು ಉತ್ತಮಗೊಳಿಸಲು ನಾವೆಲ್ಲರೂ ಅಳವಡಿಸಿಕೊಳ್ಳಬೇಕಾದ, ಕೈಲಾದಮಟ್ಟಿಗೆ ಪ್ರಯತ್ನಪೂರ್ವಕ ಸಾಧಿಸಬೇಕಾದ ತತ್ವವೇ 'ಮಾನವ ದಯಾಮೃತ.'

III 'ಮಾನವ ದಯಾಮೃತ'

ಇದು ಮೂರ್ತಿರಾಯರು ಬಾಳಿನಲ್ಲಿ ನಂಬಿದ ತತ್ವವನ್ನು ಪ್ರತಿನಿಧಿಸುವ, ಅವರಿಗೆ ಬಹುಪ್ರಿಯವಾದ, ಪದಪುಂಜ. *ಸಂಜೆಗಣ್ಣಿನ ಹಿನ್ನೋಟ, ಅಪರ ವಯಸ್ಕನ ಅಮೆರಿಕಾ ಯಾತ್ರೆ* ಇವೆರಡು ಕೃತಿಗಳ ಹಲವು ಸಂದರ್ಭಗಳಲ್ಲಿ ಮತ್ತೆ ಮತ್ತೆ ಪ್ರಯೋಗವಾಗಿರುವ ಮಾನವ ದಯಾಮೃತ ಎಂಬ ಪದಪುಂಜ ಮಾನವ ಸಮಷ್ಟಿಯ ಹಿತ ಮತ್ತು ಕಲ್ಯಾಣಗುಣಗಳನ್ನು ನಿರ್ದೇಶಿಸುತ್ತದೆ. ಇದನ್ನು ಮೂರ್ತಿರಾಯರು ಇಂಗ್ಲಿಷ್‌ನಲ್ಲಿ The milk of human kindness ಎಂದು ಸೂಚಿಸಿದ್ದಾರೆ. ಬಡವ-ಶ್ರೀಮಂತ, ನಾಗರಿಕ-ಅನಾಗರಿಕ ಇತ್ಯಾದಿ ಯಾವ ತರ-ತಮ ಭಾವಗಳ ಹಾಗೂ ಜಾತಿ, ಮತ, ಜನಾಂಗಗಳ ಅಡ್ಡಗೋಡೆಗಳಿಲ್ಲದೆ - ಮನುಷ್ಯ ಜಾತಿ ತಾನೊಂದೆ ವಲಂ - ಎಂಬ ಹೃದಯವಂತಿಕೆ ಹಾಗೂ ಮಾನವ ಸಮುದಾಯದ ಸಹಜೀವನಕ್ಕೆ ಕೈಲಾದ್ದನ್ನು ಮಾಡಬೇಕೆಂಬ ಕರ್ತವ್ಯ ಭಾವನೆಗಳಿದ್ದಾಗ 'ಮಾನವ ದಯಾಮೃತ' ಪ್ರಕಟಗೊಳ್ಳುತ್ತದೆ. 'ಅಪ್ರಸಿದ್ಧ ಮಹಾತ್ಮರೊಬ್ಬರ ಕಥೆ' (ಪು. ೩೯) ಈ ದೃಷ್ಟಿಯಿಂದ ಪರಿಶೀಲನಾರ್ಹ ವಾಗಿದೆ. ಕೆಲವು ಸಣ್ಣಪುಟ್ಟ ಔಷಧಿಗಳು, ಜಲಶಿಲ್ಪ - ಹಲ್ಲಿ ಶಕುನ ಮುಂತಾದ ಪುಸ್ತಕಗಳನ್ನು ಇಳಿವಯಸ್ಸಿನಲ್ಲೂ ಹೊತ್ತುಕೊಂಡು ರೈಲಿನಲ್ಲಿ ಮಾರಾಟ ಮಾಡುತ್ತಿದ್ದ ತಮ್ಮ ಹತ್ತಿರದ ಬಂಧುವೊಬ್ಬರ ಬದುಕನ್ನೇ ಮೂರ್ತಿರಾಯರು 'ಅಪ್ರಸಿದ್ಧ ಮಹಾತ್ಮರೊಬ್ಬರ ಕಥೆ'ಯಲ್ಲಿ ನಿರೂಪಿಸಿದ್ದಾರೆ. ಸ್ವಂತ ಸುಖಕ್ಕಿಂತ ಸಹಜೀವನದ ಕಾರ್ಪಣ್ಯವನ್ನೇ ಆಯ್ಕೆ ಮಾಡಿಕೊಳ್ಳುವ ಅಪ್ರಸಿದ್ಧ ಮಹಾತ್ಮರೊಬ್ಬರ ಕಥೆ ಮಾನವ ದಯಾಮೃತಕ್ಕೊಡ್ಡಿದ ಸಮರ್ಥ ಪ್ರತಿಮೆ ಯಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಅಪ್ರಸಿದ್ಧ ಮಹಾತ್ಮರ ಮಾನವ ದಯಾಮೃತ ಧಾರೆಗೆ ಅವರ ಬಡತನ ಒಂದು ಅಡ್ಡಿಯಾಗದ ಹೃದಯ ಶ್ರೀಮಂತಿಕೆ. ಮತ್ತೊಂದು ಹೃದಯಸ್ಪರ್ಶಿ ಸನ್ನಿವೇಶ *ಅಪರ ವಯಸ್ಕನ ಅಮೆರಿಕಾ ಯಾತ್ರೆ*ಯಲ್ಲಿ ನಿರೂಪಿತವಾಗಿದೆ.

ಮೂರ್ತಿರಾಯರು 'ಬಫಲೋಬಿಲ್ ಮ್ಯೂಸಿಯಂ'ಗೆ ಭೇಟಿ ಕೊಟ್ಟಾಗ ತಮ್ಮ ಮನಸ್ಸಿನ ಮೇಲೆ ತೀವ್ರ ಪರಿಣಾಮ ಉಂಟುಮಾಡಿದ ಎರಡು ಚಿತ್ರಗಳನ್ನು ವಿವರಿಸಿದ್ದಾರೆ. ಇಲ್ಲಿನ ವಿವರಣೆ - ವಿಶ್ಲೇಷಣೆಗಳು ಕಾಲವಿಮರ್ಶೆಯ ಒಳನೋಟಗಳಾಗಿಯೂ ನಮ್ಮ ಮನಸೆಳೆಯುತ್ತವೆ. ಆ ಎರಡು ಚಿತ್ರಗಳಿಗೆ ಕೊಟ್ಟಿರುವ ಶೀರ್ಷಿಕೆ :

೧. The last of the race - ಜನಾಂಗದ ಕೊನೆಯವರು

೨. The trail - ಜಾಡು.

ಮೂಲ ನಿವಾಸಿಗಳಾದ ರೆಡ್ ಇಂಡಿಯನ್ನರ ಮೇಲೆ ಬಿಳಿಯ ಜನರ ಹಲ್ಲೆ, ಕ್ರೌರ್ಯಗಳನ್ನು (= ಇವು ಬಿಳಿಯರ ದೃಷ್ಟಿಯಲ್ಲಿ ಧೈರ್ಯ ಸಾಹಸಗಳು) ಪ್ರತಿಬಿಂಬಿಸುವ ಇವೆರಡು ಚಿತ್ರಗಳನ್ನು ವ್ಯಾಖ್ಯಾನಿಸುತ್ತಾ ಮೂರ್ತಿರಾಯರು ''ಈ ಬಿಳಿಯ ಜನ ಬೆಲೆ ಕೊಡುವುದು ಶಕ್ತಿ ಸಾಹಸಗಳಿಗೆ, ಮಾನವ ದಯಾಮೃತಕ್ಕಲ್ಲ'' (ಪು. ೨೬೧) ಎನ್ನುತ್ತಾರೆ. ಇದನ್ನು ಸಾಮಾನ್ಯೀಕರಿಸಲಾಗದೆಂದು ಪತ್ರಿಕಾ ವರದಿಯ ಖಂಡನಾತ್ಮಕ ವ್ಯಾಖ್ಯಾನವೊಂದನ್ನು ಉದಾಹರಿಸುವ ಮೂರ್ತಿರಾಯರು ಬಿಳಿಯ ಜನರಲ್ಲೂ ಜೀವಂತವಾಗಿರುವ ಮಾನವ ದಯಾಮೃತದ ಬಗ್ಗೆ ಮಾತನಾಡಿಯೂ ''ಅದಕ್ಕೆ ಶಕ್ತಿ ಸಾಲದೆಂದು'' ಹೇಳಿದ್ದಾರೆ. ಈ ಸಂದರ್ಭದಲ್ಲಿ ಮೂರ್ತಿರಾಯರು ರೆಡ್ ಇಂಡಿಯನ್ ಬಣದ ನಾಯಕನಾದ ಸಿಯಾತಲ್, ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ ಫ್ರಾಂಕ್ಲಿನ್ ಪಿಯರ್ಸ್‌ಗೆ ಬರೆದ ಮಾನವ ದಯಾಮೃತ ಧಾರೆಯ ಕಾವ್ಯಮಯ ಪತ್ರದ ಕೆಲವು ಭಾಗಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ. ''ಭೂಮಿಯನ್ನು ಖರೀದಿಗೆ ಕೊಡಿ'' - ಎಂದು ಅಬ್ಬರಿಸಿ ಬೊಬ್ಬಿರಿಯುವ ಬಿಳಿಯ ಹುಲಿಗಳಿಗೆ ಉತ್ತರ ನೀಡುತ್ತಾ ಸಿಯಾತಲ್ ಹೀಗೆ ಕೇಳಿದ್ದಾನೆ :

''ಅಂತರಿಕ್ಷವನ್ನು, ಭೂಮಿತಾಯಿಯ ಮಡಿಲ ಸುಖೋಷ್ಣವನ್ನು ಮಾರುವುದು ಹೇಗೆ ? ಈ ಯೋಚನೆಯೇ ನಮಗೆ ವಿಚಿತ್ರವಾಗಿ ಕಾಣುತ್ತದೆ. ಗಾಳಿಯ ಅಪ್ಯಾಯನದ ಮೇಲಾಗಲಿ ನೀರಿನ ಚಂಚಲಕಾಂತಿಯ ಮೇಲಾಗಲಿ ನಾವಿನ್ನೂ ಒಡೆತನವನ್ನು ಸಂಪಾದಿಸಿಲ್ಲ! ಅವನ್ನು ನಮ್ಮಿಂದ ಹೇಗೆ ತಾನೆ ಕೊಂಡೀರಿ ?'' (*ಅಪರ ವಯಸ್ಕನ ಅಮೆರಿಕಾ ಯಾತ್ರೆ*, ಪು. ೨೬೫)

ಇಲ್ಲಿ ಸಿಯಾತಲ್ ಎತ್ತಿದ ಪ್ರಶ್ನೆಗಳು - ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಸೂಸುವ ವಾಯು ನಿಮ್ಮ ದಾನ - ಎಂದು ಹಾಡಿದ ನಮ್ಮ ವಚನಕಾರರನ್ನು ನೆನಪಿಗೆ ತರುತ್ತದೆ. - ''ಎಲ್ಲ ಮಾನವರ, ಎಲ್ಲ ಪ್ರಾಣಿಗಳ, ಸೃಷ್ಟಿಯಲ್ಲಿರುವ ಎಲ್ಲ ವಸ್ತುಗಳ ಏಕತ್ವವನ್ನು

ಕಂಡವನು ಈ 'ಅನಾಗರಿಕ ಅಸಂಸ್ಕೃತ' ಜನಾಂಗದ ನಾಯಕ'' ಎಂದು ವ್ಯಾಖ್ಯಾನಿಸುವ ಮೂರ್ತಿರಾಯರು ಈ ಬಗೆಯ ಘನತೆಯುಳ್ಳ ಆದರೆ ಅದಕ್ಕೆ ಅಭಿವ್ಯಕ್ತಿ ಕೊಡಲಾರದ ಎಷ್ಟು ಜನರಿದ್ದಾರೋ, ರೆಡ್ ಇಂಡಿಯನ್ ಜನಾಂಗದಲ್ಲಿ - ಎಂಬ ವಿಸ್ಮಯದ ಮೂಲಕ ಅಂತಹ ಅಪ್ರಸಿದ್ಧ ಮಹಾತ್ಮರನೇಕರ ಹೃದಯವಂತಿಕೆಯನ್ನು ಸ್ಮರಿಸಿದ್ದಾರೆ.

'ಮಾನವ ದಯಾಮೃತ' ಎಂಬುದು ನಾವು ರೂಪಿಸಿಕೊಳ್ಳಬೇಕಾದ ಆತ್ಮಸಂಸ್ಕಾರವೇ ಹೊರತು ಅದು ಹುಟ್ಟಿನೊಡನೆ ಸಿದ್ಧಿಸುವ ಕಣ್ಣಿನ ಕಾಂತಿಯಲ್ಲ! ಇದನ್ನು ಮೂರ್ತಿರಾಯರ ಆಪ್ತಮಿತ್ರ ಎಂ. ವಿ. ಗೋವಿಂದಸ್ವಾಮಿಯವರ ನಿದರ್ಶನದಲ್ಲಿ ಮನಗಾಣಬಹುದು: ''ನನಗೆ ಮತ್ತೊಬ್ಬರ ಉಳಿವು ಅಳಿವು ಮುಖ್ಯವಲ್ಲ, ನಾನು ಮುಂದಕ್ಕೆ ಬರಬೇಕು, ಸಂಪಾದಿಸಬೇಕು, ಸುಖವಾಗಿರಬೇಕು'' - (ಪು. ೩೭೦) ಎನ್ನುತ್ತಿದ್ದ ಗೋವಿಂದಸ್ವಾಮಿ ನಿಮ್ಹಾನ್ಸ್ ನಿರ್ದೇಶಕರಾದ ಮೇಲೆ ಆ ಸಂಸ್ಥೆಯ ಪ್ರಗತಿಯಲ್ಲಿ, ರೋಗಿಗಳ ವಿಷಯಗಳಲ್ಲಿ, ತೋರಿದ ಆಸಕ್ತಿ ಮತ್ತು ಆರ್ದ್ರತೆಗಳನ್ನು ಮೂರ್ತಿರಾಯರು ವಸ್ತುನಿಷ್ಠವಾಗಿ ನಿರೂಪಿಸಿದ್ದಾರೆ. ತಾನು ನಿರ್ದೇಶಕ ಎಂಬ ಸ್ಥಾನಮಾನಗಳನ್ನು ಲೆಕ್ಕಿಸದೆ ಎಲೆಕ್ಟ್ರೋ ಎನ್ಸೆಫಲೋಗ್ರಾಫ್ ಯಂತ್ರದ ಜವಾಬ್ದಾರಿಯನ್ನು ಹೊತ್ತಿದ್ದ ಆರ್. ಎಲ್. ನರಸಿಂಹಯ್ಯನವರನ್ನು ರಾಜಿನಾಮೆ ಕೊಡದಿರುವಂತೆ ಪ್ರಾರ್ಥಿಸಿಕೊಳ್ಳುವ, ಬೇಡಿಕೊಳ್ಳುವ ಗೋವಿಂದಸ್ವಾಮಿಯವರ ಹೃದಯ ಪರಿವರ್ತನೆ ಮನೋಜ್ಞವಾಗಿದೆ.

'ಮಾನವ ದಯಾಮೃತ'ವನ್ನು ಆತ್ಮಸಂಸ್ಕಾರದ ಮೂಲಕ ಸಾಧಿಸಬೇಕಾದರೆ ನಾವು ಕಳಚಿಕೊಳ್ಳಬೇಕಾದ ಆವರಣಗಳೇನೆಂಬುದನ್ನು ಮೂರ್ತಿರಾಯರು ಹೀಗೆ ಸೂಚಿಸಿದ್ದಾರೆ:

''ನಮ್ಮ ದೇಶ, ನಮ್ಮ ಮತ, ನಮ್ಮ ಭಾಷೆ, ನಮ್ಮ ಸಂಸ್ಕೃತಿ ಈ ನಮ್ಮಗಳೆಲ್ಲವೂ ನಮ್ಮ ವ್ಯಕ್ತಿತ್ವದ ವಿಸ್ತರಣಗಳು (extensions of our personality). ಕೆಳಮಟ್ಟದಿಂದ ನೋಡಿದರೆ ಅವು ಒಂದೊಂದೂ ಸ್ವಾರ್ಥದಿಂದ ಮೇಲಕ್ಕೇರುವ ಪ್ರಯತ್ನದಲ್ಲಿ ನಾವು ಸಾಧಿಸಿದ ಘಟ್ಟಗಳು. ಮೇಲಿನಿಂದ ನೋಡಿದರೆ ಅವು ನಮ್ಮತನದ ವಿಸ್ತರಣಗಳು; ನಮ್ಮತನದಿಂದ ಹೊರಗಿರುವ ಪ್ರಾಂತಗಳಲ್ಲ. ವಿಶ್ವಸಂಸ್ಕೃತಿಗೆ ನಮ್ಮ ಕಾಣಿಕೆಯನ್ನೂ ಕೊಡಬೇಕಾದರೆ ನಮ್ಮನ್ನು ನಾವು ಉತ್ತಮರಾಗಿಸಿಕೊಳ್ಳಬೇಕು.''

*(ಸಂಜೆಗಣ್ಣಿನ ಹಿನ್ನೋಟ, ಪು. ೪೭೬)*

ನಮ್ಮನ್ನು ನಾವು ಉತ್ತಮರಾಗಿಸಿಕೊಳ್ಳುವುದನ್ನು ಒಂದು ಪ್ರಕ್ರಿಯೆ ಎಂದು ಭಾವಿಸುವುದಾದರೆ ಇಂತಹ ಪ್ರಕ್ರಿಯೆಯ ಮೇಲುಹಂತದಲ್ಲಿ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬುದು ಮನದಟ್ಟಾಗುತ್ತದೆ. ಆಗ ಮನುಷ್ಯ-ಮನುಷ್ಯರ ನಡುವಣ ಸಣ್ಣತನಗಳು, ಜಾತಿ, ಮತ, ಜನಾಂಗ ಎಂಬ ಅಡ್ಡಗೋಡೆಗಳು ಪೊರೆಗಳಂತೆ ಕಳಚಿಬೀಳುತ್ತವೆ.

ಈ ದೃಷ್ಟಿಯಿಂದ ಪ್ರಪಂಚದ ನಾನಾ ಭಾಗಗಳಲ್ಲಿ ಶಕ್ತಿ ಮದೋನ್ಮತ್ತರು ತೋರುವ ವಂಶ ಪ್ರತಿಷ್ಠೆಯ ದಂತಗೋಪುರವನ್ನು ಮೂರ್ತಿರಾಯರು ಸ್ಫೋಟಕ ವ್ಯಂಗ್ಯದಿಂದ ಉರುಳಿಸಿರುವ ಬಗೆ ಮನನೀಯವಾಗಿದೆ. *ಸಂಜೆಗಣ್ಣಿನ ಹಿನ್ನೋಟ*ದಲ್ಲಿ ರಾಜಭಕ್ತಿ ಎಂಬ ಅಧ್ಯಾಯದಲ್ಲಿ ರಾಜರುಗಳು ತಮ್ಮ ವಂಶಕ್ಕೆ ಆರೋಪಿಸಿಕೊಳ್ಳುವ ಪವಿತ್ರತೆಗಾಗಲಿ, ಪುರಾತನತೆಗಾಗಲಿ ಅರ್ಥವಿಲ್ಲವೆಂದು ಹೇಳುವ ಮೂರ್ತಿರಾಯರು ರಘುವಂಶಕ್ಕೆ ಸೇರಿದ ಶಿಶುಹಂತಕ ಅಸಮಂಜ, ಸ್ತ್ರೀಲಂಪಟನಾದ ಅಗ್ನಿವರ್ಣರನ್ನು ಉಲ್ಲೇಖಿಸುತ್ತಾ ವಂಶಪ್ರತಿಷ್ಠೆಯ ಅರ್ಥಹೀನತೆಯನ್ನು ಮನಗಾಣಿಸಿದ್ದಾರೆ. ''ಯಾರ ವಂಶ ತಾನೆ ಪುರಾತನವಲ್ಲ? ನಮ್ಮೆಲ್ಲರ ವಂಶ ಸ್ಥಾಪನೆಯಾದದ್ದು ಮಿಲಿಯಗಟ್ಟಲೆ ವರ್ಷಗಳ ಹಿಂದೆ. ವಂಶಸ್ಥಾಪಕ ತಲೆ, ಕಣ್ಣು, ಕೈಕಾಲು ಏನೂ ಇಲ್ಲದ ಏಕೈಕ ಕೋಶದ ಒಂದು ಜೀವಿ''- ಎನ್ನುತ್ತಾರೆ. 'ಅಪರ ವಯಸ್ಕನ ಅಮೆರಿಕಾ ಯಾತ್ರೆ'ಯಲ್ಲೂ ಇದೇ ದೃಷ್ಟಿಯ ಭಾಗವೊಂದಿದೆ. ಶಕ್ತಿ ಮದೋನ್ಮತ್ತರಾದ ಜರ್ಮನ್ ನಾಜಿಗಳ ಮತ್ತು ಶ್ವೇತವರ್ಣೀಯರಾದ 'Wasp'ಗಳ ವಂಶ ಪ್ರತಿಷ್ಠೆಯನ್ನು ಖಂಡಿಸುತ್ತಾ - ''ಆ ಪುರಾತನತಮ ವಂಶ ಸ್ಥಾಪಕನನ್ನು ಯಾರೂ ಹೆಮ್ಮೆಯಿಂದ ಸ್ಮರಿಸುವುದಿಲ್ಲ''- ಎಂದು ವಿಡಂಬಿಸಿದ್ದಾರೆ. ಈ ವಿಡಂಬನೆಯ ಹಿಂದೆ ವೈಜ್ಞಾನಿಕ ಸತ್ಯದ ಆಧಾರವಿರುವಂತೆಯೇ ಮಾನವ ದಯಾಮೃತದ ಅಂಶಗಳೂ ಇವೆ.

ಮಾನವ ದಯಾಮೃತವು ಬರಿಯ ಬಾಯಿಮಾತಾಗಿ ಉಳಿಯಬಾರದೆಂಬ ಎಚ್ಚರಿಕೆಯನ್ನು ಹೊಂದಿರುವ ಮೂರ್ತಿರಾಯರು ಭೌತಿಕ ಪರಿಕರಗಳೊಂದಿಗೆ ಬೆರೆತುಕೊಂಡಾಗಲೇ ಅರ್ಥ ಪೂರ್ಣಗೊಳ್ಳುವ 'ಮಾನವ ದಯಾಮೃತ'ವನ್ನು ಹಲವು ಮಾತುಗಳಲ್ಲಿ ವಿವರಿಸಿದ್ದಾರೆ. ಈ ವಿವರಣೆಯನ್ನು ಆತ್ಮ ಪ್ರಪಂಚ ಮತ್ತು ವಸ್ತು ಪ್ರಪಂಚ, ಮೌಲ್ಯಗಳು ಮತ್ತು ಸಾಮಗ್ರಿಗಳು ಎಂಬ ಉಪವಿಭಾಗಗಳಲ್ಲಿ ಮನಗಾಣಬಹುದು. ಮಾನವ ದಯಾಮೃತವನ್ನು ಆತ್ಮ ಪ್ರಪಂಚಕ್ಕೆ ಸೇರಿದ ಮೌಲ್ಯಗಳೆನ್ನುವುದಾದರೆ ಇದಕ್ಕೆ ಬೆಂಬಲವಾಗಿ ನಿಲ್ಲಬೇಕಾದ್ದು ವಸ್ತು ಪ್ರಪಂಚಕ್ಕೆ ಸೇರಿದ ಸಾಮಗ್ರಿಗಳು ಎಂಬ ಸ್ಪಷ್ಟ ಅಭಿಪ್ರಾಯ ವ್ಯಕ್ತಪಡಿಸುವ ಮೂರ್ತಿರಾಯರು ಬರಿಯ ಸುಖ ಸಾಮಗ್ರಿಗಳೇ ಬಾಳಿನಲ್ಲಿ ಆನಂದವನ್ನು ನೀಡಲಾರವು ಎಂದಿದ್ದಾರೆ. ಸುಖ ಸಾಮಗ್ರಿಗಳ ವಿಷಯದಲ್ಲಿ ನವನಾಗರಿಕರು ತೋರುವ ಆಸಕ್ತಿ ಹೇಗೆ ಆತಂಕದಾಯಕವಾಗುವುದೆಂಬುದನ್ನು ಮನಗಾಣಿಸುತ್ತಾ ಸುಸಜ್ಜಿತವೂ, ಸಾಲಂಕೃತವೂ ಆದ ಮನೆಯೊಂದಕ್ಕೆ ಅತಿಥಿಗಳು ಮಕ್ಕಳೊಡನೆ ಬಂದಾಗ ಅವರು ಮತ್ತೆ ಹಿಂದಿರುಗುವವರೆಗೂ ಆತಿಥೇಯರಿಗಾಗುವ ಆತಂಕ ಎಂತಹುದೆಂಬುದನ್ನು ಮೂರ್ತಿರಾಯರು ವಿವರಿಸಿದ್ದಾರೆ. 'ದಿವಾನಖಾನೆಯ ಅಂದ ಚೆಂದ' ಈ ದೃಷ್ಟಿಕೋನದಿಂದ ರಚಿಸಿದ ಲಲಿತಪ್ರಬಂಧವೆಂಬುದನ್ನಿಲ್ಲಿ ನೆನೆಯಬಹುದು. ವಸ್ತು ಪ್ರಪಂಚದ ಸುಖ ಸಾಮಗ್ರಿಗಳಿಗಿಂತ ಮಾನವೀಯ ಮೌಲ್ಯಗಳನ್ನು ಮುಖ್ಯವೆಂದು ಭಾವಿಸುವ ಮೂರ್ತಿರಾಯರ ಮನೋಧರ್ಮದಲ್ಲಿ ''ಮಕ್ಕಳ ಪಾದಧೂಳಿಯಿಂದ ಮಲಿನವಾಗುವ ಶರೀರವೇ ಧನ್ಯ'' - ಎಂಬ ಭಾವನೆ ವ್ಯಕ್ತವಾಗುತ್ತದೆ. ಈ ಭಾವನೆಯೂ ಮಾನವ ದಯಾಮೃತಕ್ಕೆ ಸೇರುವ ಅಂಶವೇ ಆಗಿದೆ.

ಕೊನೆಯದಾಗಿ, 'ಅಪರ ವಯಸ್ಕನ ಅಮೆರಿಕಾ ಯಾತ್ರೆ'ಗೆ ಸಂಬಂಧಪಟ್ಟಂತೆ ವಿಶೇಷವಾಗಿ ಹೇಳಬೇಕಾದ ಕೆಲವು ಮಾತುಗಳಿವೆ: ಮೂರ್ತಿರಾಯರು ತಮ್ಮ 'ಅನುಭವ ನಿರೂಪಣೆ'ಯಲ್ಲಿ ಅಮೆರಿಕಾ ಮತ್ತು ಭಾರತ ಇವೆರಡು ಸಂಸ್ಕೃತಿಗಳನ್ನು ಪರಸ್ಪರ ಮುಖಾಮುಖಿಯಾಗಿಸುವ ಬಗೆ ವಿಚಾರಪೂರ್ಣವಾಗಿದೆ. ಭಾರತೀಯ ಸಂಸ್ಕೃತಿಯ ಬಗ್ಗೆ ಪ್ರಚಲಿತವಾಗಿರುವ ವೀರಾವೇಶ, ಅಂಧಾಭಿಮಾನಗಳ ಪ್ರದರ್ಶನಕ್ಕೆ ಇಳಿಯದ ಮೂರ್ತಿರಾಯರು ಅಮೆರಿಕನ್ ಸಂಸ್ಕೃತಿಯ ಬಗ್ಗೆ ಜಿಹಾಸೆಯಿಂದ ಮೈ ಪರಚಿಕೊಳ್ಳದೆ, ಸಿನಿಕತನಕ್ಕೆ ಎಡೆಗೊಡದೆ, ವಸ್ತುನಿಷ್ಠ ನೆಲೆಯಲ್ಲಿ ನಿಂತು ವ್ಯಾಖ್ಯಾನಿಸುವ ಕ್ರಮ ಮನನೀಯವಾಗಿದೆ. ಮೂರ್ತಿರಾಯರ ಪರಿಶೀಲನೆಯಲ್ಲಿ ಆಧುನಿಕ ಯಂತ್ರ ನಾಗರಿಕತೆಗೆ ತಕ್ಕಂತೆ ವೇಗವಾಗಿ ಸಾಗುತ್ತಿರುವ, ಆದರೆ ಕ್ರಮಕ್ರಮವಾಗಿ ಮಾನವೀಯ ಮೌಲ್ಯಗಳು ಹಿಂದೆ ಸರಿಯುತ್ತಿರುವ, ಅಮೆರಿಕನ್ ಸಮಾಜದ ಚಿತ್ರಣ ಎದ್ದು ಕಾಣುತ್ತದೆ. ಈ ಬಗೆಯ ಚಿತ್ರಣದಲ್ಲಿ ಹಳ್ಳಿಗಾಡಿನ ದೇಶವೆನಿಸಿಕೊಂಡಿರುವ ಭಾರತದಂತಹ ರಾಷ್ಟ್ರಗಳಿಗೆ ಒದಗಿಸಿದ ಮುನ್ನೋಟ ಬಹುಮುಖ್ಯವಾಗಿದೆ. ಇಂತಹ ಕಡೆಗಳಲ್ಲಿ ಮೂರ್ತಿರಾಯರು ಯಾವುದೇ ವಿಧವಾದ ಪೂರ್ವಾಗ್ರಹ ಮತ್ತು ಸರಳ ತೀರ್ಮಾನಗಳ ಆಕರ್ಷಣೆಗೆ ತಮ್ಮನ್ನು ಅರ್ಪಿಸಿಕೊಳ್ಳುವುದಿಲ್ಲವೆಂಬುದು ವಿಶೇಷವಾಗಿದೆ.

ವಿ. ಚಂದ್ರಶೇಖರ ನಂಗಲಿ
೩೮೮, ಪಿ. ಸಿ. ಬಡಾವಣೆ, ಕೋಲಾರ - ೫೬೩ ೧೦೧

*(೪೦ನೇ ಪುಟದಿಂದ ಮುಂದುವರಿದಿದೆ)*

ಭಾರತದ ವಿಶ್ವವಿದ್ಯಾನಿಲಯಗಳಲ್ಲಿ ಜ್ಯೋತಿಷ ಮತ್ತು ಪೌರೋಹಿತ್ಯಗಳನ್ನು ಅಧ್ಯಯನ ವಸ್ತುಗಳನ್ನಾಗಿಸುವಂತಹ ಪ್ರತಿಗಾಮಿ ನೀತಿಗಳನ್ನು ಕೈಬಿಟ್ಟು ಈಗಾಗಲೇ ಚರ್ಚಿಸಿದಂತೆ ಉಚ್ಚ ಶಿಕ್ಷಣದ ಬಗ್ಗೆ ಸರಿಯಾದ ನೀತಿಯನ್ನು ಅನುಸರಿಸಬೇಕೆಂಬುದು ನನ್ನ ಸಲಹೆ. ಜ್ಯೋತಿಷ ಮುಂತಾದುವನ್ನು ಈಗಾಗಲೇ ಅಸ್ತಿತ್ವದಲ್ಲಿರುವ ಸಂಸ್ಕೃತ ಅಧ್ಯಯನಕ್ಕಾಗಿಯೇ ಪ್ರತ್ಯೇಕವಾಗಿ ಸ್ಥಾಪಿಸಲಾಗಿರುವ ವಿಶ್ವವಿದ್ಯಾನಿಲಯಗಳಿಗೆ ಒಪ್ಪಿಸಿದರೆ ಈ ರಗಳೆಯೇ ಇರುವುದಿಲ್ಲ.

ವೈಜ್ಞಾನಿಕ ದೃಷ್ಟಿಕೋನವನ್ನು ಬದಿಗಿಟ್ಟರೂ ಹಿಂದೂ ಧರ್ಮವೂ ಸೇರಿದಂತೆ ಎಲ್ಲ ಮತಧರ್ಮಗಳ ಮೌಲ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದರೆ ಜ್ಯೋತಿಷ ತೀರ ಅಸಮಂಜಸ ಎನಿಸುತ್ತದೆ. ಉಪನಿಷತ್ತುಗಳು ಮತ್ತು ಭಗವದ್ಗೀತೆಯಲ್ಲಿಯೇ ಹೇಳಿರುವಂತೆ ಮತ್ತು ಹಿಂದೂ ಧರ್ಮದ ಮೂಲತತ್ವಗಳ ಪ್ರಕಾರವೇ ಮನುಷ್ಯನ ಬದುಕು ಅವನ ಕರ್ಮಫಲಗಳನ್ನು ಹೊಂದಿಕೊಂಡಿದೆ. ನಕ್ಷತ್ರಗಳಿಗೆ, ಗ್ರಹಗಳಿಗೆ ಇಲ್ಲಿ ಯಾವ ಪಾತ್ರವೂ ಇರುವುದಿಲ್ಲ. ಜ್ಯೋತಿಷ ಎಂದಿಗೂ ಭಾರತೀಯ ತತ್ವಶಾಸ್ತ್ರದ ಭಾಗವೆನಿಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿ ಸಮಕಾಲೀನ ಮೌಲ್ಯಗಳಿಗೆ ಅನುಸಾರವಾಗಿ ಜನತೆಯ ಮತ್ತು ರಾಷ್ಟ್ರದ ಹಿತದೃಷ್ಟಿಯಲ್ಲಿ ಇಂದಿನ ಶಿಕ್ಷಣ ವ್ಯವಸ್ಥೆಯ ಅವಶ್ಯಕತೆಗಳನ್ನು ಅರಿತು ಸರಕಾರ ಹಾಗೂ ವಿಶ್ವವಿದ್ಯಾನಿಲಯ ಸಹಾಯಧನ ಆಯೋಗಗಳು ತಮ್ಮ ರೀತಿ ನಿಯಮಗಳನ್ನು ಬದಲಾಯಿಸಿಕೊಳ್ಳಬೇಕಾಗಿದೆ.

ಪ್ರೊ|| ಎಂ. ವಿ. ನಾಡಕರ್ಣಿ
ಉಪಕುಲಪತಿ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫ ೧೦೬



## ಪಂಚಮುಖಿ ಪಂಜಾಬ್ (ಪ್ರವಾಸಾನುಭವ)

*ಜೆ. ಪಿ. ಬಸವರಾಜು*

**ಪುಟ :** ೧೪೪ **ಬೆಲೆ : ರೂ.** ೬೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

*ಪಂಜಾಬ್ ರಾಜ್ಯದ ಪ್ರವಾಸ ಕಥನ. ತನ್ನ ವೈಯಕ್ತಿಕ ಎನ್ನ ಬಹುದಾದ ಹೆಚ್ಚಿನ ಅಂಶಗಳನ್ನು ಬದಿಗೆ ಸರಿಸಿ ತಾನು ನೋಡಿದ ತಿಳಿದುಕೊಂಡ ವಿಷಯಗಳನ್ನು ಪ್ರಬಂಧಗಳ ರೂಪದಲ್ಲಿ ದಾಖಲಿಸಿದ ಅಪೂರ್ವ ಕೃತಿ. ಪ್ರವಾಸಾನುಭವಗಳನ್ನು ತನ್ನಿಂದ ಇತರರಿಗೆ ದಾಟಿಸುವ ಒಂದು ಸೇತುವೆಯಂತಿರುವ ಈ ಕೃತಿಯ ಬೆಳವಣಿಗೆಯಂತೂ ತುಂಬ ಚೇತೋಹಾರಿ. ನಿರೂಪಣೆಯಲ್ಲಿ ಸಂಭ್ರಮ ಉತ್ಸಾಹ ಎರಡೂ ಇವೆ. ಓದಲು ತೊಡಗಿದರೆ ಓದುಗನಲ್ಲೂ ಅದೇ ಭಾವನೆ.*



## ಐಷಾರಾಮದ ಆಳದಲ್ಲಿ (ಪ್ರವಾಸ ಕಥನ)

*ಸಾರಾ ಅಬೂಬಕ್ಕರ್*

**ಪುಟ :** ೧೭೨ **ಬೆಲೆ : ರೂ.** ೭೫

**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಮೈಕ್ರೊವೇವ್ ಸ್ಟೇಷನ್ ರಸ್ತೆ, ಮಂಗಳೂರು - ೫೭೫ ೦೦೬

*ಡಾಲರ್ ಗಳಿಕೆಯ ಮಹತ್ವಾಕಾಂಕ್ಷೆಯಿಂದ ತಾಯ್ನಾಡಿಗೆ ವಿದಾಯ ಹೇಳುವ ಪ್ರಪಂಚದ ಪ್ರತಿಭೆಗಳನ್ನು ಧನಬಲದಿಂದ ಆಕರ್ಷಿಸಿ ದುಡಿಸಿ ಪ್ರಪಂಚವನ್ನೇ ಅಂಕೆಯಲ್ಲಿಟ್ಟುಕೊಳ್ಳಬಯಸುವ ಅಮೆರಿಕಾ ಈಗ ಪ್ರವಾಸಿಗಳ ಮೊದಲ ಆಯ್ಕೆ. ಇತ್ತೀಚೆಗೆ ಇದನ್ನು ಸಂದರ್ಶಿಸಿ ಬಂದ ಲೇಖಕಿ ಶ್ರೀಮತಿ ಸಾರಾ ಅಬೂಬಕ್ಕರ್ ಇದನ್ನು ಚಿನ್ನದ- ಹೊನ್ನಿನ ನಾಡೆಂದು ವರ್ಣಿಸುತ್ತ ತಮ್ಮ ಪ್ರವಾಸ ಅನುಭವಗಳನ್ನು ಅಲ್ಲಿನ ಐಷಾರಾಮದ ಜೀವನವನ್ನು ಸ್ವರ್ಗ ಸಮಾನ ಮಾತ್ರವಲ್ಲ ಸ್ವರ್ಗವೇ ಎಂದು ಬಣ್ಣಿಸಿದ್ದಾರೆ.*



## ಥಾಯ್‌ಲ್ಯಾಂಡ್ ಇಂಡೋನೇಶಿಯಾ ತಿರುಗಾಟ

*ಗುರುಮೂರ್ತಿ ಪೆಂಡಕೂರು*

**ಪುಟ :** ೧೫೪ **ಬೆಲೆ : ರೂ.** ೬೫

**ಯುವಕರ ಸಂಘ,** ರಾಮನಗರ, ಹಗರಿಬೊಮ್ಮನಹಳ್ಳಿ-೫೮೩ ೨೧೨

*ತಮ್ಮ ಪ್ರವಾಸದ ಅವಧಿಯಲ್ಲಿ ನಾಣ್ಯ-ಶಾಸನ-ಸ್ಥಳನಾಮ ಇವುಗಳತ್ತ ಹೆಚ್ಚಿನ ಗಮನವಿಟ್ಟು ಸಂಚರಿಸಿದ ಲೇಖಕರು ಭಾರತೀಯ ಸಂಸ್ಕೃತಿಯೇ ಹಿಂದೆ ಬಹಳ ದೂರದವರೆಗೂ ಹರಡಿ ಇಂಡೋನೇಶಿಯಾ ಥಾಯ್‌ಲ್ಯಾಂಡ್‌ನ್ನು ತಲುಪಿ ತನ್ನ ಛಾಪು ಮೂಡಿಸಿತ್ತೆಂದು ಅಭಿಪ್ರಾಯಪಡುತ್ತಾರೆ. ಅಲ್ಲಿನ ಹಿಂದೂ ದೇವಾಲಯ, ಬೌದ್ಧ ಸ್ಮಾರಕ, ಮೂರ್ತಿಶಿಲ್ಪಗಳನ್ನವಲೋಕಿಸಿದಾಗ ಅನ್ಯವಲ್ಲದ ಆತ್ಮೀಯಭಾವನೆ ಮೂಡಿಸುವ ನಮ್ಮ ಪುರಾಣ ಕಥೆಗಳನ್ನೇ ಹೋಲುವ ಬಹಳಷ್ಟು ವಿಷಯಗಳನ್ನು ಸಂಗ್ರಹಿಸಿ ನಮಗಾಗಿ ಕಥೆ ಹೇಳುವ ಕಲೆಗಾರಿಕೆಯೊಂದಿಗೆ ನಮ್ಮ ಮುಂದಿಟ್ಟಿದ್ದಾರೆ.*



## ಆರ್ಯಭಾಷಾ ವ್ಯಾಸಂಗ (ಆರ್ಯಭಾಷೆಗಳ ತೌಲನಿಕ ವ್ಯಾಕರಣ)

*ಡಾ|| ಸಂಗಮೇಶ ಸವದತ್ತಿಮಠ*

**ಪುಟ :** ೧೧೦ **ಬೆಲೆ : ರೂ.** ೬೦

**ರೂಪರಶ್ಮಿ ಪ್ರಕಾಶನ,** ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

*ಕನ್ನಡ ಭಾಷಾ ವಿಜ್ಞಾನದ ಪರಿಣತರಲ್ಲೊಬ್ಬರಾದ ಈ ಲೇಖಕರು ಬಹುಭಾಷೆಗಳಲ್ಲಿನ ಮೂಲಗ್ರಂಥಗಳನ್ನು ಅಭ್ಯಾಸ ಮಾಡಿ ಬರೆದಿರುವ ಆರ್ಯಭಾಷೆಗಳಲ್ಲಿನ ತುಲನಾತ್ಮಕ ವ್ಯಾಕರಣದ ಅಂಶಗಳನ್ನು ಭಾಷಾ ಪರಿಚಯ ಸಹಿತ ಸಂಕ್ಷಿಪ್ತ-ಸರಳವಾಗಿ ನಿರೂಪಿಸಿದ್ದಾರೆ. ಭಾಷಾವ್ಯಾಸಂಗದ ವಿದ್ಯಾರ್ಥಿಗಳಿಗಂತೂ ಅತ್ಯುಪಯುಕ್ತ ಕೃತಿ. ಆರ್ಯಭಾಷೆಗಳ ಅಧ್ಯಯನಕ್ಕೂ ಸಹಕಾರಿಯಾಗಬಲ್ಲುದು. ಆರ್ಯ-ದ್ರಾವಿಡರ ಮಧ್ಯೆ ಅನೇಕ ಶಬ್ದಗಳ ಕೊಡು-ಕೊಳ್ಳುವಿಕೆಯ ಸಾಧ್ಯತೆಯ ಪ್ರಸ್ತಾಪವಿದೆ.*



## ಕೆಡಹಬಲ್ಲರು ಅವರು ಕಟ್ಟಬಲ್ಲೆವು ನಾವು (ಕವನಗಳು)

*ಅಲ್ಲಮಪ್ರಭು ಬೆಟ್ಟದೂರು*

**ಪುಟ :** ೫೮ **ಬೆಲೆ : ರೂ.** ೩೫

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

*ಮಾಡಬೇಕಾದ ಸತ್ಕಾರ್ಯವನ್ನು ಮಾಡದೆ ಮಾಡಬಾರದ ದುಷ್ಕೃತ್ಯಗಳಿಗೆ ಕೈಹಾಕಿದಾಗ ಇಂಥ ಕವನಗಳು ಸಿಡಿಮಿಡಿಗುಟ್ಟುತ್ತ ಸಿಡಿಯುತ್ತವೆ. ಬಂಡಾಯ ಪ್ರವೃತ್ತಿಯ ಇಲ್ಲಿನ ಎಲ್ಲ ಕವನಗಳೂ ಈ ದೇಶವನ್ನು ಸರಿಪಡಿಸಲಾರದವರ ಮೇಲೆ ಹಾಯುತ್ತಲೇ ಮುನ್ನುಗ್ಗಿವೆ. ಕವಿಯ ಭಾಷೆ ಬಿಲ್ಲಿನಿಂದ ಬಿಟ್ಟ ಬಾಣದಂತೆ ನೇರ ಹಾಗೂ ವೇಗವುಳ್ಳದ್ದು. ಜನಸಾಮಾನ್ಯರನ್ನು ಸಹೃದಯರನ್ನು ತಲುಪುವುದೊಂದೇ ಅದರ ಗುರಿ. ಕವಿತೆಗಳೊಂದಿಗೆ ಕೆಲವು ಚುಟುಕುಗಳೂ ಇವೆ.*

## ಸ್ವಾರ್ಥಿಗಳ ಸ್ವರ್ಗ (ನಾಟಕ)

*ಕೇಶವ ಉಮರ್ಜಿ*

**ಪುಟ :** ೧೧೪ **ಬೆಲೆ : ರೂ.** ೨೫

**ಶ್ರೀಗಂಧ ಸಾಹಿತ್ಯ ಪ್ರಕಾಶನ,** ಹುನ್ನೂರು - ೫೮೭ ೧೧೯ ತಾ. ಜಮಖಂಡಿ, ಜಿ. ಬಾಗಲಕೋಟೆ

*ಭ್ರಷ್ಟ ರಾಜಕಾರಣ ಈ ನಾಟಕದ ಕಥಾವಸ್ತು. ಇಲ್ಲಿನ ಸಮಾಜ ಕಂಟಕನೊಬ್ಬ ಅಧಿಕಾರಿ ರಾಜಕಾರಣಿ, ಶ್ರೀಮಂತ, ಜೊತೆಗೆ ದೀರ್ಘಾಯುಷಿ. ಈತನ ಸುತ್ತ ನೆರೆದಿರುವ ದುಷ್ಟಕೂಟಕ್ಕೆ ಕಪಟ ಸ್ವಾಮೀಜಿಯೋರ್ವನ ಆಶೀರ್ವಾದದ ರಕ್ಷಣೆ. ಹೊಸತೇನೂ ಅಲ್ಲದ ಜನರ ಪಾಲಿಗೆ ನಿತ್ಯವಿಧಿಯಾಗಿರುವ ಈ ಗೋಳು ಭಾರತದ ಸ್ವಾತಂತ್ರ್ಯೋತ್ತರ ಚರಿತ್ರೆಯೆಂದರೂ ಸರಿಯೆ ! ಆದರೂ ಉತ್ತಮ ಆದರ್ಶವೊಂದರ ಗೆಲುವನ್ನು ಪ್ರತಿಪಾದಿಸುವ, ಋಜು ಮಾರ್ಗದ ಕಡೆ ದಾರಿ ತೋರಿಸುವ ಫಲಕ ಇಲ್ಲಿದೆ.*



## ಎಳನಿಂಬೆ (ಆತ್ಮಕಥನ)

*ರಾಮದಾಸ್*

**ಪುಟ :** ೧೬೪ **ಬೆಲೆ : ರೂ.** ೭೫

**ಸುಮಂತ ಪ್ರಕಾಶನ,** ೧-೧೮೩, ಗಾಳದ ಕಟ್ಟೆ ರಸ್ತೆ, ಉಪ್ಪಿನ ಕೋಟೆ, ಬ್ರಹ್ಮಾವರ - ೫೭೬ ೨೧೩

*ಈ ಆತ್ಮಚರಿತ್ರೆ ಒಂದು ಸಾಹಸಗಾಥೆ. ಬಾಲ್ಯದಲ್ಲಿನ ತಮ್ಮ ಬಡತನದ ದೆಸೆಯಿಂದಾಗಿ ಎದುರಾದ ಅತೀವ ದುಃಖಮಯ ಸನ್ನಿವೇಶಗಳನ್ನು ಪುಟ್ಟ ಬಾಲಕನಾಗಿ ಮುಗ್ಧತೆಯಿಂದ ಸ್ವೀಕರಿಸಿದ ರೀತಿ, ಅವರ ತಾಳ್ಮೆ ನಾವು ಮೆಚ್ಚುವಂತಿದೆ. ಅಂಥ ಕಷ್ಟದ ಕುಲುಮೆಯಲ್ಲಿ ಬೆಂದು ಪಕ್ವವಾಗಿ ಎಂಥ ಪರಿಸ್ಥಿತಿಯಲ್ಲೂ ಸಾಹಿತ್ಯದ ನಂಟು ಬಿಡದೆ, ಓದಿಗೆ ಬೆನ್ನು ತೋರಿಸದೆ ಮುಂದೆ ಎಲ್ಲ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿ ಪ್ರಶಸ್ತಿ ಗಳಿಸಿದ ಲೇಖಕರ ಬಾಲ್ಯದ ಕಥೆ.*

## ಬದುಕು (ಕಾದಂಬರಿ)

*ಗೀತಾ ನಾಗಭೂಷಣ*

**ಪುಟ :** ೫೦೫ **ಬೆಲೆ : ರೂ.** ೧೯೦

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - ೫೮೩ ೧೦೩

*ವೈಭವೋಪೇತವಾದ ಜೀವನವನ್ನು ಇನ್ನಷ್ಟು ಹಿಗ್ಗಿಸಿ ಸಾಹಿತ್ಯ ರಚಿಸುವ ಲೇಖಕರ ಮಧ್ಯೆ ಶ್ರೀಮತಿ ಗೀತಾ ನಾಗಭೂಷಣ ಕೆಳವರ್ಗದ ನಿರ್ಗತಿಕರ ಬದುಕಿನ ದಾರುಣ ಬದುಕನ್ನು ಇದ್ದಂತೆಯೇ ದಾಖಲಿಸುತ್ತ, ಅದರ ನೋವುಗಳನ್ನು ಮಾನವೀಯತೆಯಿಂದ ಸಹಾನುಭೂತಿಯಿಂದ ತಿಳಿಸುವ ವಿಶಿಷ್ಟ ಲೇಖಕಿ. ಮನುಷ್ಯ ಸಂಬಂಧಗಳನ್ನು ಮಾತ್ರ ಮಾನವೀಯ ನೆಲೆಯಿಂದ ಹುಡುಕಾಡಿ ಹೆಣೆದ ಈ ಕಾದಂಬರಿಯಲ್ಲಿ ಶೋಷಿತ ಜನರ ಬದುಕಿನ ಎಷ್ಟೋ ಮುಖಗಳು ಕಾಣಸಿಗುತ್ತವೆ. ಅವಕ್ಕೆ ಕೊನೆಯಿರುವುದಿಲ್ಲ.*

**- ಇಂದಿರಾ ಕುಮಾರಿ**

# ಆರೋಗ್ಯ - ಜನ ಮತ್ತು ಲಾಭಾಸಕ್ತ ಗುಂಪು

೧೯೭೮ರಲ್ಲಿ ಭಾರತ ಸರ್ಕಾರವು ತಜ್ಞವೈದ್ಯರ ಒಂದು ಆಯೋಗವನ್ನು ನೇಮಿಸಿತು. ಭಾರತಕ್ಕೆ ಯೋಗ್ಯವಾದ ಆರೋಗ್ಯ ನೀತಿಯನ್ನು ರೂಪಿಸುವುದು ಆ ಆಯೋಗದ ಕೆಲಸವಾಗಿತ್ತು. ಮೂರು ವರ್ಷಗಳ ಕಾಲ ಅಧ್ಯಯನ ನಡೆಸಿ ೧೯೮೧ರಲ್ಲಿ ಆಯೋಗವು ತನ್ನ ವರದಿಯನ್ನು ಸಲ್ಲಿಸಿತು. ಭಾರತದ ಆರೋಗ್ಯ ಸಮಸ್ಯೆಯನ್ನು ಆ ವರದಿಯು ಕೂಲಂಕಷವಾಗಿ ಪರಿಶೀಲಿಸಿದ ಬಳಿಕ ಈ ಕೆಳಗಿನ ಅಂಶಗಳನ್ನು ಒತ್ತಿ ಹೇಳಿತು:

ಭಾರತದಲ್ಲಿ ಜನರ ಆರೋಗ್ಯವನ್ನು ನಿರ್ಧರಿಸುವ ಅಂಶಗಳು ಆರ್ಥಿಕವಾದವು ಮತ್ತು ಸಾಮಾಜಿಕವಾದವು. ಬಡತನ ಆರ್ಥಿಕ ಅಂಶವಾದರೆ, ಅಪೌಷ್ಟಿಕತೆ, ಸ್ತ್ರೀ ಶಿಕ್ಷಣದ ಕೊರತೆ, ಕುಡಿಯುವ ನೀರಿನ ಅಸ್ವಚ್ಛತೆ, ವಸತಿಹೀನತೆ ಮತ್ತು ಪರಿಸರದ ಅನಾರೋಗ್ಯಕರ ಮಾಲಿನ್ಯಗಳು ಸಾಮಾಜಿಕ ಅಂಶಗಳಾಗಿವೆ.

ಹೀಗಾಗಿ ಭಾರತಕ್ಕೆ ಯೋಗ್ಯವಾದ ನೀತಿಯು ಔಷಧಿಗಳು ಮತ್ತು ಅವುಗಳ ಸರಬರಾಜಿಗೆ ಗಮನಹರಿಸಿದರಾಗಲಿಲ್ಲ. ಬದಲಿಗೆ, ಹೆಚ್ಚು ಸಮಗ್ರವಾಗಿದ್ದು ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲೂ ಕಾರ್ಯಶೀಲವಾಗಬೇಕು.

ಭಾರತದ ಜನಸಾಮಾನ್ಯದ ಆರೋಗ್ಯಸ್ಥಿತಿ ಸುಧಾರಿಸಬೇಕಿದ್ದಲ್ಲಿ ಈಗಿರುವ ವೈದ್ಯಕೀಯ ಸೇವೆಯನ್ನು ವಿಸ್ತೃತಗೊಳಿಸಿದರೆ ಸಾಲದು; ಬಡತನವನ್ನೂ ತೊಲಗಿಸಬೇಕು, ಅನಕ್ಷರತೆಯನ್ನೂ ತೊಲಗಿಸಬೇಕು. ಶಿಕ್ಷಣವನ್ನು ಇನ್ನಷ್ಟು ವಿಸ್ತೃತಗೊಳಿಸುವುದರೊಂದಿಗೆ ಬಡವರನ್ನು ಇನ್ನಷ್ಟು ಸಶಕ್ತರನ್ನಾಗಿ ಮಾಡಬೇಕೆಂದು ವರದಿಯು ಅಸಂದಿಗ್ಧವಾಗಿ ಸಾರಿತು.

ಈ ವರದಿ ಪ್ರಕಟಗೊಂಡು ೨೦ ವರ್ಷಗಳಾದವು. ವರದಿಯು ಶಿಫಾರಸ್ಸು ಮಾಡಿದ ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಕಾರ್ಯಗತವಾಗಿವೆ ಎಂದು ನೋಡಿದರೆ ನಿರಾಶೆಯಾಗುತ್ತದೆ. ವರದಿ ಪ್ರಕಟವಾದ ಕಾಲದಲ್ಲಿ ಜನರ ಆರೋಗ್ಯಪರಿಸ್ಥಿತಿಯು ಹೇಗಿತ್ತೋ ಈಗಲೂ ಹಾಗೆಯೇ ಇದೆ. ಒಂದು ರೀತಿಯಿಂದ ಇನ್ನಷ್ಟು ವಿಷಮಿಸಿದೆ.

**ಹೀಗೇಕಾಯಿತು ?**

ಈ ಪರಿಸ್ಥಿತಿಗೆ ಕಾರಣಗಳು ಎರಡು :

೧) ಜನಸಾಮಾನ್ಯದ ವಿವೇಚನಾರಹಿತ ಜಡತ್ವ;

೨) ಸ್ವಂತದ ಹಿತಾಸಕ್ತಿಗಳಿಗಾಗಿ ಒತ್ತಡಗಳಿಗೆ ಬಾಯ್ಬಿಡುವ ಸರ್ಕಾರಗಳ ನಿರ್ಲಜ್ಜತನ.

ನಮ್ಮ ಜನಸಾಮಾನ್ಯರು ವಿವೇಚನಾರಹಿತವಾಗಿ ಸ್ಪಂದನಶೂನ್ಯವಾಗಿರುವುದು ಸರ್ಕಾರಗಳಿಗೂ ಲಾಭಾಸಕ್ತರಿಗೂ ವರದಾನವಾಗಿದೆ. ಆಡಳಿತ ಯಂತ್ರದ ಕೀಲುಗಳಾದ ನೌಕರರಿಗೂ ಜನಸಾಮಾನ್ಯದ ಈ ದೌರ್ಬಲ್ಯ ತಿಳಿದಿದೆ. ಸರ್ಕಾರಗಳು - ನೌಕರಶಾಹಿ - ಲಾಭಾಸಕ್ತ ಬಂಡವಾಳಗಾರರು ಇವರ ಮೈತ್ರಿಯು ಜನರ ದೌರ್ಬಲ್ಯಗಳನ್ನು ಸದುಪಯೋಗಪಡಿಸಿಕೊಳ್ಳಲು ಉದ್ಯುಕ್ತವಾಗಿದೆ.

ಭಾರತದಲ್ಲಿ ಸಾವಿರಾರು ವರ್ಷಗಳಿಂದ ನಡೆದು ಬಂದ ಔಷಧಿಯ ಸಂಪ್ರದಾಯ ಶ್ರೀಮಂತವಾಗಿದೆ. ಈ ಪರಂಪರೆ ಪ್ರಾದೇಶಿಕ ಭಿನ್ನತೆಗಳನ್ನು ಅವಲಂಬಿಸಿದೆ; ನೈಸರ್ಗಿಕವಾಗಿದೆ; ಅಡ್ಡಪರಿಣಾಮರಹಿತವಾಗಿದೆ ಮತ್ತು ಊಹಿಸಲಾರದಷ್ಟು ಅಗ್ಗವಾಗಿದೆ. ಈ ಸಂಪ್ರದಾಯದ ವಕ್ತಾರರು ಪ್ರತಿ ಊರಿನಲ್ಲಿ ನಾಲ್ಕೈದು ಜನರಾದರೂ ಇರುತ್ತಾರೆ. ಆದರೆ ಈ ಔಷಧಗಳನ್ನು ಜನಸಾಮಾನ್ಯರು ಸದುಪಯೋಗಪಡಿಸಿಕೊಳ್ಳುವುದಿಲ್ಲ. ಔಷಧವೆಂದರೆ ಹಣ ತೆತ್ತೇ ತರಬೇಕು; ಹೆಚ್ಚು ಹಣ ತೆತ್ತಷ್ಟೂ ಔಷಧವು ಹೆಚ್ಚು ಪರಿಣಾಮಕಾರಿ ಎಂಬ ವಿವೇಚನಾರಹಿತ ತೀರ್ಮಾನಗಳಿಂದಾಗಿ ನಮ್ಮ ಜನರು ಸುಸಜ್ಜಿತ, ವರ್ಣರಂಜಿತ ಔಷಧಗಳಿಗೆ ಮೊರೆ ಹೋಗುತ್ತಿದ್ದಾರೆ. ಗುಳಿಗೆಗಳಿಗಿಂತ ಟಾನಿಕ್ಕು, ಟಾನಿಕ್ಕುಗಳಿಗಿಂತ ಇಂಜೆಕ್ಷನ್, ಇಂಜೆಕ್ಷನ್‌ಗಳಿಗಿಂತ ಆಪರೇಷನ್ನು ಹೆಚ್ಚು ಪರಿಣಾಮಕಾರಿ ಎಂಬ ಹುಚ್ಚಿಗೆ ಬಲಿಬಿದ್ದು ತಮ್ಮ ಸೀಮಿತ ಸಂಪನ್ಮೂಲಗಳನ್ನು ದುಂದುವೆಚ್ಚ ಮಾಡುವುದಲ್ಲದೆ ಶರೀರ ಧರ್ಮವನ್ನೂ ಪ್ರಕೃತಿಯ ಧರ್ಮವನ್ನೂ ಉಲ್ಲಂಘಿಸಿ ಇನ್ನಷ್ಟು ಕಷ್ಟಗಳಿಗೆ ತುತ್ತಾಗುತ್ತಾರೆ. ಇದಕ್ಕೆ ಒಂದು ಉದಾಹರಣೆ ಕೊಡುವುದಾದರೆ, ರಕ್ತಹೀನತೆಗೆ ಬಳಸಲಾಗುವ ಔಷಧಗಳತ್ತ ಕಣ್ಣು ಹಾಯಿಸಬಹುದು. ರಕ್ತಹೀನತೆ ನಮ್ಮ ದೇಶದ ಬಡಜನರನ್ನು - ಅದರಲ್ಲೂ ಮಹಿಳೆಯರನ್ನು - ಬಹಳವಾಗಿ ಕಾಡಿಸುವ ಒಂದು 'ಕಾಯಿಲೆ' (?). ರಕ್ತದಲ್ಲಿ ಕಬ್ಬಿಣದ ಅಂಶ ಮತ್ತು ಫಾಲಿಕ್ ಆಸಿಡ್‌ಗಳ ಕೊರತೆಯಾದಾಗ ಇದು ಕಾಣಿಸಿಕೊಳ್ಳುತ್ತದೆ. ರಕ್ತಹೀನತೆಯನ್ನು ಪರಿಹರಿಸಬಲ್ಲ ಗುಳಿಗೆಗಳು ಮಾರುಕಟ್ಟೆಯಲ್ಲಿ ಸಿಗುತ್ತವೆ. ಇವು ತೀರಾ ಅಗ್ಗದ ಬೆಲೆಯವು. ಆದರೆ ಅವುಗಳಿಗೆ ಬೇಡಿಕೆಯೇ ಇಲ್ಲ. ಬೇಡಿಕೆ ಇರುವುದು ಟಾನಿಕ್ಕುಗಳಿಗೆ. ಇಂತಹ ಟಾನಿಕ್ಕುಗಳು ೬೦ಕ್ಕಿಂತ ಹೆಚ್ಚು ಹೆಸರುಗಳಲ್ಲಿ ಸಿಗುತ್ತವೆ; ಗುಳಿಗೆಗಳು ಕೇವಲ ಆರು ಹೆಸರುಗಳಲ್ಲಿ ಮಾತ್ರ ಸಿಗುತ್ತವೆ !

> *ಭಾರತದಲ್ಲಿ ಇಂದು ಉತ್ಪಾದನೆಯಾಗುತ್ತಿರುವ ಔಷಧಗಳ ಸಂಖ್ಯೆ - ಸುಮಾರು ೬೦೦೦೦. ಇವುಗಳಲ್ಲಿ ಶಿಫಾರಸ್ಸು ಮಾಡಿದ ಸುಮಾರು ೨೫೦ ಔಷಧಿಗಳನ್ನು ಬಿಟ್ಟು ಉಳಿದವು ಲಾಭ ದೋಚುವುದಕ್ಕಾಗಿ ಉತ್ಪಾದನೆಯಾಗುವ ಅವೈಜ್ಞಾನಿಕ ಸಂಯುಕ್ತಗಳು.*

ಟಾನಿಕ್ಕುಗಳು ಗುಳಿಗೆಗಳಿಗಿಂತ ಹೆಚ್ಚು ದುಬಾರಿ. ಏಕೆಂದರೆ ಟಾನಿಕ್ಕುಗಳಲ್ಲಿ ವಿಟಮಿನ್ 'ಸಿ'ಯನ್ನು ಹೆಚ್ಚಾಗಿ ಸೇರಿಸಿರುತ್ತಾರೆ. ವಿಟಮಿನ್ 'ಸಿ' ಸೇರಿಸಿದಷ್ಟೂ ಟಾನಿಕ್ಕಿನ ಬೆಲೆ ಏರುತ್ತದೆ. ಇಲ್ಲಿ ತಮಾಷೆ ಏನೆಂದರೆ, ವಿಟಮಿನ್ 'ಸಿ' ರಕ್ತಹೀನತೆಗೆ ಸಂಬಂಧಿಸಿದ ವಿಟಮಿನ್ ಅಲ್ಲವೇ ಅಲ್ಲ. ಬೆಲೆ ಏರಿಕೆಯನ್ನು ಸಮರ್ಥಿಸಿಕೊಳ್ಳಲು ಔಷಧ ತಯಾರಕರು ಹೂಡಿದ ತಂತ್ರ, ಅದು ! ಹಾಗಿದ್ದರೂ ಟಾನಿಕ್ಕುಗಳು ಇನ್ನಷ್ಟು ಮತ್ತಷ್ಟು ಹೆಸರುಗಳಲ್ಲಿ ಮಾರ್ಕೆಟ್ಟಿಗೆ ಹೇಗೆ ಬರುತ್ತವೆ ? ಜನರ ಅಜ್ಞಾನವೇ ಔಷಧ ತಯಾರಕರ ಬಂಡವಾಳ. ಡಾ|| ಸಿ. ವಿ. ರಾಮನ್ನರು ಒಮ್ಮೆ ಹೇಳಿದ್ದರು: "ಭಾರತೀಯರು ಖರ್ಚು ಮಾಡುವ ಪ್ರತಿ ನೂರು ರೂಪಾಯಿಗಳಲ್ಲಿ ೯೫ ಅವರ ಅಜ್ಞಾನಕ್ಕೆ ತೆರಬೇಕಾದ ಬೆಲೆ !" ಎಂದು. ಅರ್ಧ ಶತಮಾನದ ಹಿಂದೆ ಅವರು ಆಡಿದ್ದ ಮಾತು ಇಂದಿಗೂ ಪ್ರಸ್ತುತವೆನಿಸುತ್ತದೆ.

ರಕ್ತಹೀನತೆಗೆ ಔಷಧವೇ ಬೇಕಾಗಿಲ್ಲ. ದಿನನಿತ್ಯದ ಆಹಾರದಲ್ಲಿ ಹೇರಳ ಸೊಪ್ಪು ತರಕಾರಿಗಳನ್ನು ಬಳಸುವುದರಿಂದ ರಕ್ತಹೀನತೆ ಬರುವುದೇ ಇಲ್ಲ. ಸೊಪ್ಪು ತರಕಾರಿಗಳನ್ನು ನಿರ್ಲಕ್ಷಿಸಿದ ಪರಿಣಾಮವೇ ದುಬಾರಿ ಟಾನಿಕ್ಕುಗಳ ಅನಿವಾರ್ಯತೆ ! 'ಕೈಯಿಂದ ಆಗುವ ಕೆಲಸಕ್ಕೆ ಕೊಡಲಿ ತಂದರು' ಎನ್ನುವುದು ಇಂತಹ ಪರಿಸ್ಥಿತಿಯನ್ನೇ !

ಅದೇ ರೀತಿ, ಶರೀರದ, ಕುಡಿಯುವ ನೀರಿನ ಹಾಗೂ ಮನೆಯ ಪರಿಸರದ ಸ್ವಚ್ಛತೆಗಳನ್ನು ಕಾಪಾಡಿಕೊಳ್ಳುವುದರಿಂದ ಇನ್ನೂ ಬಹಳಷ್ಟು ಕಾಯಿಲೆಗಳನ್ನು ತಡೆಗಟ್ಟಬಹುದು. ಉದಾ: ಅತಿಸಾರ, ಕಾಲರ ಮತ್ತು ಟಿಬಿ. ನಮ್ಮ ಜನರಿಗೆ ಇದೂ ಸಾಧ್ಯವಾಗುತ್ತಿಲ್ಲವೆಂದರೆ, ಅಜ್ಞಾನವೆನ್ನಬೇಕೇ ? ಜಡತ್ವ ಎನ್ನಬೇಕೇ ?

**ಲಾಭಾಸಕ್ತ ಗುಂಪುಗಳ ಮೈತ್ರಿಕೂಟ**

ಎಚ್ಚರವಿಲ್ಲದ ಜನರು ಚುನಾಯಿಸುವ ಸರ್ಕಾರಗಳು ಇನ್ನು ಹೇಗಿರುತ್ತವೆ ? ಜನರಷ್ಟೇ ನಿರ್ಲಕ್ಷ್ಯ, ಜನರಷ್ಟೇ ನಿರ್ಲಜ್ಜ ಮತ್ತು ಜನರಷ್ಟೇ ಸ್ಪಂದನಶೂನ್ಯವಾಗಿರಲಿಕ್ಕೇ ಬೇಕು ! ಚೀನಾ ದೇಶವು ೧೯೪೯ರಷ್ಟು ಹಿಂದೆಯೇ ಸರ್ವರಿಗೂ ಆರೋಗ್ಯ ಕಾರ್ಯಕ್ರಮವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದೆ. ಭಾರತಕ್ಕಿಂತ ವಿಸ್ತೀರ್ಣದಲ್ಲೂ ಜನಸಂಖ್ಯೆಯಲ್ಲೂ ಅಭಿವೃದ್ಧಿಯ ಸೂಚ್ಯಂಕದಲ್ಲೂ ಹಿಂದಿರುವ ಶ್ರೀಲಂಕಾ, ಕೊಸ್ಟಾರಿಕಾ, ಚಿಲಿಯಂತಹ ದೇಶಗಳು ತಮ್ಮ ಜನರಿಗೆ ಆರೋಗ್ಯ ಒದಗಿಸುವ ಕಾರ್ಯಕ್ರಮಗಳಲ್ಲಿ ಭಾರತಕ್ಕಿಂತ ಮುಂದಿವೆ. ಆ ಸೌಭಾಗ್ಯ ಭಾರತಕ್ಕೆ ಇನ್ನೂ ಒದಗಿಬಂದಿಲ್ಲ. ಭಾರತದ ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಆರೋಗ್ಯ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಹಣ ಬಜೆಟ್ ಪ್ರಮಾಣ ಶೇಕಡಾ ೩.೩ ರಷ್ಟು ಇತ್ತು. ಎರಡನೆಯ ಯೋಜನೆಯ ಕಾಲಕ್ಕೆ ಇದರ ಪ್ರಮಾಣ ಸ್ವಲ್ಪ ಕುಸಿದು, ಶೇ. ೩ ಕ್ಕೆ ಬಂತು. ಎಂಟನೆ ಪಂಚವಾರ್ಷಿಕ ಯೋಜನೆಯ ಅವಧಿ (೧೯೯೨-೯೭)ಯಲ್ಲಿ ಇದು ಬಜೆಟ್ ಪ್ರಮಾಣದ ೧.೭೫ಕ್ಕಿಳಿದಿದೆ. ಆರೋಗ್ಯಕ್ಕಾಗಿ ಮೀಸಲಿಟ್ಟ ಈ ಹಣದಲ್ಲೂ ಬಹುಪಾಲು ಕೇಂದ್ರೀಕೃತ ವ್ಯವಸ್ಥೆಯನ್ನು ಸಾಕುವುದಕ್ಕೇ ಖರ್ಚಾಗುತ್ತಿದೆ. ಮೆಡಿಕಲ್ ಕಾಲೇಜುಗಳು, ಅವುಗಳ ಸಿಬ್ಬಂದಿಯ ಸಂಬಳ - ಸಾರಿಗೆ,

ಎಂ. ವಿ. ಚಕ್ರಪಾಣಿ

ಸಿಬ್ಬಂದಿ ತರಬೇತಿ ಕೇಂದ್ರಗಳು ಮತ್ತು ಸಿಬ್ಬಂದಿ ತರಬೇತು ಸಂಸ್ಥೆಗಳೇ ಈ ಹಣವನ್ನು ನುಂಗಿಹಾಕುತ್ತಿವೆ. ಉಳಿದ ಅಲ್ಪಸ್ವಲ್ಪ ಗ್ರಾಮೀಣ ಮಟ್ಟಕ್ಕೆ ಇಳಿದುಬರುತ್ತದೆ. ಗ್ರಾಮೀಣ ಮಟ್ಟದ ಪ್ರಾಥಮಿಕ ಆರೋಗ್ಯಕೇಂದ್ರಗಳಲ್ಲಿ ಔಷಧಿ, ಸಿಬ್ಬಂದಿ ಮಾರ್ಗದರ್ಶನ, ಯಾವುದೂ ಇರುವುದಿಲ್ಲ.

೧೯೪೩ರಲ್ಲಿ ಪ್ರಕಟವಾದ ಬೋರೆ ವರದಿಯ ಪ್ರಕಾರ, ಆಗ ದೇಶದಲ್ಲಿ ಪ್ರತಿ ೬,೭೦೦ ಜನರಿಗೆ ಒಬ್ಬರು ವೈದ್ಯರು ಇದ್ದರು. ೧೯೯೩ರಲ್ಲಿ ಅವರ ಸಂಖ್ಯೆ ಪ್ರತಿ ೯೦೦ ಜನರಿಗೆ ಒಬ್ಬರಂತೆ ಹೆಚ್ಚಿದೆ. ಮಾತ್ರವಲ್ಲದೆ ಪ್ರತಿವರ್ಷವೂ ೧೩೦೦೦ ಹೊಸ ಪದವೀಧರ ವೈದ್ಯರು ಕಾಲೇಜುಗಳಿಂದ ಹೊರಬರುತ್ತಿದ್ದಾರೆ. ಇದು ೧೯೯೩ರ ಮಾತು. ೨೦೦೧ರಲ್ಲಿ ಈ ಸಂಖ್ಯೆ ಇನ್ನೂ ಹೆಚ್ಚಿದೆ. ಸುಮಾರು ಒಂದು ಮಿಲಿಯದಷ್ಟಾಗಬಹುದೆಂದು ಅಂದಾಜು ಮಾಡಲಾಗಿದೆ.

ವೈದ್ಯರ ಸಂಖ್ಯೆ ಇಷ್ಟು ಹೇರಳವಾಗಿದ್ದರೂ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವೈದ್ಯರ ಕೊರತೆ ಗಣನೀಯವಾಗಿರಲು ಕಾರಣವೇನು ? ಕಾರಣವಿಷ್ಟೆ : ಪದವಿ ಪಡೆದ ವೈದ್ಯರು ಪಟ್ಟಣಗಳಲ್ಲೇ 'ಸೇವೆ' ಸಲ್ಲಿಸಬಯಸುತ್ತಾರೆ. ೧೯೮೧ರ ಜನಗಣತಿಯ ಅಂಕಿ-ಅಂಶಗಳ ಪ್ರಕಾರ, ನೂರಕ್ಕೆ ೬೦ರಷ್ಟು ವೈದ್ಯರು ಪಟ್ಟಣಪ್ರದೇಶಗಳಲ್ಲಿ ನೆಲಸಿದ್ದರು. ಪಟ್ಟಣಗಳ ಜನಸಂಖ್ಯೆ ಭಾರತದ ಜನಸಂಖ್ಯೆಯ ಶೇ. ೨೫ರಷ್ಟು ಮಾತ್ರ! ಶೇ. ೨೫ ರಷ್ಟು ಜನಸಂಖ್ಯೆಗೆ ಶೇ. ೬೦ರಷ್ಟು ವೈದ್ಯಕೀಯ ಸೇವೆ. ಶೇ. ೭೫ರಷ್ಟಿರುವ ಗ್ರಾಮೀಣ ಪ್ರದೇಶಗಳಿಗೆ ಮಿಕ್ಕ ಶೇ. ೪೦ ರಷ್ಟು ವೈದ್ಯರ ಸೇವೆ ಮಾತ್ರ ಲಭ್ಯ !

ಬಡವರ ಮತ್ತು ಬಡತನದ ಕಾಯಿಲೆಗಳಾದ ಟಿಬಿ, ಮಲೇರಿಯಾ, ಅತಿಸಾರ, ಕಾಲರಾಗಳಿಗೆ ಸಂಬಂಧಿಸಿದ ಔಷಧ-ಚಿಕಿತ್ಸೆಗಳಿಗೆ ನಮ್ಮಲ್ಲಿ ಯಾವಾಗಲೂ ಕೊರತೆಯಿರುತ್ತದೆ. ಆದರೆ ನಗರವಾಸಿ ಶ್ರೀಮಂತರ ಕಾಯಿಲೆಗಳಾದ ಕ್ಯಾನ್ಸರ್, ಹೃದಯಾಘಾತ, ಲಕ್ವ, ಆರ್ಥರೈಟಿಸ್‌ಗಳ ಔಷಧ ಚಿಕಿತ್ಸೆಗಳಿಗೆ ಯಾವಾಗಲೂ ಕೊರತೆಯಿರುವುದಿಲ್ಲ.

ಲಾಭಾಸಕ್ತ ಔಷಧಿ ಕಂಪೆನಿಗಳಿಗೆ ಇನ್ನೇನು ಬೇಕು ? ಸರಕಾರಿ ಅಧಿಕಾರಿಗಳ ಸಹಯೋಗದೊಂದಿಗೆ ಈ ಕಂಪೆನಿಗಳು ಜನರನ್ನು ದೋಚುತ್ತವೆ. ಭಾರತದಲ್ಲಿ ಕಂಡುಬರುವ ಎಲ್ಲ ಕಾಯಿಲೆಗಳಿಗೂ ೧೧೭ ಔಷಧಗಳು ಸಾಕಾಗುತ್ತವೆ ಎಂದು ಶಿಫಾರಸ್ಸು ಮಾಡಿದ ಹಾಥೀ ಆಯೋಗವು ಔಷಧಿಗಳ ಅವೈಜ್ಞಾನಿಕ ಉತ್ಪಾದನೆಗೆ ತಡೆಹಾಕಬೇಕೆಂದು ಸರ್ಕಾರವನ್ನು ಒತ್ತಾಯಿಸಿತ್ತು (೧೯೭೫). ೧೯೯೮ರಲ್ಲಿ ಪ್ರಕಟವಾದ ಘಡ್ಕೆಯವರ ಪಠ್ಯಪುಸ್ತಕವು ೩೦ ಔಷಧಗಳು ಮಾತ್ರ ಸಾಕೆಂದು ಶಿಫಾರಸ್ಸು ಮಾಡಿತು. ೧೯೭೮ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯು ಶಿಫಾರಸ್ಸು ಮಾಡಿದ ಔಷಧಗಳ ಸಂಖ್ಯೆ ೨೫೮. ಪ್ರಾಥಮಿಕ ಆರೋಗ್ಯಕೇಂದ್ರಗಳಿಗೆ ಶಿಫಾರಸ್ಸಾದ ಔಷಧಗಳ ಸಂಖ್ಯೆ ಸುಮಾರು ೫೦. ಆದರೆ **ಭಾರತದಲ್ಲಿ ಇಂದು ಉತ್ಪಾದನೆಯಾಗುತ್ತಿರುವ ಔಷಧಗಳ ಸಂಖ್ಯೆ - ಸುಮಾರು ೬೦,೦೦೦. ಇವುಗಳಲ್ಲಿ ಶಿಫಾರಸ್ಸು ಮಾಡಿದ ಸುಮಾರು ೨೫೦ ಔಷಧಿಗಳನ್ನು ಬಿಟ್ಟು ಉಳಿದವು ಲಾಭ ದೋಚುವುದಕ್ಕಾಗಿ ಉತ್ಪಾದನೆಯಾಗುವ ಅವೈಜ್ಞಾನಿಕ ಸಂಯುಕ್ತಗಳು.**

ಔಷಧ ಕಂಪೆನಿಗಳು ಇಷ್ಟೊಂದು ಅವೈಜ್ಞಾನಿಕ ಔಷಧಗಳನ್ನು ಉತ್ಪಾದಿಸಲು ಹೇಗೆ ಸಾಧ್ಯವಾಯಿತು ? ಲಾಭಾಸಕ್ತ ಅಧಿಕಾರಿಗಳು ಮತ್ತು ರಾಜಕಾರಣಿಗಳ ಕೃಪೆಯಿಂದ. ಲಾಭಾಸಕ್ತರ ಮೈತ್ರಿಕೂಟ ಹೇಗೆ ಕೆಲಸ ಮಾಡುತ್ತದೆ ಎಂಬುದಕ್ಕೆ ಒಂದೆರಡು ನಿದರ್ಶನಗಳು.

'ಔಷಧ ಸಂಹಿತೆ' ಎಂಬುದು ಭಾರತದಲ್ಲಿ ಇಲ್ಲವೇ ಇಲ್ಲ. ಅಂತಹ ಸಂಹಿತೆಯೊಂದು ಬೇಕೆಂದು ಹಾಥೀ ಸಮಿತಿಯು ೧೯೭೫ರಷ್ಟು ಹಿಂದೆಯೇ ಶಿಪಾರಸ್ಸು ಮಾಡಿತ್ತು. ಆ ಶಿಫಾರಸ್ಸಿನ ಒಂದೇ ಒಂದು ಅಂಶವೂ ಇಂದಿನವರೆಗೂ ಕಾರ್ಯಗತವಾಗಿಲ್ಲ. ಔಷಧಿಗಳ ಉತ್ಪಾದನೆ ಮತ್ತು ಪರೀಕ್ಷೆಗಳನ್ನು ನಡೆಸುವ ಹೊಣೆ ಮೂರು ಇಲಾಖೆಗಳಲ್ಲಿ ಹಂಚಿಹೋಗಿದೆ. ಪ್ರಮುಖ ಪಾತ್ರ ವಹಿಸಬೇಕಾಗಿದ್ದ ಆರೋಗ್ಯ ಇಲಾಖೆಗೆ ನಿಯಂತ್ರಿಸುವ ಅಧಿಕಾರವಿಲ್ಲ. ಈ ಅಧಿಕಾರ ಹಂಚಿಹೋಗಿ ಮೂರಾ ಬಟ್ಟೆಯಾಗಿದೆ.




ಪ್ರಪಂಚದ ಇತರ ದೇಶಗಳಲ್ಲಿ ನಿಷೇಧಿತವಾದ ಅನಾಲ್ಜಿನನ್ನು ಭಾರತದಲ್ಲೂ ನಿಷೇಧಿಸಬೇಕೆಂದು ನಿರ್ಧರಿಸಿ, ಭಾರತ ಸರ್ಕಾರವು ೧೯೬೪ರಲ್ಲಿ ಔಷಧ ಕಂಪೆನಿಗಳಿಗೆ ಎಚ್ಚರಿಕೆ ಕೊಟ್ಟಿತು. ಅನಾಲ್ಜಿನ್ನಿನ ಉತ್ಪಾದನೆಯನ್ನು ಕಡಿಮೆ ಮಾಡುತ್ತಾ ಹೋಗಿ ಕೊನೆಗೆ ನಿಲ್ಲಿಸಿಬಿಡಬೇಕೆಂದು ಆ ಎಚ್ಚರಿಕೆಯ ಮುಖ್ಯಾಂಶ. ಯಾವ ವರ್ಷ ನಿಲ್ಲಿಸಬೇಕೆಂದು ಸ್ಪಷ್ಟವಾಗಿ ಹೇಳದೆ ಅಡ್ಡ ಗೋಡೆಯ ಮೇಲೆ ದೀಪವಿಟ್ಟಿತು. ಸರ್ಕಾರಿ ನಿಯಮದ ಈ ಸಂದಿಗ್ಧತೆಯನ್ನು ಔಷಧ ಕಂಪೆನಿಗಳು ಸರಿಯಾಗಿ ಬಳಸಿಕೊಂಡವು. ಸರ್ಕಾರದ ಆದೇಶವನ್ನು ಪಾಲಿಸುವಂತೆ ನಟಿಸುತ್ತಾ ಅನಾಲ್ಜಿನ್ ಉತ್ಪಾದನೆಯನ್ನು ಮುಂದುವರಿಸಿದವು. ೩೭ ವರ್ಷಗಳ ಬಳಿಕ ಇಂದಿಗೂ ಮುಂದುವರಿಸಿವೆ !

ಒಂದು ಜಾತಿಯ ಔಷಧಕ್ಕೆ ಮೂಲ ರಾಸಾಯನಿಕ ಹೆಸರು ಮಾತ್ರವೇ ಇರಬೇಕು. ಬೇರೆ ಬೇರೆ ಕಂಪೆನಿಗಳು ಬೇರೆ ಬೇರೆ ಹೆಸರುಗಳಲ್ಲಿ ಒಂದೇ ಜಾತಿಯ ಔಷಧ ಉತ್ಪಾದಿಸುವುದನ್ನು ನಿಷೇಧಿಸಬೇಕೆಂದು ಹಾಥೀ ಸಮಿತಿಯು ಆಗ್ರಹಪಡಿಸಿತ್ತು. ಅದನ್ನು ಸರ್ಕಾರ ಮಾನ್ಯ ಮಾಡಲಿಲ್ಲ.

ರಾಜಕಾರಣಿ - ಅಧಿಕಾರಿ - ಔಷಧ ಕಂಪೆನಿಯ ಮಾಲಿಕರ ಮೈತ್ರಿಕೂಟ ಕೆಲಸ ಮಾಡುವ ರೀತಿಗೆ ಇನ್ನೊಂದು ನಿದರ್ಶನವು ಬೆಲೆಗಳ ನಿಯಂತ್ರಣಕ್ಕೆ ಸಂಬಂಧಿಸಿದ್ದು.

ಭಾರತದಲ್ಲಿ ಔಷಧಗಳ ಬೆಲೆ ಪ್ರಪಂಚದಲ್ಲೇ ಅತಿ ಹೆಚ್ಚು. ಇದನ್ನು ನಿಯಂತ್ರಿಸಲು ಕೇಂದ್ರ ಸರ್ಕಾರ ಅರೆ ಮನಸ್ಸಿನಿಂದ ಒಂದು ಆದೇಶ ಹೊರಡಿಸಿತು. ೫೦ ಮಿ.ಲೀ. ನ ಸೀಸೆ ಔಷಧಕ್ಕೆ ಇಂತಿಷ್ಟೇ ಬೆಲೆ ನಿಗದಿಪಡಿಸಬೇಕೆಂದು ಆ ಆದೇಶದ ಸಾರವಾಗಿತ್ತು. ಈ ಆದೇಶ ಕಾರ್ಯರೂಪಕ್ಕೆ ಬರುವ ಮೊದಲೇ ಔಷಧ ಕಂಪೆನಿಗಳು ೫೦ ಮಿ.ಲೀ. ಸೀಸೆಗಳ ಬದಲಿಗೆ ೬೦ ಮಿ.ಲೀ. ಸೀಸೆಗಳಲ್ಲಿ ಔಷಧ ತುಂಬಿ ಮಾರುಕಟ್ಟೆಗೆ ಬಿಟ್ಟವು. ಅಂದರೆ ಸರ್ಕಾರಿ ಆದೇಶವು ಕಾರ್ಯರೂಪಕ್ಕೆ ಬರಲಾರದಂತೆ ನೋಡಿಕೊಂಡವು ! ಔಷಧ ಕಂಪೆನಿಗಳ ತಂತ್ರಗಳು ಅಧಿಕಾರಿಗಳಿಗೂ ರಾಜಕಾರಣಿಗಳಿಗೂ ಗೊತ್ತಿಲ್ಲವೆಂದೇ ? ಗೊತ್ತಿವೆ. ಅಲ್ಲಿಂದ ಬರುವ ಲಾಭದ ಮುಲಾಜು ಇವರ ಬಾಯಿಕಟ್ಟಿದೆ.

೧೯೪೮ರಲ್ಲಿ ನಮ್ಮ ದೇಶದಲ್ಲಿ ಉತ್ಪಾದನೆಯಾಗುತ್ತಿದ್ದ ಔಷಧಗಳ ಒಟ್ಟು ಬೆಲೆ ಸುಮಾರು ೧೦ ಕೋಟಿ. ೧೯೯೯ರಲ್ಲಿ ಇದು ೨೯,೦೦೦ ಕೋಟಿಗಳಿಗೆ ಏರಿತು.

೧೯೭೦ರಿಂದ ಈಚೆಗೆ ವಿಶ್ವಬ್ಯಾಂಕ್ ಮತ್ತು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳು ಔಷಧ ಕೈಗಾರಿಕೆಗಳ ಕಡೆಗೆ ಗಮನಹರಿಸತೊಡಗಿದವು. ದೇಶೀಯ ಸರ್ಕಾರಗಳು ಅವುಗಳ ಕೈಗೊಂಬೆಗಳಾದವು. ಔಷಧ ತಯಾರಿಸುವ ಕಂಪೆನಿಗಳಿಗೆ ಹೆಚ್ಚಿನ ರಿಯಾಯ್ತಿಗಳು ಸಿಗತೊಡಗಿದವು. ಆಮದು ಸುಂಕವನ್ನು ಇಳಿಸಲಾಯಿತು. 'ಜೀವರಕ್ಷಕ ರಾಸಾಯನಿಕಗಳು' ಎಂಬ ಅಡ್ಡ ಹೆಸರಿಟ್ಟು ವಿದೇಶಿ ಕಸಗಳನ್ನು ಆಮದು ಮಾಡಿಕೊಳ್ಳಲಾಯಿತು. ಪರಿಣಾಮವಾಗಿ, ಸರ್ಕಾರಗಳು ಜನಸಾಮಾನ್ಯರ ಆರೋಗ್ಯರಕ್ಷಣೆಯ ಬಗ್ಗೆ ಇನ್ನಷ್ಟು ಜಡವಾದವು.

ಜನರು ತಮ್ಮ ಆರೋಗ್ಯ ರಕ್ಷಣೆಗಾಗಿ ತಾವೇ ಮುಂದಾಗಬೇಕಾದ ದಿನಗಳು ಸನ್ನಿಹಿತವಾಗಿವೆ. ಜನಾರೋಗ್ಯ ಆಂದೋಲನವನ್ನು ಬಲಪಡಿಸಬೇಕಾದ ಹೊಣೆಯೂ ಈಗ ಜನರ ಬಳಿಗೆ ಬಂದಿದೆ.

ಎಂ. ವಿ. ಚಕ್ರಪಾಣಿ
ನಂ. ೧/೧೬೦, ಕುರುದಗಡ್ಡಿ, ವೆಂಕಟೇಶ್ವರ ಗುಡಿ ಹತ್ತಿರ.
ಹಗರಿಬೊಮ್ಮನಹಳ್ಳಿ - ೫೮೩ ೨೧೨

# ಇಕ್ಕೇರಿಯ ಆಕರ್ಷಕ ಅಘೋರೇಶ್ವರ ಆಲಯ



ಇತಿಹಾಸದ ಪುಟಗಳಲ್ಲಿ ತನ್ನದೇ ಆದಂತಹ ಹಿನ್ನೆಲೆಯನ್ನು - ಸ್ಥಾನವನ್ನು ಹೊಂದಿರುವ ಕನ್ನಡ ನಾಡಿನ ಸಣ್ಣ ಹಳ್ಳಿಯಾದ 'ಇಕ್ಕೇರಿ'ಯು ಅತ್ಯಾಕರ್ಷಕವಾದ ದೇವಾಲಯವೊಂದನ್ನು ಹೊಂದಿದೆ ಎಂದರೆ ಸೋಜಿಗ ಪಡಬೇಕಾಗಿಲ್ಲ. ನಮ್ಮ ನಾಡನ್ನಾಳಿದ ಅನೇಕ ರಾಜ ಮಹಾರಾಜರು ನಮ್ಮ ನೆಲದಲ್ಲಿ ಸುಂದರವಾದ ದೇವಾಲಯಗಳನ್ನು ನಿರ್ಮಿಸುವ ಮೂಲಕ ಕರ್ನಾಟಕದ ಶಿಲ್ಪಕಲಾ ಪರಂಪರೆಗೆ ಹೊಸ ರೀತಿಯ ಆಯಾಮವನ್ನು ನೀಡಿದ್ದೇ ಅಲ್ಲದೆ ಅದರ ಉನ್ನತಿಗೆ ಶ್ರಮಿಸಿದ್ದಾರೆ. ಅಂತೆಯೇ ಇಕ್ಕೇರಿಯ ಅಘೋರೇಶ್ವರ ವೀರಭದ್ರ ದೇವಾಲಯವು ಅಂತಹ ಪ್ರಯತ್ನಕ್ಕೊಂದು ಸೂಕ್ತ ಉದಾಹರಣೆಯಾಗಿ ನಿಲ್ಲುತ್ತದೆ ಎನ್ನಲಡ್ಡಿಯಿಲ್ಲ.

ಸಾಗರ ಪಟ್ಟಣದಿಂದ ದಕ್ಷಿಣಕ್ಕೆ ಸುಮಾರು ೩ ಕಿ.ಮೀ. ದೂರದ ಇಕ್ಕೇರಿಯು ಅನೇಕ ವರ್ಷಗಳ ಕಾಲ ಕೆಳದಿಯ ನಾಯಕರುಗಳ ರಾಜಧಾನಿಯಾಗಿ ಮೆರೆದಿತ್ತೆನ್ನಲಾಗಿದೆ. ಅಂದಿನ ನಾಯಕರು ತಮ್ಮ ರಾಜಧಾನಿಯನ್ನು ಬೇರೆ ಸ್ಥಳಕ್ಕೆ ವರ್ಗಾಯಿಸಿದ ನಂತರವೂ ಇಕ್ಕೇರಿಯ ನಾಣ್ಯಗಳು ಅದೇ ಹೆಸರಿನಿಂದ ಚಾಲನೆಯಲ್ಲಿದ್ದಂತಹ ಸಂಗತಿ ಇತಿಹಾಸದ ಪುಟಗಳಿಂದ ತಿಳಿದಾಗ ಅದಕ್ಕಿದ್ದ ಪ್ರಾಮುಖ್ಯತೆ ವ್ಯಕ್ತವಾಗುತ್ತದೆ. ಅದಕ್ಕೂ ಮಿಗಿಲಾಗಿರುವುದೇನೆಂದರೆ ಅಘೋರೇಶ್ವರ ದೇವಾಲಯ. ಇಕ್ಕೇರಿಯ ಅಂದಿನ ವಿಶೇಷ ಆಕರ್ಷಣೆಯಾಗಿದ್ದ ಅಘೋರೇಶ್ವರ ದೇವಾಲಯವು ವಿಶಾಲವಾಗಿ ಹಾಗೂ ಪ್ರಮಾಣಬದ್ಧವಾಗಿ ನಿರ್ಮಿಸಲ್ಪಟ್ಟ ಆಲಯವಾಗಿದೆ.

ದ್ರಾವಿಡ ಮತ್ತು ಹೊಯ್ಸಳ ಶೈಲಿಗಳೆರಡರ ಮಿಳಿತದಿಂದ ಕೂಡಿರುವ ಈ ಕಲಾತ್ಮಕವಾದ ಆಲಯದ ನಿರ್ಮಾಣದ ಕಾಲದ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗದಿದ್ದರೂ ಇದನ್ನು ೧೬ನೇ ಶತಮಾನದಲ್ಲಿ ನಿರ್ಮಿಸಿದರೆನ್ನಬಹುದಾಗಿದೆ. ಇಲ್ಲಿನ ಜಾಲಂದ್ರದಂತಹ ಕಿಟಕಿಗಳಲ್ಲಿ, ಮುಂದಿರುವ ನಂದಿ ಮಂಟಪದಲ್ಲಿ, ಕಮಾನುಗಳಲ್ಲಿ ಇಂಡೋ ಸಾರ್ಸನಿಕ್ ಶೈಲಿ ಎಂದು ಹೇಳಲ್ಪಡುವ ಗುಣಲಕ್ಷಣಗಳಿಂದ ಕೂಡಿದ ಕೆತ್ತನೆಗಳನ್ನೂ ಸಹ ನಾವು ಕಾಣಬಹುದಾದ್ದರಿಂದ ಈ ದೇಗುಲ ವಿಶೇಷವೆನ್ನಬಹುದು.

ಸದ್ದುಗದ್ದಲಗಳಿಂದ ದೂರವಾದ ಪ್ರಶಾಂತವಾದ ವಾತಾವರಣದ ನಡುವೆ ಇರುವ ಇಕ್ಕೇರಿಯ ದೇವಾಲಯವನ್ನು ದರ್ಶಿಸಲು ಮೆಟ್ಟಿಲೇರಿ ಆಲಯವನ್ನು ಪ್ರವೇಶಿಸುತ್ತಿದ್ದಂತೆ ಉತ್ತರ ಮುಖವಾಗಿರುವ ಮಹಾದ್ವಾರವು ಕಂಡುಬರುತ್ತದೆ. ಅದರ ಇಕ್ಕೆಲಗಳಲ್ಲಿ ೨ ಕಲ್ಲಿನ ಆನೆಗಳು ವೀಕ್ಷಕರಿಗೆ ಸ್ವಾಗತವನ್ನು ಬಯಸುವಂತೆ ನಿಂತಿವೆ. ಇಲ್ಲಿ ಅಲಂಕೃತಗೊಂಡ ಎತ್ತರದ ಮೇಲ್ಛಾವಣಿಗಳೂ ಸಹ ಗಮನ ಸೆಳೆಯುವಂತಿವೆ. ದೇವಾಲಯದ ಒಂದೆಡೆ ನೆಲದ ಮೇಲೆ ಕೆಳದಿಯ ಮುಖ್ಯಸ್ಥರು ಪ್ರಮಾಣವನ್ನು ಸಲ್ಲಿಸುತ್ತಿರುವಂತೆ ಚಿತ್ರವೊಂದನ್ನು ಚಿತ್ರಿಸಲಾಗಿದೆ. ವೀಕ್ಷಕರ ಗಮನವನ್ನು ಅದು ಸೆಳೆಯುತ್ತದೆ. ದೇವಾಲಯವು ಗರ್ಭಗೃಹ, ತೆರೆದ ಸುಕನಾಸಿ ಹಾಗೂ ವಿಶಾಲವಾದ ಮುಖಮಂಟಪವನ್ನು ಹೊಂದಿದೆ. ಈ ದೇಗುಲಕ್ಕೆ ಪೂರ್ವ, ಪಶ್ಚಿಮ ಹಾಗೂ ಉತ್ತರ ದಿಕ್ಕುಗಳಿಂದ ಪ್ರವೇಶಿಸಲು ಅನುಕೂಲವಾಗುವಂತಹ ದ್ವಾರಗಳಿವೆ. ಗರ್ಭಗೃಹದ ಸುತ್ತಲೂ ಕಿರಿದಾದ ಓಣಿಯಂತಹ ಜಾಗವಿದ್ದು ಬಹುಶಃ ಅದನ್ನು ಹಿಂದಿನ ದಿನಗಳಲ್ಲಿ ಪ್ರದಕ್ಷಿಣಾ ಪಥದಂತೆ ಬಳಸುತ್ತಿದ್ದರೆನಿಸುತ್ತದೆ.

ಈ ದೇವಾಲಯದಲ್ಲಿ ನವರಂಗವು ಕಂಡುಬರುವುದಿಲ್ಲವಾದರೂ ಸುಂದರವಾಗಿ ಕೆತ್ತಲ್ಪಟ್ಟ ಕಂಬಗಳಿಂದ ಕೂಡಿದ ಮುಖಮಂಟಪವು ಕಂಡುಬಂದು ಆಕರ್ಷಣೀಯ ವೆನಿಸುತ್ತದೆ.



ಗರ್ಭಗುಡಿಯ ಇಕ್ಕೆಲಗಳಲ್ಲಿ ಎರಡೂ ಬದಿಯಲ್ಲಿ ಗೂಡುಗಳಂತಹ ಸ್ಥಳವಿದೆ. ಬಲಭಾಗದ ಗೂಡಿನಲ್ಲಿ ಗಣೇಶ ಮತ್ತು ಸುಬ್ರಹ್ಮಣ್ಯನ ವಿಗ್ರಹವಿದ್ದರೆ ಎಡಭಾಗದ ಗೂಡಿನಲ್ಲಿ ಮಹಿಷಾಸುರ ಮರ್ದಿನಿ ಮತ್ತು ಭೈರವನ ವಿಗ್ರಹಗಳು ಸ್ಥಾಪಿಸಲ್ಪಟ್ಟಿವೆ. ಗರ್ಭಗೃಹವನ್ನು ವೀಕ್ಷಿಸಿದಾಗ ಅಲ್ಲಿನ ಅಧಿಕ ಭಾಗವನ್ನು ಆಕ್ರಮಿಸಿರುವಂತೆ ಭಾರಿ ಗಾತ್ರದ ಪೀಠವೊಂದು ಕಂಡುಬರುತ್ತದೆ. ಅದರ ಸುತ್ತಲೂ ಕುಳಿತ ಭಂಗಿಯಲ್ಲಿರುವ ಸ್ತ್ರೀಯರ ಚಿತ್ರಗಳನ್ನು ಕೆತ್ತಲಾಗಿದೆ. ೩೨ ಕೈಗಳುಳ್ಳ ಅಘೋರೇಶ್ವರ ವೀರಭದ್ರ ಎಂಬ ದೇವರ ವಿಗ್ರಹವು ಇಲ್ಲಿನ ಮುಖ್ಯ ದೇವರಾಗಿದೆ. ಹಿಂದೆ ಇಲ್ಲಿ ಅದೇ ಹೆಸರಿನ ಕಲ್ಲಿನ ವಿಗ್ರಹವಿದ್ದಿತಾದರೂ ಈಗ ಮೂಲ ವಿಗ್ರಹ ಇಲ್ಲ. ಶತ್ರುಪಡೆಯ ದಾಳಿಯಿಂದಾಗಿ ಆ ವಿಗ್ರಹವು ನಾಶವಾದ ಬಳಿಕ ಇಂದು ಆ ಸ್ಥಳದಲ್ಲಿ ವೀರಭದ್ರ ಎಂಬ ದೇವರ ವಿಗ್ರಹವನ್ನು ಸ್ಥಾಪಿಸಿದರೆಂಬ ಕತೆಯಿದೆ. ಪ್ರತಿವರ್ಷ ಮಾರ್ಚ್ ತಿಂಗಳಿನಲ್ಲಿ ೩ ದಿನಗಳ ಕಾಲ ಇಲ್ಲಿ ಜಾತ್ರೆಯು ನಡೆಯುತ್ತದೆ.

ಹೊರಗೋಡೆಗಳನ್ನು ಗಮನಿಸುತ್ತಾ ನಡೆದಲ್ಲಿ ಗೋಡೆಗಳಲ್ಲಿ ಅಲ್ಲಲ್ಲಿ ನಿಗದಿತ ಅಂತರದಲ್ಲಿ ಸುಮಾರು ೨೦ ಜಾಲಂದ್ರಗಳು (ಕಿಟಕಿ) ಇರುವುದನ್ನು ನಾವು ಕಾಣಬಹುದಾಗಿದೆ. ಉತ್ತರ ದಿಕ್ಕಿನಿಂದ ಪ್ರಾರಂಭವಾಗುವ ಅಲಂಕೃತ ಕಮಾನುಗಳು ಪೂರ್ವ ಮತ್ತು ಪಶ್ಚಿಮ ದಿಕ್ಕಿನ ದ್ವಾರಗಳವರೆವಿಗೂ ಹಬ್ಬಿಕೊಂಡು ಅಲಂಕೃತಗೊಂಡಿವೆ. ಕಿಟಕಿಗಳ ಕೆಳಗಡೆ ಗೋಡೆಯ ಸುತ್ತಲ ಅಲಂಕೃತವಾದ ಸಣ್ಣ ಗೋಪುರಗಳೂ ಸಹ ನಿಗದಿತ ಅಂತರದಲ್ಲಿ ರೂಪಿಸಲ್ಪಟ್ಟಿವೆ.

ನವರಂಗದ ಹೊರಗಡೆ ಉತ್ತರದ ದಿಕ್ಕಿನಲ್ಲಿರುವ ಕಾರ್ನಿಸ್‌ನ ಮೇಲೆ ವಿಜಯನಗರದ ಕಾಲದ ಲಿಪಿಯಿಂದ ಕೂಡಿದ ಒಂದು ಸಾಲಿನ ಶಾಸನವು ಕಂಡುಬರುತ್ತದೆ. 'ಹೊಂಬುಚ'ದ 'ಆಚಾರಿ ವೆಂಕಟಾಯ' ಎಂಬುವನು ಇಲ್ಲಿನ ಮಂಟಪವನ್ನು ನಿರ್ಮಿಸಿದನೆಂಬ ಉಲ್ಲೇಖವು ಆ ಶಾಸನದಿಂದ ವ್ಯಕ್ತವಾಗುತ್ತದೆ.

ಅಘೋರೇಶ್ವರ ದೇವಾಲಯದ ಮುಂಭಾಗದಲ್ಲಿ ಚೌಕಾಕಾರದ ನಂದಿ ಮಂಟಪವಿದೆ. ಅದು ವಿಶೇಷವಾದ ವಿನ್ಯಾಸದಿಂದ ಕೂಡಿದ್ದು ಎಲ್ಲರ ಗಮನ ಸೆಳೆಯುತ್ತದೆ. ಅದರ ಒಳಗೆ ನುಣುಪಾದ ಕಲ್ಲಿನಿಂದ ಮಾಡಲ್ಪಟ್ಟ ಬೃಹತ್ ಗಾತ್ರದ ನಂದಿ ವಿಗ್ರಹವಿದೆ. ದೇವಾಲಯದ ಪಶ್ಚಿಮಕ್ಕೆ ಪಾರ್ವತಿ ಗುಡಿಯೂ ಇದ್ದು ಅದು ಕೂಡ ಅಷ್ಟೇ ಸುಂದರವಾದ ರಚನೆಯಿಂದ ಕೂಡಿದೆ.

ದೇವಾಲಯದ ಹೊರಗೆ ಸುತ್ತಲೂ ಪ್ರದಕ್ಷಿಣೆಯನ್ನು ಹಾಕಲು ಅನುಕೂಲವಾಗುವಂತಹ ಕಲ್ಲಿನ ಚಪ್ಪಡಿಗಳಿಂದ ಸುಂದರವಾಗಿ ಕೂಡಿಸಲ್ಪಟ್ಟ ಪ್ರದಕ್ಷಿಣಾ ಪಥವಿದೆ. ಸಾಕಷ್ಟು ಪ್ರಚಾರವಿಲ್ಲದೆ ಇಕ್ಕೇರಿಯು ಪ್ರವಾಸಿಗರ ದೃಷ್ಟಿಯಿಂದ ದೂರವುಳಿದಿದೆ ಎನ್ನಲಡ್ಡಿಯಿಲ್ಲ. ಜೋಗದ ಜಲಪಾತವನ್ನು ವೀಕ್ಷಿಸಲು ಸಾಗರಕ್ಕೆ ಬರುವ ಮಂದಿ ಸಾಗರ ಪಟ್ಟಣವನ್ನು ಕೇಂದ್ರವಾಗಿಸಿಕೊಂಡು ಕೆಳದಿ, ಇಕ್ಕೇರಿ, ಶ್ರೀಧರಗುಡ್ಡ, ನಗರ, ಹೊಸಂಗಡಿ ಮುಂತಾದ ಪ್ರೇಕ್ಷಣೀಯ ಸ್ಥಳಗಳನ್ನು ದರ್ಶಿಸಬಹುದಾಗಿದೆ.

ಚಿತ್ರ - ಲೇಖನ : ವಿ. ಎಸ್. ಶ್ರೀನಿವಾಸ ಪ್ರಸನ್ನ
ನಂ. ೩೬, ಪಾರ್ಕ್ ಏರಿಯಾ, ೯ನೇ 'ಬಿ' ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು - ೫೬೦ ೦೨೭

# ಸ್ಪರ್ಶ ಪ್ರಪಂಚ

ಎಂ. ಆರ್. ಎನ್. ಮೂರ್ತಿ

ತ್ವಚೆ ನಮ್ಮ ದೇಹದ ಗಡಿಯನ್ನು ಗುರುತುಪಡಿಸಿ, ನಮ್ಮನ್ನು ಹೊರ ವಿಶ್ವದಿಂದ ಬೇರ್ಪಡಿಸುತ್ತದೆ. ತ್ವಚೆಯ ಒಳಗಿರುವುದೆಲ್ಲಾ ನಮ್ಮ ಅತಿ ಸ್ವಂತ ಆಸ್ತಿ. ನಮ್ಮ ಬೆನ್ನನ್ನು ನಾವು ಎಂದೂ ನೋಡಿಲ್ಲದಿರಬಹುದು; ಆದರೂ ಅದು ನಮ್ಮದೇ. ಇನ್ನಾರಿಗೂ ಅದನ್ನು ತುರಿಯುವ ತೀಟೆ ಮೂಡುವುದಿಲ್ಲ. ನಮ್ಮ ತ್ವಚೆಯ ಒಳಗಿರುವ ಹೆಚ್ಚಿನ ಅಂಗಗಳನ್ನು ನಾವು ಯಾವಾಗಲೂ ನೋಡುವುದಿಲ್ಲ. ಆದರೂ ಅದೆಲ್ಲಾ ನಮ್ಮ ಸ್ವಂತ ಆಸ್ತಿ ಎಂದೇ ಭಾವಿಸುತ್ತೇವೆ. ನಮ್ಮ ಹೊಟ್ಟೆಗೆ ಮಿತಿಮೀರಿ ತಿನ್ನಿಸಿ, ಅದು ಗೋಳಿಕ್ಕುವಂತೆ ಮಾಡುವ ಅಧಿಕಾರ ನಮಗೆ ಮಾತ್ರ ಇರುವುದು. ಅವರವರ ದೇಹಕ್ಕೆ ಅವರವರೇ ಅಧಿಕಾರಿಗಳು ಎಂಬ ವಾದವನ್ನು ಬಹು ಪಾಲು ಎಲ್ಲ ಸಮಾಜಗಳೂ ಒಪ್ಪಿವೆ. ಚರ್ಮ ನಮ್ಮ ದೇಹದೊಳಗಿನ ಅಂಗಾಂಗಗಳು ಚೆಲ್ಲಿಹೋಗದಂತೆ ರಕ್ಷಣೆ ನೀಡುತ್ತದೆ. ನಾವು ಎಷ್ಟೇ ತಿಂದು ತೇಗಿದರೂ, ಗಣಪತಿಯಂತೆ ಎಂದೂ ಹಾವಿಗಾಗಿ ಹುಡುಕಾಡುವ ಅಗತ್ಯ ಬರುವುದಿಲ್ಲ. ಭಾರೀ ಗೂಳಿಯ, ಕೊಂಟೇ ಕೋಣದ ಹೊಟ್ಟೆ ಯೊಳಗಿರುವ ಟನ್ನು ತೂಕದ ಆಹಾರವನ್ನು ಹೊರುವುದೂ ತ್ವಚೆಯೇ. 'ಎಮ್ಮೆ ಚರ್ಮ' ಎಂಬ ಮಾತು ಗಡಸನ್ನು, ಚರ್ಮ ಹೊರಬಹುದಾದ ಭಾರವನ್ನು ಪ್ರತಿನಿಧಿಸುತ್ತದೆ.

ತ್ವಚೆಯ ಬಗ್ಗೆ ಕೆಲವು ಸಾಮಾನ್ಯ ಮಾಹಿತಿಗಳು ಇಲ್ಲಿವೆ. ತ್ವಚೆ ನಮ್ಮ ಎಲ್ಲ ಸ್ಪರ್ಶ ಸಂವೇದನೆಗೆ ಕಾರಣವಾದ ದೇಹದ ಮೇಲು ಹೊದಿಕೆ. ನಮ್ಮ ದೇಹದ ಎಲ್ಲ ಭಾಗಗಳಿಂದಲೂ ಮಿದುಳಿಗೆ ಸತತ ಸಂದೇಶಗಳನ್ನು ರವಾನಿಸುತ್ತಾ ನಮಗೆ ಸದಾ ಹೊರವಿಶ್ವದ ಅನುಭವವನ್ನು ತಂದುಕೊಡುತ್ತದೆ. ರೋಗಾಣುಗಳು ನಮ್ಮ ದೇಹ ಪ್ರವೇಶಿಸದಂತೆ ತಡೆಗೋಡೆಯೊಡ್ಡುತ್ತದೆ. ಪ್ರೌಢಾವಸ್ಥೆ ತಲುಪಿದ ಸಾಧಾರಣ ಮೈಕಟ್ಟುಳ್ಳ ವ್ಯಕ್ತಿಯ ಚರ್ಮದ ವಿಸ್ತೀರ್ಣ ಸುಮಾರು ೧೮ ಚದರಡಿಗಳು; ಸುಲಿದು ಹಾಸಿದರೆ, ದೊಡ್ಡ ಟೇಬಲ್ಲಿನ ಮೇಲೆ ಪೂರ್ಣ ಹೊದಿಸಲು ಸಾಕಾಗಿ, ತುದಿಗಳಲ್ಲಿ ಕೊಂಚ ಇಳಿಬರುವಷ್ಟು. ದೇಹದ ಒಟ್ಟು ತೂಕದ ಶೇಕಡ ೧೫ ಭಾಗ ಚರ್ಮದ್ದು. ನಮ್ಮ ಚರ್ಮ ಸಾಧಾರಣವಾಗಿ ಒಂದು ಇಂಚಿನ ಹತ್ತರ ಒಂದು ಭಾಗದಷ್ಟು ದಪ್ಪವಿದೆ. ಆದರೆ ಎಲ್ಲೆಡೆ ಚರ್ಮದ ದಪ್ಪ ಒಂದೇ ಸಮವಲ್ಲ; ನಿರಂತರ ಮಿಡಿಯಬೇಕಾಗುವ ಕಣ್ಣು ರೆಪ್ಪೆಯ ಚರ್ಮ ಬಲು ತೆಳು. ಅದೇ ನೆಲದಲ್ಲಿ ತಿರುಗಾಡಬೇಕಾಗುವ ಕಾಲಡಿಯ ಚರ್ಮ ಬಹಳ ದಪ್ಪ. ಚರ್ಮದ ಪ್ರತಿ ಚದರಡಿಯಲ್ಲೂ ಲಕ್ಷಾಂತರ ಜೀವಕೋಶಗಳಿವೆ. ಚರ್ಮವನ್ನು ಸಾಧಾರಣವಾಗಿ ಎರಡು ಪದರಗಳನ್ನಾಗಿ ವಿಂಗಡಿಸುತ್ತಾರೆ. ಹೊರಗಿನ ಪದರದಲ್ಲಿ ನಿರ್ಜೀವ ಕೋಶಗಳಿರುತ್ತವೆ. ನಿತ್ಯ ಸ್ನಾನದಿಂದ, ಕೆಲಸ ಮಾಡುವಾಗ ಉಂಟಾಗುವ ಅನಿವಾರ್ಯವಾದ ತಿಕ್ಕಾಟದಿಂದ, ಈ ಹೊರಪದರ ನಿಧಾನವಾಗಿ ಕಳಚಿಹೋಗುತ್ತದೆ. ಇಂದು ಇರುವ ಹೊರ ಚರ್ಮ ಪೂರ್ಣ ನಶಿಸಿ, ಆ ಜಾಗವನ್ನು ಹೊಸ ಕೋಶಗಳು ಆಕ್ರಮಿಸಿಕೊಳ್ಳಲು ಸುಮಾರು ಒಂದು ತಿಂಗಳು ಬೇಕಾಗ ಬಹುದು. ಒಳಪದರದಲ್ಲಿ ದೊರೆಯುತ್ತಿರುವ ಪೋಷಕಾಂಶಗಳಿಂದ ಜೀವಂತವಿರುವ ಕೋಶಗಳು ಹೊರಗೆ ತಳ್ಳಲ್ಪಟ್ಟಂತೆ, ಗಾತ್ರದಲ್ಲಿ ಕುಗ್ಗಿ, ನಿರ್ಜೀವಕೋಶಗಳಾಗುತ್ತವೆ. ಒಳಪದರ ಚರ್ಮದ ೯೫% ಭಾಗ ಎಂದು ಭಾವಿಸಬಹುದು. ಇದರಲ್ಲಿ ಬಿಳಿಯಾಗಿ ತೋರುವ ಕೋಲಜನ್ ಪ್ರೋಟೀನಿನ ದಾರಗಳೂ, ಹಳದಿ ಬಣ್ಣದ ಎಲಾಸ್ಟಿನ್ ಪ್ರೋಟೀನಿನ ಅಣುಗಳೂ ಇರುತ್ತವೆ. ಚರ್ಮಕ್ಕೆ ಭಾರ ಹೊರುವ ಸಾಮರ್ಥ್ಯ ಕೋಲಜನ್ ನೀಡಿದರೆ ಎಲಾಸ್ಟಿನ್ ಅದಕ್ಕೆ ಹಿಗ್ಗುವ, ಆಕಾರ ಬದಲಿಸಿಕೊಳ್ಳುವ ಗುಣ ನೀಡುತ್ತದೆ. ಒಳಚರ್ಮದಲ್ಲಿ ಹುದುಗಿರುವ, ಜಿಡ್ಡು ಸುರಿಸುವ ಗ್ರಂಥಿಗಳು, ಸಣ್ಣ ರಂಧ್ರಗಳ ಮೂಲಕ ಎಣ್ಣೆ ಚೆಲ್ಲಿ ಚರ್ಮವನ್ನು ಸದಾ ಹದಮಾಡುತ್ತವೆ. ಪೋಷಕಾಂಶಗಳು ದೊರೆಯುವ ಬೇರಿನ ಸ್ಥಾನದಿಂದ, ಚರ್ಮದ ಮೂಲಕ ತೂರಿಬಂದು ಕೂದಲುಗಳು ಬೆಳೆಯುತ್ತವೆ. ಚರ್ಮದ ಅಡಿಯಲ್ಲಿ, ನರ ಬಳ್ಳಿಗಳ ಜಾಲವೇ ಇರುತ್ತದೆ. ಈ ಬಳ್ಳಿಗಳು ಒತ್ತಡ, ಬಿಸಿ, ಶೀತದ ಅನುಭವಗಳಿಗೆ ಸ್ಪಂದಿಸುತ್ತವೆ. ಈ ಸಂದೇಶಗಳನ್ನು ಮಿದುಳಿಗೆ ಕೊಂಡೊಯ್ಯುತ್ತವೆ. ಒಳಚರ್ಮದಲ್ಲಿ ಸೂಕ್ಷ್ಮ ರಕ್ತನಾಳಗಳು ಚರ್ಮಕ್ಕೆ ಬೇಕಾದ ಪೋಷಕಾಂಶ ಗಳನ್ನು ಸದಾ ಒದಗಿಸುತ್ತವೆ. ಇವುಗಳಲ್ಲದೇ ಒಳಪದರದಲ್ಲಿ 'ಮೆಲನಿನ್' ಎಂಬ ಬಣ್ಣ ಸುರಿಸುವ ಗ್ರಂಥಿಗಳಿರುತ್ತವೆ. ಈ ಗ್ರಂಥಿಗಳ ಕ್ರಿಯೆ ವಂಶಪಾರಂಪರ್ಯವಾಗಿ ನಮಗೆ ದೊರೆಯುವ ಬಳುವಳಿ. ಇವು ಸುರಿಸುವ ಮೆಲನಿನ್ ಬಣ್ಣದ ಬಿಂದುಗಳು ನಮ್ಮ ಚರ್ಮದ ಬಣ್ಣ ನಿರ್ಧರಿಸುತ್ತವೆ. ಕಡಿಮೆ ಮೆಲನಿನ್ ಇರುವ ತ್ವಚೆ ಬಿಳುಪಾಗಿಯೂ, ಹೆಚ್ಚು ಮೆಲನಿನ್ ಇದ್ದಾಗ ಕಪ್ಪಾಗಿಯೂ ಕಾಣುತ್ತದೆ. ವಯಸ್ಸಾದಂತೇ, ಹೊರಚರ್ಮದ ದಪ್ಪ ಕ್ಷೀಣಿಸಿ, ರಕ್ತನಾಳಗಳು ಪ್ರಾಮುಖ್ಯತೆಯಿಂದ ಕಾಣಿಸಿಕೊಳ್ಳುತ್ತವೆ. ಎಲಾಸ್ಟಿನ್ ಅಣುಗಳ ಬದಲಾವಣೆಯಿಂದ ಚರ್ಮ ಗಡಸಾಗುತ್ತದೆ. ಚರ್ಮದ ಅಡಿಯಲ್ಲಿ ಮೂರನೇ ಪದರ ಎನ್ನಬಹುದಾದ ಕೊಬ್ಬಿನ ಹೊದಿಕೆಯಿದೆ. ಈ ಕೊಬ್ಬಿನ ಪದರ ನಮ್ಮ ದೇಹವನ್ನು ಬೆಚ್ಚಗಿಡಲು ಸಹಾಯಕವಾಗಿದೆ. ಚರ್ಮದ ಹೊರ ಹಾಗೂ ಒಳ ಪದರಗಳ ದಪ್ಪ ಎಲ್ಲರಲ್ಲೂ ಸರಿ ಸುಮಾರು ಒಂದೇ. ಅದೇ ಕೊಬ್ಬಿನ ಪದರದಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಂಡುಬರುತ್ತವೆ. ಇದರಲ್ಲಿ ಎಲ್ಲೆಡೆ ಹದವಾಗಿ ಹರಡಿದ ರಕ್ತನಾಳಗಳಿದ್ದು, ಚರ್ಮದ ರಕ್ಷಣೆಗೆ ಬೇಕಾದ ಪೋಷಕಾಂಶ ಗಳನ್ನು ಒದಗಿಸುತ್ತವೆ. ಕೊಬ್ಬಿನ ಪದರ ಆಪತ್ಕಾಲದ ಆಹಾರವಾಗಿಯೂ ಬಳಕೆಗೆ ಬರುತ್ತದೆ. ಹಿಮಗರಡಿ ಬೇಸಿಗೆಯಲ್ಲಿ ಮೀನನ್ನು ನಿರಂತರ ಭಕ್ಷಿಸಿ ತನ್ನ ದೇಹದ ಕೊಬ್ಬಿನ ಪದರವನ್ನು ಹೆಚ್ಚಿಸಿಕೊಳ್ಳುತ್ತದೆ. ಈ ಕೊಬ್ಬಿನ ಪದರದಿಂದ ಹಿಮಗರಡಿಗೆ ಚಳಿಗಾಲದ ೬ ತಿಂಗಳು ಆಹಾರವಿಲ್ಲದೇ ಬದುಕುಳಿಯಲು ಸಾಧ್ಯ.

ನಮ್ಮ ಚರ್ಮಕ್ಕೆ ಭಾರ ಹೊರುವ ಬಲ ಕೊಡುವ ಅಣು ಕೋಲಜನ್. ಇದು ಪ್ರೋಟೀನಿನ ದೈತ್ಯಾಣು. ಪ್ರೋಟೀನುಗಳು ೨೦ ಬಗೆಯ ಅಮೈನೋ ಆಮ್ಲಗಳ ಜೋಡಣೆ ಯಿಂದಾದ ಸರಪಣಿಗಳಂತಹ ಅಣುಗಳು. ಜೀವ ಕೋಶದ ಒಳಕೋಣೆಗಳಲ್ಲಿ ಕಂಡುಬರುವ ಪ್ರೋಟೀನ್ ಸರಪಣಿಗಳು ಆಕಾರದಲ್ಲಿ ಉಂಡೆಯಾಗಿ ಸುತ್ತಿಕೊಂಡು, ನೀರಿನಲ್ಲಿ ವಿಲೀನಕ ಗುಣ ಹೊಂದಿರುತ್ತವೆ. ಕೋಲಜನ್‌ನಂತಹ ಅಣುಗಳು ಉದ್ದನೆಯ ದಾರದಂತಿದ್ದು ನೀರಿನಲ್ಲಿ ಕರಗಲಾರವು. ಕೋಲಜನ್ ಅಣುಗಳಲ್ಲಿ, ಪ್ರೋಟೀನಿನ ಮೂರು ಸರಪಣಿಗಳು ಹೆಂಗಳೆಯರ ಜಡೆಯಂತೆ ಒಂದರ ಸುತ್ತ ಇನ್ನೊಂದು ಹೆಣೆದುಕೊಂಡು ದಾರದ ಆಕಾರ ಹೊಂದಿರುತ್ತವೆ. ಇಂತಹ ಲಕ್ಷಾಂತರ ದಾರಗಳು ಚರ್ಮಕ್ಕೆ ಭಾರ ಹೊರುವ ಸಾಮರ್ಥ್ಯ ನೀಡುತ್ತವೆ.

ಉಗುರುಗಳು ಹೊರಚರ್ಮದ ಬೆಳವಣಿಗೆಗಳು. ಇದರಲ್ಲಿ ಕೆರಾಟಿನ್ ಎಂಬ ಪ್ರೋಟೀನಿ ರುತ್ತದೆ. ಉಗುರುಗಳು ತಿಂಗಳಲ್ಲಿ ಸುಮಾರು ಎಂಟನೇ ಒಂದಿಂಚು ಬೆಳೆಯುತ್ತವೆ. ಕೈ ಉಗುರುಗಳು ಕಾಲಿನ ಉಗುರುಗಳಿಗಿಂತ ೨-೩ ಪಟ್ಟು ಶೀಘ್ರವಾಗಿ ಬೆಳೆಯುತ್ತವೆ. ಕ್ಯಾನ್ಸರ್ ರೋಗಿಗಳಿಗೆ ನೀಡುವ ವಿಕಿರಣ ಚಿಕಿತ್ಸೆ (ರೇಡಿಯೋ ಥೆರಪಿ) ಕೂದಲನ್ನು ಉದುರಿಸುತ್ತದೆ. ಇದು ತಾತ್ಕಾಲಿಕ; ಚಿಕಿತ್ಸೆ ನಿಲ್ಲಿಸಿದರೆ ಪುನಃ ಕೂದಲು ಬೆಳೆಯುತ್ತದೆ.

ಅನೇಕ ತತ್ವಜ್ಞರು ಇತರ ಇಂದ್ರಿಯಗಳಿಗಿಂತ ಸ್ಪರ್ಶ ಸಂವೇದನೆಗೇ ಹೆಚ್ಚು ಬೆಲೆ ಕೊಟ್ಟಿದ್ದಾರೆ. ಮರಳುಗಾಡಿನ ಬಿಸಿಲಿನಲ್ಲಿ ಇಲ್ಲದ ನೀರು ನಮ್ಮ ಕಣ್ಣಿಗೆ ಕಾಣಬಹುದು. ಆದರೆ ಇಂತಹ ಭ್ರಮೆಗಳು ಸ್ಪರ್ಶ ಸಂವೇದನೆಯಲ್ಲಿ ಕನಿಷ್ಠ ಎಂದು ವಾದಿಸುವವರಿದ್ದಾರೆ. ನಮ್ಮ ಚರ್ಮದ ಎಲ್ಲ ಭಾಗಗಳೂ ಸ್ಪರ್ಶ ಸಂವೇದನೆಯಲ್ಲಿ ಸಮಾನ ಸೂಕ್ಷ್ಮತೆ ತೋರುವುದಿಲ್ಲ. ಮುಖ, ಅಂಗೈಗಳ ತ್ವಚೆ ಬಲು ಸೂಕ್ಷ್ಮ. ಇವುಗಳಿಗೆ ಹೋಲಿಸಿದರೆ ಬೆನ್ನಿನಿಂದ ನಮಗೆ ಒದಗುವ ಸಂವೇದನೆ ಬಹಳ ಕಡಿಮೆ. ಇದನ್ನು ಒಂದು ಸರಳ ಪ್ರಯೋಗದಿಂದ ತೋರಿಸಬಹುದು. ಮಕ್ಕಳ 'ಜಾಮಿಟ್ರಿ' ಪೆಟ್ಟಿಗೆಯಲ್ಲಿರುವ ಕೈವಾರ ತೆಗೆದುಕೊಳ್ಳಿ. ಕಣ್ಣು ಮುಚ್ಚಿಕೊಂಡಿರುವ ಸ್ನೇಹಿತನ ಚರ್ಮದ ಬೇರೆ ಬೇರೆ ಭಾಗಗಳಲ್ಲಿ ಎರಡು ಸಮೀಪ ಬಿಂದುಗಳಲ್ಲಿ ಚುಚ್ಚಿ. ಅಂಗೈಯನ್ನು ಚುಚ್ಚಿದಾಗ, ಕಣ್ಣು ಮುಚ್ಚಿರುವ ವ್ಯಕ್ತಿ ಎರಡು ಬಿಂದುಗಳಲ್ಲಿ ಚುಚ್ಚಿದ್ದೆಂದು ತಿಳಿಯಬಲ್ಲ. ಅದೇ ಬೆನ್ನನ್ನು ಚುಚ್ಚಿದಾಗ, ಎರಡು ಬಿಂದುಗಳಲ್ಲಿ ಚುಚ್ಚಿದರೂ, ಒಂದೇ ಬಿಂದುವಿನಲ್ಲಿ ಚುಚ್ಚಿದ ಅನುಭವ ವಾಗುತ್ತದೆ. ಸ್ಪರ್ಶ ಸಂವೇದನೆಯ ಮಟ್ಟ ಹೀಗೆ ಬದಲಾಗಲು, ತ್ವಚೆಯಿಂದ ಮಿದುಳಿಗೆ ಸಂದೇಶ ಕೊಂಡೊಯ್ಯುವ ನರಬಳ್ಳಿಗಳ ಸಾಂದ್ರತೆಯೇ ಕಾರಣ. ಅತಿ ಹೆಚ್ಚು ಸಾಂದ್ರತೆಯಿರುವ ಮುಖದ ತ್ವಚೆ ನವರಸಗಳನ್ನೂ ಪ್ರದರ್ಶಿಸುವ ಶಕ್ತಿಯನ್ನು ಪಡೆದಿದೆ; ''ಮುಖ ಮನಸ್ಸಿನ ಪ್ರತಿಬಿಂಬ'' ಎಂಬ ಮಾತನ್ನು ಹುಟ್ಟಿಸಿದೆ. ಹಾಗೆಯೇ, ಅಂಗೈ ಚರ್ಮದಲ್ಲಿ ಕಂಡುಬರುವ ದಟ್ಟ ನರಬಳ್ಳಿ ನಾವು ವೈದ್ಯರಾಗಿ, ನುರಿತ ಇಂಜಿನಿಯರುಗಳಾಗಿ ಕೆಲಸ ನಿರ್ವಹಿಸಲು ಅತ್ಯಗತ್ಯ. ಇದಕ್ಕೆ ಪೂರಕ ವಾಗಿ, ನಮ್ಮ ದೇಹದ ಅಂಗೈ ಇಲ್ಲವೇ ಮುಖದ ತ್ವಚೆಯನ್ನು ನಿಯಂತ್ರಿಸುವ ನಮ್ಮ ಮಿದುಳಿನ ಭಾಗ, ಬೆನ್ನಿನ ಚರ್ಮದೊಡನೆ ವ್ಯವಹಾರ ನಡೆಸುವ ಮಿದುಳಿನ ಭಾಗಕ್ಕಿಂತ ಬಹಳ ದೊಡ್ಡದು.

ಮಿದುಳಿಗೂ, ದೇಹದ ಹೊರಮೈಗೂ ಇರುವ ಸಂಬಂಧವನ್ನು ಹಲವಾರು ಪ್ರಯೋಗ ಗಳಿಂದ ಗೊತ್ತುಪಡಿಸಿಕೊಳ್ಳಬಹುದು. ಅಪಘಾತವಾದಾಗ, ಪಾರ್ಶ್ವವಾಯು ಬಡಿದಾಗ ಇಲ್ಲವೇ ಸಹಜವಾಗಿ ಇಳಿವಯಸ್ಸಿನಲ್ಲಿ ತೋರುವ ಮಿದುಳಿನ ಹಾನಿಯಿಂದ ಅನೇಕ ಜನ ತಮ್ಮ ದೇಹದ ಅಂಗಾಂಗಗಳ ಮೇಲಿನ ಹಿಡಿತ ಕಳೆದು ಕೊಳ್ಳುತ್ತಾರೆ. ಮಿದುಳಿನ ನರಕೋಶಗಳು ಹಾನಿಗೊಳಗಾದಾಗ ಇಂತಹ

ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಮಿದುಳಿನ ಯಾವ ಭಾಗಕ್ಕೆ ಹಾನಿಯಾಗಿದೆ ಎಂಬುದನ್ನು ಎಕ್ಸ್ ಕಿರಣಗಳ ಸಹಾಯದಿಂದ ಗುರುತಿಸಬಹುದು. ಇದರಿಂದ ದೇಹದ ಯಾವ ಭಾಗ ಊನಗೊಂಡಿದೆ ಎಂಬುದನ್ನು ಗಮನಿಸಿದಾಗ, ಮಿದುಳಿಗೂ ಅದು ನಿಯಂತ್ರಿಸುವ ದೇಹದ ಭಾಗಕ್ಕೂ ಇರುವ ಸಂಬಂಧ ತಿಳಿಯುತ್ತದೆ. ಇಂತಹ ಪರಿಶೀಲನೆಗಳನ್ನು ಬೇಕೆಂದಾಗ ನಡೆಸಲು ಬರುವುದಿಲ್ಲ. ಇಂತಹ ಪ್ರಯೋಗಗಳಿಗೆ ಹಾನಿಮಾಡದ ಮಾರ್ಗಗಳು ಬೇಕು.

ನಾವು ಅನುಭವಿಸುವ ಸಂವೇದನೆಗಳಿಗೆಲ್ಲಾ ಸಮಾನಾಂತರ ವಿದ್ಯುತ್ ಕ್ರಿಯೆಗಳು ಮಿದುಳಿನಲ್ಲಿ ಸಾಗುತ್ತವೆ. ಆದ್ದರಿಂದ, ತಲೆ ಬುರುಡೆಗೆ ಅನೇಕ ವಿದ್ಯುತ್ ತಂತಿಗಳನ್ನು (ಎಲೆಕ್ಟ್ರೋಡ್ಸ್) ಜೋಡಿಸಿ, ಮಿದುಳಿನ ಬೇರೆ ಬೇರೆ ಬಿಂದುಗಳಲ್ಲಿ ನಡೆಯುತ್ತಿರುವ ವಿದ್ಯುತ್ ಕ್ರಿಯೆಗಳನ್ನು ಪತ್ತೆಹಚ್ಚಬಹುದು. ದೇಹದ ವಿವಿಧ ಬಿಂದುಗಳನ್ನು ಉದ್ರೇಕಿಸಿ, ಅದರಿಂದ ಪ್ರಾರಂಭಗೊಳ್ಳುವ ಮಿದುಳಿನ ವಿದ್ಯುತ್ ಚಟುವಟಿಕೆಯನ್ನು ಮುದ್ರಿಸಿಕೊಳ್ಳಬಹುದು.

ಮಿದುಳು ಚುರುಕಾಗಿ ಕೆಲಸ ಮಾಡುತ್ತಿದ್ದಾಗ, ಅದರ ಕ್ರಿಯಾಶೀಲ ಭಾಗ ಹೆಚ್ಚಿನ ಗ್ಲೂಕೋಸ್ ಭಕ್ಷಿಸುತ್ತದೆ. ಈ ಗ್ಲೂಕೋಸ್ ಮಿದುಳಿಗೆ ರವಾನೆಯಾಗುವುದು ರಕ್ತದ ಮೂಲಕ. ಆದ್ದರಿಂದ ರಕ್ತಕ್ಕೆ ವಿಕಿರಣಯುಕ್ತ ಗ್ಲೂಕೋಸ್ (ರೇಡಿಯೋ ಲೇಬಲ್ಡ್ ಗ್ಲೂಕೋಸ್) ಪೂರೈಸಿ, ದೇಹದ ಚಟುವಟಿಕೆಗೆ ಅನುಗುಣವಾಗಿ ಮಿದುಳಿನ ಯಾವ ಭಾಗದಲ್ಲಿ ಗ್ಲೂಕೋಸ್ ಕಾಣಿಸಿಕೊಳ್ಳುತ್ತದೆ ಎಂದು ನಿರ್ಧರಿಸಬಹುದು. ಇಂತಹ ಪ್ರಯೋಗಗಳಿಂದ ಮಿದುಳಿಗೂ, ನಮ್ಮ ದೇಹದ ಭಾಗಗಳಿಗೂ ಇರುವ ನಿಕಟ ಸಂಬಂಧ ತಿಳಿದುಬರುತ್ತದೆ.

ಚರ್ಮದ ಬಣ್ಣಕ್ಕೆ ಕಾರಣ ಮೆಲನಿನ್ ಉತ್ಪಾದಿಸುವ ಗ್ರಂಥಿಗಳು. ಡಾರ್ವಿನ್ನನ ವಿಕಾಸವಾದಕ್ಕೆ ಅನುಗುಣವಾಗಿ, ಒಂದು ಭೌಗೋಳಿಕ ಪ್ರದೇಶದಲ್ಲಿಯೇ ಲಕ್ಷಾಂತರ ವರ್ಷಗಳಿಂದ ವಾಸಿಸುತ್ತಿರುವ ಜನಾಂಗ ಕಾಲಕ್ರಮೇಣ ಅಲ್ಲಿಯ ಸೂರ್ಯರಶ್ಮಿಗೆ ಅನುಗುಣವಾಗಿ ತನ್ನ ಮೈಬಣ್ಣ ಬದಲಿಸಿಕೊಳ್ಳುತ್ತದೆ. ಸೂರ್ಯರಶ್ಮಿಯಲ್ಲಿ ಹಾನಿಕಾರಕ ನೇರಲಾತೀತ (ಅಲ್ಟ್ರಾ ವಯಲೆಟ್) ಕಿರಣಗಳಿರುವುದರಿಂದ, ಜೀವಂತವಿರುವ ಒಳಚರ್ಮಕ್ಕೆ ರಕ್ಷಣೆ ಒದಗಿಸಲು ಅದನ್ನು ಹೀರಿಕೊಳ್ಳುವ ಮೆಲನಿನ್ ಉಷ್ಣವಲಯದಲ್ಲಿ ವಾಸಿಸುವವರಿಗೆ ಬೇಕು. ಇದರಿಂದಲೇ ಭೂಮಧ್ಯ ರೇಖೆಯ ಸುತ್ತಲಿನ ಜನ ಕಪ್ಪು ಬಣ್ಣದವರಾಗುತ್ತಾರೆ, ಅತ್ಯಧಿಕ ಪ್ರಮಾಣದಲ್ಲಿರುವ ನೇರಲಾತೀತ ಕಿರಣಗಳ ಹಾವಳಿಯಿಂದ ತಪ್ಪಿಸಿಕೊಳ್ಳುತ್ತಾರೆ. ಅದೇ ಧ್ರುವ ಪ್ರದೇಶಗಳ ಸಮೀಪ ವಾಸಿಸುವ ಜನರ ತ್ವಚೆ ಬಿಳುಪಾಗಿದ್ದು, ಇರುವ ಅಲ್ಪ ಪ್ರಮಾಣದ ಸೂರ್ಯ ರಶ್ಮಿಯನ್ನು ಬಳಸಿಕೊಳ್ಳಲು ಸಹಕಾರಿಯಾಗುತ್ತದೆ. ಜನ ತ್ವಚೆಯ ಬಣ್ಣವನ್ನು ಪೂರ್ವ ನಿರ್ಧಾರಿತ ಯೋಜನೆಯಿಂದ ಬದಲಿಸಿಕೊಳ್ಳುತ್ತಾರೆ ಎಂದು ಭಾವಿಸಬಾರದು. ವಿಕಾಸ ಕುರುಡು, ಅದಿಡುವ ಹೆಜ್ಜೆಗಳೆಲ್ಲಾ ಆಕಸ್ಮಿಕ. ಡಾರ್ವಿನ್ನನ ವಿಕಾಸವಾದದಲ್ಲಿ ಪೂರ್ವಾಗ್ರಹಕ್ಕೆ ಸ್ಥಾನವಿಲ್ಲ. ಬಿಸಿಲು ಹೆಚ್ಚಿರುವ ಸ್ಥಳಗಳಲ್ಲಿ, ಬಿಳಿ ತೊಗಲಿನ ಜನ ಕಪ್ಪು ಬಣ್ಣದವರಿಗಿಂತ ಬೇಗ ತೊಗಲಿನ ಕ್ಯಾನ್ಸರ್‌ನಂತಹ ವ್ಯಾಧಿಗಳಿಗೆ ಬಲಿಯಾಗಿ ಸಾವಪ್ಪುವ ಸಾಧ್ಯತೆ ಹೆಚ್ಚು. ಇದರಿಂದ ಸಂತಾನ ಪಡೆದು ಮುಂದಿನ ಪೀಳಿಗೆಗೆ ಜನ್ಮ ನೀಡುವ ಅವಕಾಶ ಬಣ್ಣದಲ್ಲಿ ಕಪ್ಪಾದವರಿಗೆ ಹೆಚ್ಚಿರುತ್ತದೆ. ಆದ್ದರಿಂದ ಈ ಆನುವಂಶಿಕ ಗುಣ ಹೊತ್ತ ಜನರ ಸಂಖ್ಯೆ ಕಾಲ ಕಳೆದಂತೆ ವರ್ಧಿಸುತ್ತಾ, ಅದೇ ಎಲ್ಲ ಜನರ ಪ್ರಾತಿನಿಧಿಕ ಮೈಬಣ್ಣವಾಗಿ ಕಾಣಿಸಿಕೊಳ್ಳುತ್ತದೆ. ಇದೇ ರೀತಿ ಸೂರ್ಯರಶ್ಮಿ ಕಡಿಮೆಯಿರುವ ಜಾಗಗಳಲ್ಲಿ ಪ್ರಕೃತಿಯ ಸಹಜ ಆಯ್ಕೆ (ನ್ಯಾಚುರಲ್ ಸೆಲೆಕ್ಷನ್) ಜನರಿಗೆ ಬಿಳಿ ತೊಗಲನ್ನು ನೀಡುತ್ತದೆ. ಮೈಬಣ್ಣಕ್ಕೆ ಇಲ್ಲದ ಪ್ರಾಮುಖ್ಯತೆ ಕೊಟ್ಟ ಕೆಂಪು ಮೂತಿಯವರು, ಕರಿ ಮೂತಿಯವರನ್ನು ಪ್ರಾಣಿಗಳಂತೆ ಮಾರಲೂ ಹೇಸಲಿಲ್ಲ. ಈ 'ವರ್ಣಾಶ್ರಮ ವ್ಯಾಧಿ' ಇಲ್ಲದ ದೇಶವಿಲ್ಲ. ನಿಜವಾಗಿಯೂ ಇಲ್ಲಿರುವ ವೈಜ್ಞಾನಿಕ ಸತ್ಯವೆಂದರೆ, ಅಲ್ಲಲ್ಲಿಯ ಜಾಗಕ್ಕೆ ಅಲ್ಲಲ್ಲಿಯ ಬಣ್ಣವೇ ಹೇಳಿಮಾಡಿಸಿದ್ದು ಎನ್ನುವುದು.

ಬೆವರಿನ ವ್ಯವಸ್ಥೆ ನಮ್ಮ ದೇಹದ ಉಷ್ಣಾಂಶವನ್ನು ಒಂದೇ ಮಟ್ಟದಲ್ಲಿಡಲು ಅತ್ಯಗತ್ಯ. ನಮ್ಮ ದೇಹದೊಳಗೆ ನಡೆಯುವ ರಾಸಾಯನಿಕ ಕ್ರಿಯೆಗಳಿಂದ, ಹೊರಗಿನ ಉರಿಬಿಸಿಲಿನಿಂದ, ದೇಹ ಕಾಯ್ದಾಗ, ದೇಹವನ್ನು ನಿಯಂತ್ರಿತ ಉಷ್ಣತೆಯಲ್ಲಿ ಇರಿಸುವುದು ತ್ವಚೆಯಲ್ಲಿರುವ ಬೆವರುವ ವ್ಯವಸ್ಥೆಯೇ. ಎಲ್ಲರ ದೇಹದ ಉಷ್ಣತೆಯೂ ಒಂದೇ ಸಮನಿರುವುದಿಲ್ಲ. ಬೆವರು ನಮ್ಮ ದೇಹದ ಉಷ್ಣತೆಯನ್ನು ಸಾಧಾರಣವಾಗಿ ಸುಮಾರು ೯೮ ಡಿಗ್ರಿ ಫ್ಯಾರನ್‌ಹೈಟ್‌ನಿಂದ ೯೯ ಡಿಗ್ರಿ ಫ್ಯಾರನ್‌ಹೈಟ್‌ನಲ್ಲಿರುವಂತೆ ನಿಯಂತ್ರಿಸುತ್ತದೆ. ಬೆವರು ಗ್ರಂಥಿಗಳು ಸುರಿಸುವ ದ್ರವ ದೇಹದ ಮೇಲ್ಮೈನಿಂದ ಆವಿಯಾಗುವಾಗ ಶಾಖ ಹೀರಿಕೊಂಡು ತನ್ನೊಡನೇ ಕೊಂಡೊಯ್ಯುತ್ತದೆ. ಪ್ರತಿ ಗ್ರಾಂ. ನೀರು ಆವಿಯಾಗಲು ೫೦೦ ಕೆಲೋರಿಗಿಂತಲೂ ಹೆಚ್ಚು ಉಷ್ಣ ಶಕ್ತಿ ಬೇಕು. ಒಂದು ದಿನದಲ್ಲಿ ನಾವು ಸುರಿಸುವ ಬೆವರಿನ ಪ್ರಮಾಣ ಅಂದಿನ ಉಷ್ಣಾಂಶಕ್ಕೆ ಹೊಂದಿಕೊಂಡು ಬದಲಾಗುತ್ತದೆ. ಜ್ವರ ಬಂದಾಗ ದೇಹದ ಉಷ್ಣತೆ ಏರುತ್ತದೆ. ಹೀಗೆ ಏರಲು ಸರಿಯಾದ ಕಾರಣ ಇನ್ನೂ ತಿಳಿದಿಲ್ಲ. ಜ್ವರ ಇಳಿಯಬೇಕಾದಾಗ, ದೇಹ ಒಳಗಿನ ಉಷ್ಣತೆಯನ್ನು ಕಡಿಮೆ ಮಟ್ಟದಲ್ಲಿ ನಿಯಂತ್ರಿಸುತ್ತದೆ. ಇದಕ್ಕಾಗಿ ಬೆವರು ಸುರಿಸಿ, ಉಷ್ಣತೆಯ ಮಟ್ಟ ಕಡಿಮೆ ಮಾಡಿಕೊಳ್ಳುತ್ತದೆ. ಆದ್ದರಿಂದಲೇ ಜ್ವರ ಬರುವಾಗ ರಕ್ತದ ಚಲನೆ ಒಳನಾಳಗಳಲ್ಲೇ ಕೇಂದ್ರೀಕರಿಸಿ ನಮಗೆ ಚಳಿಯ ಅನುಭವ ನೀಡಿ, ಬೆಚ್ಚನೆಯ ಹೊದಿಕೆಗೆ ಕಾತರಿಸುವಂತೆ ಮಾಡುತ್ತದೆ. ಅದೇ ಜ್ವರ ಇಳಿಯುವಾಗ ನಮಗೆ ಹೊದೆಯಬೇಕೆನ್ನಿಸುವುದಿಲ್ಲ.

ನಾವು ಸುರಿಸುವ ಬೆವರೆಲ್ಲಾ ನಮ್ಮ ದೇಹದ ಶಾಖದಿಂದಲೇ ಆವಿಯಾಗುವುದಿಲ್ಲ. ಕೆಲ ಮಟ್ಟಿಗೆ ವಾತಾವರಣದಿಂದಲೂ ಶಾಖ ಹೀರಿಕೊಳ್ಳುತ್ತದೆ. ಬೇಸಿಗೆಯಲ್ಲಿ ವಾತಾವರಣ ಬಿಸಿ ಇರುವುದರಿಂದ ನಮಗೆ ದೇಹದಿಂದ ಉಷ್ಣತೆ ಕಳೆದುಕೊಳ್ಳುವ ಅಗತ್ಯ ಜಾಸ್ತಿ. ಜೊತೆಗೇ, ನಾವು ಸುರಿಸುವ ಬೆವರೂ, ನಮ್ಮ ದೇಹದ ಶಾಖವಲ್ಲದೇ ಹೊರಗಿನ ವಾತಾವರಣದಿಂದಲೂ ಶಕ್ತಿ ಹೀರಿ ಆವಿಯಾಗುತ್ತದೆ. ಆದ್ದರಿಂದಲೇ ದೇಹದ ಉಷ್ಣಶಕ್ತಿ ಕಡಿಮೆ ಮಾಡಿಕೊಳ್ಳಲು, ಬೇಸಿಗೆಯಲ್ಲಿ ಹೆಚ್ಚು ಬೆವರಿಳಿಸಬೇಕಾಗುತ್ತದೆ. ಇತ್ತೀಚೆಗೆ ಕಾಮನ ಹಬ್ಬದಲ್ಲಿ ಹುಲಿವೇಷ ಹಾಕಿ ಕುಣಿಯುವವರ ಸಂಖ್ಯೆ ಕಡಿಮೆಯಾಗಿದೆ. ಹಿಂದೆ ಹೋಳೀ ಹುಣ್ಣಿಮೆಯ ಸಡಗರದಲ್ಲಿ, ಬೆವರು ನಾಳಗಳೆಲ್ಲಾ ಮುಚ್ಚುವಂತೆ ಮೈತುಂಬಾ ಬಣ್ಣ ಬಳಿದುಕೊಂಡು, ಬಿಸಿಲಿನಲ್ಲಿ ಕುಣಿಯುತ್ತಿರುವಾಗ, ಮೈ ಬಿಸಿಯೇರಿ ಎಚ್ಚರ ತಪ್ಪಿ ಬೀಳುತ್ತಿದ್ದುದುಂಟು. ನಮ್ಮ ದೇಹದ ಕೆಲವು ಭಾಗಗಳಲ್ಲಿ ಬೆವರು ಸುರಿಸುವ ಗ್ರಂಥಿಗಳ ಸಾಂದ್ರತೆ ಹೆಚ್ಚು. ಅಂಗೈ, ಕಂಕಳು, ಹಣೆ, ಜನನೇಂದ್ರಿಯಗಳು ಇವು ವಿಶೇಷವಾಗಿ ಬೆವರು ಸುರಿಸುವ ಗ್ರಂಥಿಗಳು. ನಾವು ಮಾನಸಿಕ ಒತ್ತಡಕ್ಕೆ ಒಳಗಾದಾಗ, ಹೆಚ್ಚು ಬೆವರು ಸುರಿಸುತ್ತೇವೆ. ಭಾಷಣಕಾರರ ಹಣೆಯ ಮೇಲೆ ನೀರ ಹನಿ ಮೂಡಿರುವುದು ಸರ್ವೇಸಾಮಾನ್ಯ.

ಬೆವರಿನ ಜೊತೆ ನಾವು ಲವಣಗಳನ್ನು, ಜಿಡ್ಡನ್ನು ಹಾಗೂ ಇನ್ನೂ ಅನೇಕ ಬಗೆಯ ರಾಸಾಯನಿಕ ವಸ್ತುಗಳನ್ನು ಹೊರಹಾಕುತ್ತೇವೆ. ಆದರೂ ಬೆವರು ಸುರಿಸುವುದರ ಉದ್ದೇಶ ತ್ಯಾಜ್ಯ ವಸ್ತುಗಳನ್ನು ದೇಹ ಹೊರ ಹಾಕುವ ಕ್ರಮ ಎಂದು ಸಾಧಾರಣವಾಗಿ ಪರಿಗಣಿಸುವುದಿಲ್ಲ. ಬೆವರು ಸುರಿಸುವುದರ ಪ್ರಧಾನ ಉದ್ದೇಶ ದೇಹದ ಉಷ್ಣತೆಯನ್ನು ನಿಯಂತ್ರಿಸುವುದೆಂದೇ ಭಾವಿಸಲಾಗಿದೆ. ಹಾವು ಬೆವರು ಸುರಿಸುವುದೇ ಇಲ್ಲ. ಆದ್ದರಿಂದಲೇ ಇದರ ದೇಹದ ಉಷ್ಣತೆ ಹೆಚ್ಚಿನ ನಿಯಂತ್ರಣಕ್ಕೆ ಒಳಪಡುವುದಿಲ್ಲ. ದೇಹದ ಉಷ್ಣತೆ ಹೆಚ್ಚಿಸಿಕೊಳ್ಳಲು ಬಿಸಿಲಿಗೆ ತೆರಳುತ್ತದೆ. ಬಿಸಿಲು ಹೆಚ್ಚಿದರೆ ನೆರಳಿಗೆ ತೆರಳುತ್ತದೆ.

ದೇಹದ ಉಷ್ಣಾಂಶ ನಿಯಂತ್ರಿಸಲು ಬೆವರು ಸುರಿಸುವ ಜೊತೆಗೇ, ಇನ್ನೂ ಕೆಲವು ಉಪಾಯಗಳನ್ನು ಚರ್ಮ ಕಂಡುಕೊಂಡಿದೆ. ಗಾಳಿ ಉಷ್ಣ ಶಕ್ತಿಯ ವಾಹಕವಲ್ಲ. ಆದ್ದರಿಂದ ಕೂದಲುಗಳ ನಡುವೆ ಸಿಕ್ಕಿಕೊಂಡಿರುವ ಗಾಳಿಯ ಪದರ ದೇಹದಿಂದ ಹೆಚ್ಚು ಉಷ್ಣ ಶಕ್ತಿ ಸೋರಿ ಹೋಗದಂತೆ ತಡೆಯುತ್ತದೆ. ಕೆಲವು ಪ್ರಾಣಿಗಳಂತೂ, ಮೈತುಂಬಾ ರೋಮಗಳನ್ನು ಬೆಳೆಸಿಕೊಂಡು, ಹಿಮ ಪ್ರದೇಶಗಳಲ್ಲೂ ಬೆಚ್ಚಗಿರಲು ಕಲಿತಿವೆ. ಇವುಗಳಿಗೆ ಹೋಲಿಸಿದರೆ, ನಾವು ರೋಮರಹಿತ ಬೆತ್ತಲೆಯ ಪ್ರಾಣಿಗಳು ಎನ್ನಬಹುದು. ಇರುವ ರೋಮವನ್ನೇ ನಾವು ಜಾಣತನದಿಂದ ಬಳಸಿಕೊಳ್ಳುತ್ತೇವೆ. ಒಮ್ಮೆಗೇ ಚಳಿಗಾಳಿ ಬೀಸತೊಡಗಿದರೆ, ಚರ್ಮದ ಮೇಲಿರುವ ರೋಮಗಳು ನಿಮಿರಿ ನಿಂತು, ಗಾಳಿಯ ಉಂಡೆಗಳನ್ನು ಅವುಗಳ ನಡುವೆ ಬಂಧಿಸಿ, ಉಷ್ಣಶಕ್ತಿ ಹಾರಿಹೋಗದಂತೆ ಎಚ್ಚರವಹಿಸುತ್ತವೆ. ಜೊತೆಗೇ ಚರ್ಮದಲ್ಲಿ ನಡುಕ ಹುಟ್ಟಿ, ಅದರ ಅಲುಗಾಟದಿಂದ ಹೊರಬರುವ ಉಷ್ಣಶಕ್ತಿ ಚರ್ಮ ತಣ್ಣಗಾಗುವುದನ್ನು ತಡೆಹಿಡಿಯುತ್ತದೆ. ಹೊಳೆಯಲ್ಲಿ ಮಾಗಿ ಸ್ನಾನ ಮಾಡಿದಾಗ ಹಲ್ಲುಗಳು ಕಟಕಟ ಅದುರುವುದಕ್ಕೂ ಮಾಂಸಖಂಡಗಳ ಚಲನೆಯಿಂದ ದೇಹಕ್ಕೆ ದೊರಕಬಹುದಾದ ಉಷ್ಣ ಶಕ್ತಿಯೇ ಕಾರಣ.

ಚತುಷ್ಪಾದಿಯಾಗಿದ್ದ ಮಂಗ ದ್ವಿಪಾದಿ ಮಾನವನಾಗಿ ನಡೆದದ್ದೂ ಚರ್ಮದ ಕಾರಣದಿಂದಲೇ ಎಂದು ಕೆಲವರು ಊಹಿಸುತ್ತಾರೆ. ನಾಲ್ಕು ಕಾಲುಗಳ ಮೇಲೆ ನಡೆದಾಗ ಬೆನ್ನಿನ ಹೆಚ್ಚು ಭಾಗ ಸೂರ್ಯರಶ್ಮಿಯ ನೇರ ಹೊಡೆತಕ್ಕೆ ಒಳಗಾಗುತ್ತದೆ. ನಿಂತು ನಡೆದಾಗ ಮೈಮೇಲೆ ಬೀಳುವ ವಿಕಿರಣ ಗಣನೀಯವಾಗಿ ಕಡಿಮೆಯಾಗುತ್ತದೆ. ಮರದಿಂದ ಇಳಿದು, ನೆಲದ ಮೇಲೆ ಎರಡು ಕಾಲುಗಳನ್ನು ಬಳಸಿ ನಡೆದ ಮೊದಲ ಪ್ರಾಣಿ, ಈಗ ಪ್ರಪಂಚದಲ್ಲಿ ಬದುಕುತ್ತಿರುವ ಎಲ್ಲ ಮಾನವರ ವಂಶಮೂಲದ ಆಫ್ರಿಕಾದಲ್ಲಿದ್ದ ಮಂಗಮಾನವ ಎಂದು ನಂಬಲಾಗಿದೆ. ಆಫ್ರಿಕಾದ ಹುಲ್ಲು ಬಯಲಿನ ಪ್ರಖರ ವಿಕಿರಣಯುಕ್ತ ಪರಿಸರದಲ್ಲಿ ಎರಡು ಕಾಲುಗಳ ಮೇಲೆ ನಡೆಯಲು ಕಲಿತ ಮಂಗಮಾನವನ ಪೀಳಿಗೆ ವಿಶೇಷವಾಗಿ ವೃದ್ಧಿಸತೊಡಗಿರಬಹುದು, ಈ ಪೀಳಿಗೆಯೇ ಭೂಮಿಯ ಎಲ್ಲ ಮೂಲೆಗಳಿಗೂ ವಲಸೆ ಹೋಗಿದೆ ಎಂಬುದಕ್ಕೆ ಪುರಾವೆ ತೋರಿಸುತ್ತಾರೆ. ಆದ್ದರಿಂದ, ಬಿಸಿಲಿನಿಂದ ನಮ್ಮ ತ್ವಚೆಯನ್ನು ರಕ್ಷಿಸಿಕೊಳ್ಳುವ ಅಗತ್ಯ ನಮ್ಮ ವಿಕಾಸಕ್ಕೆ ಭಾಗಶಃ ಕಾರಣವಾಗಿರಬಹುದು !

ಎಂ. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯೋಫಿಸಿಕ್ಸ್ ಯೂನಿಟ್, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೧೨

# ಸೀಸದ ನಂಜು : ನಿಯಂತ್ರಿಸಬಹುದಾದ ಭಯಂಕರ ಪಿಡುಗು

*ಕಳೆದ ತಿಂಗಳ ಮೊದಲ ವಾರ ವಿಶ್ವ ಪರಿಸರ ದಿನವನ್ನು ಕೊಂಡಾಡಲಾಯ್ತು. ಬೆಂಗಳೂರಿನಲ್ಲಿ, ಈ ಸಂದರ್ಭದಲ್ಲಿ ನಡೆದ ಎಷ್ಟೋ ಚರ್ಚೆಗಳಲ್ಲಿ ಒಂದು ನೀರು, ಗಾಳಿ, ಆಹಾರ ಇವುಗಳ ಮಾಲಿನ್ಯ ತಡೆಗಟ್ಟಬೇಕಾದ ಅಗತ್ಯತೆಯನ್ನು ಕುರಿತದ್ದು. ಪ್ರಸ್ತುತ ಲೇಖನದಲ್ಲಿ ಒಂದು ಲೋಹವಾಗಿ ಸೀಸ ಮನುಷ್ಯನ ಜೀವನದಲ್ಲಿ ಏನೆಲ್ಲಾ ರಾದ್ಧಾಂತ ನಡೆಸುತ್ತಿದೆ ಎಂಬುದನ್ನು ಪ್ರಸ್ತಾಪಿಸಲಾಗಿದೆ.*

ಎಲ್ಲಾ ಬಗೆಯ ಜೀವಿಗಳಿಗೂ ಸೀಸ ಒಂದು ನಿರುಪಯುಕ್ತ ವಸ್ತು. ಅಲ್ಲದೆ ಅತ್ಯಂತ ಹಾನಿಕರವಾದುದು. ಭೂಮಿಯ ಒಳಪದರದಲ್ಲಿರುವ ಈ ಲೋಹವನ್ನು ಮನುಷ್ಯ ಹೊರತೆಗೆದು, ತನ್ನ ನಿತ್ಯ ಜೀವನದ ಹತ್ತು ಹಲವಾರು ಸಾಮಗ್ರಿಗಳಲ್ಲಿ ವ್ಯಾಪಕವಾಗಿ ಉಪಯೋಗಿಸುತ್ತಾ ಬಂದಿದ್ದಾನೆ. ಆರೇಳು ಸಾವಿರ ವರ್ಷಗಳ ಹಿಂದೆಯೇ ತುರ್ಕಿಯಲ್ಲಿ ಸೀಸದ ಗಣಿಗಳು ಇದ್ದವು. ರೋಮನರು ದಿನನಿತ್ಯದ ಮದ್ಯಪಾನದ ಪಾತ್ರೆಗಳಿಗಾಗಿ, ಬಟ್ಟಲುಗಳಿಗಾಗಿ ಈ ಲೋಹವನ್ನು ಬಳಸುತ್ತಿದ್ದರು. ಅವರ ನಾಗರಿಕತೆಯು ಕ್ಷೀಣಿಸುವುದಕ್ಕೆ ಇದೂ ಒಂದು ಕಾರಣವೆಂದು ಹೇಳುವುದುಂಟು. ಕಬ್ಬಿಣ ಕರಗಿಸುವುದರಲ್ಲಿ ಸೀಸದ ಬಳಕೆ ಇದ್ದು ಕೆಲಸಗಾರರಲ್ಲಿ ಕಾಣಿಸಿಕೊಂಡ ಕಾಯಿಲೆಯನ್ನು ಕ್ರಿ. ಪೂ. ೪೬೦-೩೫೭ರಲ್ಲಿದ್ದ ಹಿಪ್ಪೋಕ್ರೆಟಿಸ್ ಬೆಸುಗೆ ರೋಗವೆಂದು ಹೆಸರಿಸಿದ್ದ. ಸೀಸದ ಕಂಠಹಾರ ಪುರಾತನ ಅನತೋಲಿಯ ಪಟ್ಟಣದಲ್ಲಿ ದೊರೆತಿದೆ. ಚಿನ್ನ ಮತ್ತು ಬೆಳ್ಳಿಯ ಉತ್ಖನನದ ಪ್ರಕ್ರಿಯೆಯಲ್ಲಿ ಉಪವಸ್ತುವಾಗಿ ಸೀಸ ದೊರೆಯುತ್ತಿತ್ತು. ಒಂದು ಕಾಲದಲ್ಲಿ ಸ್ಪೇನ್ ದೇಶದಲ್ಲಿ ಹತ್ತಾರು ಸಹಸ್ರ ಗುಲಾಮರು ಸೀಸದ ಗಣಿಗಳಲ್ಲಿ ದುಡಿಯುತ್ತಿದ್ದರು. ಗ್ರೀಸ್ ದೇಶದ ಸೀಸದ ಗಣಿಯ ಕಾಮಗಾರಿಯ ಬಳಿ ಆಕಾಶವೆಲ್ಲ ಕಪ್ಪು ಮುಸುಕುತ್ತಿದ್ದುದು ದಾಖಲೆಯಾಗಿದೆ.

ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಅಗಾಧ ಪ್ರಮಾಣದಲ್ಲಿ ಸೀಸದ ಬಳಕೆ ನಮ್ಮ ಪರಿಸರವನ್ನೆಲ್ಲಾ ಆವರಿಸಿಬಿಟ್ಟಿದೆ. ಪ್ರಾಣಿಗಳು, ಸಸ್ಯಗಳು ಮತ್ತು ಮಾನವರು ಇದರ ದುಷ್ಪರಿಣಾಮಗಳಿಗೆ ತುತ್ತಾಗಿಬಿಟ್ಟಿದ್ದಾರೆ. ತೀರಾ ಸಣ್ಣ ಪ್ರಮಾಣದಲ್ಲೂ ಕಿಲುಬು ಉಂಟುಮಾಡುವ ಅದರ ವಿಷಕಾರಕ ಗುಣ ಆತಂಕಕಾರಿಯಾಗಿಬಿಟ್ಟಿದೆ.

ಸೀಸ ಸುಲಭವಾಗಿ ಕರಗುವ ಗುಣ ಹೊಂದಿದೆ. ಇಂಗಾಲದೊಡನೆ ಸಲೀಸಾಗಿ ಬೆರೆಯುತ್ತದೆ. ಇದು ತುಕ್ಕನ್ನು ತಡೆಯುತ್ತದೆ. ಬೆಲೆ ಅಗ್ಗ. ಹೀಗಾಗಿ ಲೇಪನ ಕ್ರಿಯೆಯಲ್ಲದೆ ಇತರ ಲೋಹಗಳೊಡನೆ ಬೆರೆಸಿ ಮಿಶ್ರಲೋಹ ತಯಾರಿಸಲು ಹೆಚ್ಚಾಗಿ ಉಪಯೋಗವಾಗುತ್ತದೆ. ಬಣ್ಣದ ಕಣಗಳನ್ನು ಹಿಡಿದಿಟ್ಟುಕೊಳ್ಳಬಲ್ಲದ್ದಾಗಿ, ಎಲ್ಲ ವಿಧದ ಬಣ್ಣಗಳಲ್ಲೂ ಮಿಶ್ರವಾಗಿದೆ. ವಾತಾವರಣದ ವೈಪರೀತ್ಯಗಳನ್ನು ತಡೆದುಕೊಳ್ಳಬಹುದಾದ್ದರಿಂದ ಇದು ಬೇರೆ ಲೋಹಗಳ ಹೊರ ಮೈಯ ಲೇಪನಕ್ಕೆ ಉಪಯೋಗವಾಗುತ್ತದೆ. ಬೆಸುಗೆ ಇರುವೆಡೆಯಲ್ಲೆಲ್ಲಾ ಸೀಸವಿರುತ್ತದೆ. ತವರದ ಕಲಾಯಿಯ ಕ್ರಿಯೆಯಲ್ಲಿ ಸೀಸದ ಕಿಲುಬಿನ ಪಾತ್ರವು ಎಲ್ಲರಿಗೂ ತಿಳಿದ ವಿಷಯ. ಸೀಸದ ಸರ್ವ ವ್ಯಾಪಕತೆಗೆ ಇದಿಷ್ಟೇ ಮಾಹಿತಿ ಸಾಕಾದರೂ, ಇವೆಲ್ಲಕ್ಕಿಂತ ವ್ಯಾಪಕವಾದುದು ವಾಹನಗಳು ವಿಸರ್ಜಿಸುವ ಧೂಮದಲ್ಲಿ ತುಂಬಿರುವ ಸೀಸದ ಕಣಗಳು. ಇವು ನಿರಂತರವಾಗಿ ವಾಯುವನ್ನು ಮಲಿನಗೊಳಿಸಿ, ಉಸಿರಿನ ಮೂಲಕ ಮನುಷ್ಯ ಪ್ರಾಣಿ ಸಸ್ಯ ದೇಹವನ್ನು ಸುಲಭವಾಗಿ ಪ್ರವೇಶಿಸುತ್ತವೆ. ಇದೇ ಕಾರಣದಿಂದಾಗಿ ನೀರಿನಲ್ಲೂ, ಮಣ್ಣಿನಲ್ಲೂ ಬೆರೆಯುತ್ತವೆ. ವಾತಾವರಣಕ್ಕೆ ಒಡ್ಡಿದ ಆಹಾರ, ಹಣ್ಣು, ಹಾಲುಗಳ ಮೇಲೆಲ್ಲಾ ಸೀಸದ ಕಣಗಳು ನೆಲೆಸುತ್ತವೆ. ಮಕ್ಕಳ ಆಟಿಕೆಯ ಬಣ್ಣದ ಮೂಲಕ ಮಗುವಿನ ಶರೀರವನ್ನು ಪ್ರವೇಶಿಸುತ್ತದೆ. ಇದರ ವ್ಯಾಪಕತೆ ಎಷ್ಟಿದೆಯೆಂದರೆ ತಾಯಿಯ ಎದೆಹಾಲಿನಲ್ಲೂ, ಹೊಕ್ಕುಳ ಬಳ್ಳಿಯಲ್ಲೂ ಸೀಸದ ಕಣಗಳು ದೊರೆಯುತ್ತವೆ. ಹಿಟ್ಟು ಬೀಸುವ ಚಕ್ಕಿಯ ಗೂಟದ ಮೂಲಕ, ನೀರಿನ ಕೊಳಾಯಿಯ ಬೆಸುಗೆಯ ಮೂಲಕ, ಅಗ್ಗದ ಗುಣಮಟ್ಟವಿಲ್ಲದ ಅಡಿಗೆಯ ಪಾತ್ರೆ, ಕುಕ್ಕರ್, ಮಿಕ್ಸಿಗಳ ಮೂಲಕವೆಲ್ಲಾ ಸೀಸದ ಕಣಗಳು ನಮ್ಮನ್ನು ಆವರಿಸುತ್ತವೆ. ಎಲೆಕ್ಟ್ರಾನಿಕ್ ಕೈಗಾರಿಕೆಯಲ್ಲಿ ಸಾಲ್ಡರಿಂಗ್ ಕೆಲಸ ಮಾಡುವ ಹೆಣ್ಣು ಮಕ್ಕಳು, ರಸ್ತೆ ಸಂಚಾರ ನಿರ್ವಹಿಸುವ ಪೊಲೀಸರು, ಬ್ಯಾಟರಿ ಕೆಲಸಗಾರರು ಇವರೆಲ್ಲಾ ನಿರಂತರ ಸೀಸದ ಆಘಾತಕ್ಕೆ ತುತ್ತಾಗುತ್ತಿರುವವರು. ಮನೆಯೊಳಗಿನ ಗೋಡೆಯ ಪೆಯಿಂಟ್, ನೆಲಕ್ಕೆ ಹಾಸಿದ ಕಾರ್ಪೆಟ್‌ಗಳಲ್ಲಿ ಸೀಸದ ಕಣಗಳು ತುಂಬಿ ನಮ್ಮ ಉಸಿರಿನೊಡನೆ ಶರೀರ ಸೇರುತ್ತಲೇ ಇರುತ್ತವೆ. ಅನೇಕ ಸಾಂಪ್ರದಾಯಿಕ ಔಷಧಿ ತಯಾರಿಕೆಯ ಉಪಕರಣಗಳಿಂದ ಸೀಸದ ಕಣ ಸೇರುತ್ತದೆ. ತಪ್ಪು ತಿಳುವಳಿಕೆಯಿಂದಾಗಿ



*ರೋಗಿಯ ರಕ್ತವನ್ನು ಗಾಜಿನ ಮೇಲೆ ಲೇಪಿಸಿ ಚಿತ್ರದಲ್ಲಿ ಕಾಣುವ ಉಪಕರಣದಲ್ಲಿಟ್ಟು ಸೀಸದ ಪರಿಮಾಣವನ್ನು ತಿಳಿಯಬಹುದು*

ಸೀಸವನ್ನು ಔಷಧಿಗೆ ಉಪಯೋಗಿಸುತ್ತಿದ್ದುದೂ ಉಂಟು. ರಾಸಾಯನಿಕ ಪರಿಮಳ ದ್ರವ್ಯಗಳನ್ನು ದಿನನಿತ್ಯ ಬಳಸುವವರು, ಊದುಬತ್ತಿ ತಯಾರಿಕೆಯ ಘಟಕದ ಸುತ್ತಮುತ್ತ ವಾಸಿಸುವವರು, ಪಟ್ಟಣಗಳ ಕೈಗಾರಿಕಾ ಕಸವನ್ನು ಸುಟ್ಟಾಗ ಬರುವ ಹೊಗೆಯನ್ನು ಸೇವಿಸುವವರು ಇವರಲ್ಲೆಲ್ಲಾ ಸೀಸದ ಕಣ ಸೇರುತ್ತದೆ. ಗುಣಮಟ್ಟವಿಲ್ಲದ ಪ್ಲಾಸ್ಟಿಕ್ ಬ್ಯಾಗ್, ಪೊಟ್ಟಣ ಕಟ್ಟುವ ಸಾಮಗ್ರಿಯ ಬಣ್ಣದಲ್ಲಿ, ವರ್ತಮಾನ ಪತ್ರಿಕೆಗಳ ಇಂಕಿನಲ್ಲಿ ಸೀಸ ಅಡಗಿ ಕೂತಿದೆ. ಕೊಳಚೆ ಪ್ರದೇಶದಲ್ಲಿ ವಾಸಿಸುವವರ ಪಾಡಂತೂ ಹೇಳಲೇಬೇಕಿಲ್ಲ. ಒಟ್ಟಿನಲ್ಲಿ ಸೀಸ ನಮ್ಮ ಪರಿಸರವನ್ನು ಮುಕ್ಕಿಬಿಟ್ಟಿದೆ. 'ಸರ್ವಂ ಸೀಸಮಯಂ ಜಗತ್' ಎಂದರೆ ಉತ್ಪ್ರೇಕ್ಷೆಯಲ್ಲ.

ಪರಿಸರ ಮಾಲಿನ್ಯದ ಅನರ್ಥವನ್ನು ಮಾನವ ಹಿಂದೆಯೂ ತಿಳಿದಿದ್ದ. ಕಳೆದ ಶತಮಾನದಲ್ಲಿ ಕಲ್ಲಿದ್ದಲಿನ ಗಣಿ ಕೆಲಸಗಾರರು ಭೂಗರ್ಭದಲ್ಲಿ ಕಣ್ಣಿಗೆ ಕಾಣದ ವಿಷವಾಯುವಿಗೆ ಬಲಿಯಾಗುತ್ತಿದ್ದರು. ಗಣಿಯೊಳಗಿಳಿಯುವಾಗ ಹಕ್ಕಿಯೊಂದನ್ನು ತಮ್ಮೊಡನೆ ಕೊಂಡೊಯ್ಯುತ್ತಿದ್ದರಂತೆ. ಆ ಹಕ್ಕಿಗೇನಾದರೂ ಆಘಾತವಾದರೆ ತಕ್ಷಣ ಕೆಲಸಗಾರರು ವಿಷವಾಯು ಬರುತ್ತಿದೆ ಎಂದು ಗ್ರಹಿಸಿ ಸ್ಥಳ ಬಿಟ್ಟು ಓಡುತ್ತಿದ್ದರಂತೆ. ಪಕ್ಷಿಗಳೂ ಕೂಡ ತಮ್ಮ ಗೂಡುಗಳನ್ನು ವಾಹನ ಸಂಚಾರ ತುಂಬ ಇರುವ ಮಲಿನ ಪರಿಸರದ ಬಳಿ ಕಟ್ಟುವುದಿಲ್ಲ. ಆಧುನಿಕ ವೈದ್ಯಶಾಸ್ತ್ರ ಸೀಸದಿಂದಾಗುವ ದುಷ್ಪರಿಣಾಮಗಳನ್ನು ದಾಖಲು ಮಾಡಿದೆ. ಅಳತೆ ಮೀರಿ ಸೀಸ ದೇಹದ ರಕ್ತದಲ್ಲಿ ಕಂಡುಬಂದರೆ ಆಗಬಹುದಾದ ಪರಿಣಾಮಗಳು ಒಂದಲ್ಲ ಎರಡಲ್ಲ.

ನರಮಂಡಲ ಕಾಯಿಲೆ, ಕೆಂಪು ರಕ್ತ ಕಣಕ್ಕೆ ಸಂಬಂಧಪಟ್ಟ ಕುತ್ತು, ರಕ್ತಹೀನತೆ, ಅಸ್ಥಿಮಜ್ಜೆ, ಮಲಮೂತ್ರವಿಸರ್ಜನಾ ಮಾರ್ಗ, ಕರುಳಿನ ಹಾದಿ, ಜನನಾಂಗಗಳು, ಒಟ್ಟಿನಲ್ಲಿ ಎಲ್ಲ ವಿಧವಾದ ಶಾರೀರಿಕ ಬೆಳವಣಿಗೆಗಳನ್ನೂ ಕುಂಠಿತಗೊಳಿಸುವ, ಜಖಂ ಮಾಡುವ ಖಾಯಿಲೆಗಳಾಗಿ ಕಾಣಿಸಿಕೊಳ್ಳುತ್ತವೆ; ಬುದ್ಧಿಮಾಂದ್ಯ, ಅಂಗವಿಕಲತೆ, ರಕ್ತಹೀನತೆ ಹಾಗೂ ಸಾಧಾರಣವಾಗಿ ಒಣಗಿ ಕ್ಷಯಿಸುವ ರೀತಿಯ ರೋಗಗಳು ಉಂಟಾಗುತ್ತವೆ. ಚಿಕ್ಕಮಕ್ಕಳು ತಾಯಿಯ ಗರ್ಭದಲ್ಲೇ ಸೀಸದ ಆಘಾತಕ್ಕೆ ತುತ್ತಾಗಿ, ಮೆದುಳಿನ

**ಸೀಸದ ನಂಜಿನ ಕೆಲವು ಲಕ್ಷಣಗಳು**

ತೀರಾ ಹೆಚ್ಚೆನ್ನುವಷ್ಟು ಚಟುವಟಿಕೆ ತೋರುವ ಮಗು ಓದಿನಲ್ಲಿ ಮಾತ್ರ ಹಿಂದು. ಮಗು ಮಣ್ಣು ತಿನ್ನುತ್ತದೆ. ಕಿವಿ ಮಂದ. ಬೇರೆ ಕಾರಣಗಳು ತಿಳಿಯದೆ, ರಕ್ತಹೀನತೆ, ವಿಚಿತ್ರ ಹೊಟ್ಟೆ ನೋವು, ಬೆಳವಣಿಗೆಯಲ್ಲಿ ಕುಂಠಿತ, ಬುದ್ಧಿಮಾಂದ್ಯ - ಇವೆಲ್ಲ ಮಕ್ಕಳಲ್ಲಿ ಕಂಡುಬಂದರೆ, ಸೀಸದ ನಂಜನ್ನು ಸಂಶಯಿಸಬೇಕು.

ಕಾರಣ ತಿಳಿಯದ ರಕ್ತಹೀನತೆ, ನಿಶ್ಶಕ್ತಿ, ಹಿರಿಯರಲ್ಲಿ ಸೀಸದ ನಂಜು, ಕಬ್ಬಿಣದ ಕೊರತೆ ಎರಡನ್ನೂ ಸೂಚಿಸುತ್ತದೆ.

ಕಾರಣ ತಿಳಿಯದ ರಕ್ತದ ಒತ್ತಡ, ನಿರ್ವೀರ್ಯತೆ, ತಲೆ ಸುತ್ತುವಿಕೆ, ಶಕ್ತಿಹೀನತೆ, ಅಂಗಾಂಗಗಳ ನೋವು, ಮಲಬದ್ಧತೆ ಇವೂ ಹಿರಿಯರಲ್ಲಿ ಸೀಸದ ನಂಜಿನ ಸೂಚನೆಗಳು.

ಬೆಳವಣಿಗೆಯಿಂದಲೇ ವಂಚಿತವಾಗುತ್ತವೆ. ಸೀಸದ ನಂಜಿಗೆ ಬಲಿಯಾದವರ ಬುದ್ಧಿಶಕ್ತಿ ಕುಂಠಿತ ವಾಗಬಹುದು. ಕಿವುಡುತನ, ವಿಟಮಿನ್ 'ಡಿ' ಕೊರತೆಯಿಂದುಂಟಾಗುವ ಕಾಯಿಲೆಗಳು, ಬರಬಹುದು. ಮೂತ್ರಪಿಂಡದ ಕಾಯಿಲೆ, ಮೆದುಳು ರೋಗದಂತಹ ಯಾವುದೇ ದುಷ್ಪರಿಣಾಮಗಳು ಉಲ್ಬಣಗೊಂಡು ಸಾವಿನಲ್ಲಿ ಪರ್ಯವಸಾನವಾಗಬಹುದು.

ಪರಿಸರ ಸೀಸದಿಂದ ಸಂಪೂರ್ಣವಾಗಿ ಮುಕ್ತವಾಗಲು ಸಾಧ್ಯವಾಗದೆ ಹೋದರೂ, ಮನುಷ್ಯ ಅದರ ಪರಿಣಾಮದಿಂದ ತಪ್ಪಿಸಿಕೊಳ್ಳುವ ಸಾಧ್ಯತೆಗಳಿವೆ. ಇದರ ಬಗ್ಗೆ ತಿಳಿವಳಿಕೆ ಮತ್ತು ಪ್ರಜ್ಞಾಪೂರ್ವಕ ಎಚ್ಚರಿಕೆ ಅತ್ಯಗತ್ಯ. ದಿನ ಬಳಕೆಯ ವಸ್ತುಗಳಲ್ಲಿ ಸೀಸದ ಉಪಯೋಗ ಅನಿವಾರ್ಯವಲ್ಲ. ಬಣ್ಣದಲ್ಲಿ ಸೀಸದ ಬಳಕೆ ಅಗತ್ಯವಿಲ್ಲ. ಕಾನೂನು ರೀತ್ಯಾ ಸೀಸದ ಬಳಕೆಯನ್ನು ತಡೆಗಟ್ಟಬಹುದು. ಗಾಳಿಗೆ ಸೀಸ ಬೆರೆಯುವ ಮಾಧ್ಯಮಗಳನ್ನು ನಿಯಂತ್ರಿಸಬೇಕಾಗುತ್ತದೆ. ಈ ತಿಳಿವಳಿಕೆ ಬಂದಮೇಲೆ ಈಗ ವಿಶ್ವದಾದ್ಯಂತ ಸೀಸವಿಲ್ಲದ ಪೆಟ್ರೋಲ್ ಬಳಕೆಗೆ ಬಂದಿರುವುದು ಈ ನಿಟ್ಟಿನಲ್ಲಿ ಒಂದು ಉತ್ತಮ ಬೆಳವಣಿಗೆ. ವಾಹನ ಸಂಚಾರದ ಮಾರ್ಗದಲ್ಲಿ ರಸ್ತೆಯ ಬದಿಗೆ ಸುಣ್ಣ ಬಳಿದರೆ, ಸುಣ್ಣ ಬೆರೆತ ನೀರಿನ ಕಾರಂಜಿಗಳನ್ನು ಸ್ಥಾಪಿಸಿದರೆ, ಅದು ಹೊಗೆಯನ್ನು, ಅದರಲ್ಲಿರುವ ವಿಷಪೂರಿತ ವಸ್ತುಗಳನ್ನು, ಹೀರಿಕೊಳ್ಳುತ್ತದೆ. ಆಹಾರ ಪದಾರ್ಥಗಳ ವಿತರಣೆಗೆ ಸಂಬಂಧಪಟ್ಟ ಕಾನೂನುಗಳನ್ನು ಶಿಸ್ತುಬದ್ಧವಾಗಿ ಪಾಲಿಸಬೇಕು, ಕಲಬೆರಕೆಯ ವಿರುದ್ಧ ನಿಷ್ಠುರವಾದ ಕ್ರಮಗಳನ್ನು ಕಾರ್ಯರೂಪಕ್ಕೆ ತರಬೇಕು. ಅರಿಶಿನದ ಪುಡಿಯಲ್ಲಿ ತೂಕ ಹೆಚ್ಚಿಸಲು ಸೀಸದ ಆಕ್ಸೈಡ್ ಬೆರೆಸುವವರನ್ನು ಸಮಾಜದ್ರೋಹಿಗಳೆಂದು ಘೋಷಿಸಿ ಉಗ್ರಕ್ರಮ ಕೈಗೊಳ್ಳಬೇಕು. ಏಕೆಂದರೆ ಅದು ಒಂದು ಕೊಲೆಗಡುಕತನದಂತಹ ಅಪರಾಧ. ಕಸವನ್ನು ಸುಡುವ ಕ್ರಮವನ್ನು ವೈಜ್ಞಾನಿಕವಾಗಿ ಪಾಲಿಸುವಂತೆ ನೋಡಿಕೊಳ್ಳಬೇಕು. ಸೀಸವಿಲ್ಲದ ಬಣ್ಣ ಉಪಯೋಗಿಸಬೇಕು. ಬೆಸುಗೆಯ ವಿಧಾನವನ್ನು ಪರಿಷ್ಕರಿಸಬೇಕು. ಹೀಗೆ ಇನ್ನೂ ಎಷ್ಟೋ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ.

ಸೀಸದ ನಂಜಿಗೆ ತುತ್ತಾದವರನ್ನು ಪರೀಕ್ಷಿಸಿ ದೇಹದಿಂದ ಸೀಸ ಹೊರತೆಗೆಯುವಂತಹ ಔಷಧಿಗಳು ಈಗ ಲಭ್ಯ. ಸೀಸದ ನಂಜು ತಗಲುವಂತಹ ಪರಿಸರದಲ್ಲಿ ಕೆಲಸ ಮಾಡುವವರಿಗೆ ಆಗಾಗ್ಗೆ ರಕ್ತ ಪರೀಕ್ಷೆ ಮಾಡಿಸಿಕೊಂಡು ವೈದ್ಯಕೀಯ ಸಲಹೆ, ಚಿಕಿತ್ಸೆ ಪಡೆಯುವ ಸೌಲಭ್ಯವನ್ನು ಒದಗಿಸಬೇಕಾಗಿದೆ. ಅಂತಹ ಉದ್ಯಮ ನಡೆಸುವವರು ಇದಕ್ಕೆ ಸಂಬಂಧಪಟ್ಟ ನಿಯಮಗಳನ್ನು ಕೂಡಲೇ ಜಾರಿಗೆ ತರಬೇಕಾಗಿದೆ. ಕೆಲಸಗಾರರಿಗೆ ಪ್ರತ್ಯೇಕ ಉಡುಪು, ಮುಖ, ಬಾಯಿಗೆ ರಕ್ಷಣೆ ನೀಡುವ ವಿಶೇಷ ರೀತಿಯ ಮುಖವಾಡಗಳನ್ನು ಕೊಡಬೇಕು. ಬೆಸುಗೆ ಮಾಡುವ ಕಡೆ ನೆಲದ ಮಟ್ಟಕ್ಕೆ ಸಮೀಪವಾಗಿ ಗಾಳಿಯನ್ನು ಹೊರದೂಡುವ ಎಕ್ಸಾಸ್ಟ್ ಫ್ಯಾನ್ ಹಾಕಬೇಕು. ಕಾರ್ಖಾನೆಯ ಹೊರಗಡೆ, ವಿಷಾನಿಲಗಳು ಗಾಳಿಗೆ ಹೋಗದಂತೆ ಕ್ರಮ ಕೈಗೊಳ್ಳಬೇಕು. ಉದಾಹರಣೆಗೆ, ಬೆಂಗಳೂರು ನಗರದ ಪೊಲೀಸಿನವರಿಗೆ ಈಗ ಸೆಂಟ್ ಜಾನ್ ಕಾಲೇಜಿನಲ್ಲಿ ನಿಯತಕಾಲಿಕ ತಪಾಸಣೆ ನಡೆಯುತ್ತಿದೆ, ವಿಶೇಷ ಉಡುಪು, ಮುಖವಾಡ, ಚಿಕಿತ್ಸೆ ಲಭ್ಯವಾಗಿದೆ. ಎಲ್ಲ ವೈದ್ಯರಿಗೂ ಸೀಸ ಮತ್ತು ಇತರ ಭಾರಲೋಹದ ಕಾಯಿಲೆಯ ಬಗ್ಗೆ ತಕ್ಷಣವೇ ಗುರುತಿಸುವಂತೆ ತರಪೇತಿ ನೀಡಬೇಕು. ಹಿರಿಯರಲ್ಲಿ ಸೂಚನೆ ಕಂಡುಬಂದ ತಕ್ಷಣ ಪರಿಹಾರದ ಚಿಕಿತ್ಸೆ ಇಂದು ಸಾಧ್ಯವಾಗಿದೆ.

ಸೀಸದ ನಂಜಿನ ಕೆಟ್ಟ ಪರಿಣಾಮಕ್ಕೆ ಹೆಚ್ಚು ಗುರಿಯಾಗುವವರು ಮಕ್ಕಳೇ. ಕಾರಣ, ಒಮ್ಮೆ ಈ ಜಾಡ್ಯದ ಸೋಂಕು ತಗುಲಿದರೆ ಈ ಮಕ್ಕಳು ಜೀವನಾದ್ಯಂತ ಅಂಗವಿಕಲತೆ ಮತ್ತು ಬುದ್ಧಿಮಾಂದ್ಯತೆಯಂತಹ ದಾರುಣ ಪರಿಣಾಮವನ್ನು ಅನುಭವಿಸಬೇಕಾಗುತ್ತದೆ. ಮಕ್ಕಳ ರಕ್ತದಲ್ಲಿ ಸೀಸದ ಪ್ರಮಾಣ ಮತ್ತು ಸಂಬಂಧಪಟ್ಟ ಪರಿಣಾಮವನ್ನು ಪಟ್ಟಿ ಮಾಡಿದ್ದಾರೆ. ಒಂದು ಡೆಸಿಲೀಟರ್ (೧/೧೦) ರಕ್ತದಲ್ಲಿ ೯ ಮೈಕ್ರೋ ಗ್ರಾಂ.ಗಿಂತ (೯/೧೦,೦೦,೦೦೦) ಕಡಿಮೆ ಸೀಸವಿದ್ದರೆ ಅದು ಅಪಾಯಕಾರಿಮಟ್ಟದ್ದಲ್ಲವೆನ್ನಬಹುದು. ಇದು ೧೦-೧೪, ೧೫-೧೯, ೨೦-೪೪, ೪೫-೬೯, ೧೦೦ಕ್ಕಿಂತ ಹೆಚ್ಚು - ಈ ಹಂತಗಳಲ್ಲಿ ಆರೋಗ್ಯದ ಮೇಲಾಗುವ ಪರಿಣಾಮಗಳ ತೀವ್ರತೆ ಹೆಚ್ಚುತ್ತಾ ಹೋಗುತ್ತದೆ. ೨೦-೪೪ರ ಹಂತದಲ್ಲಿ ಕಬ್ಬಿಣದ ಕೊರತೆಯು ಸೇರಿರುತ್ತದೆ. ೪೫-೬೯ರಲ್ಲಿ, ೪೮ ಗಂಟೆಗಳೊಳಗೆ ಚಿಕಿತ್ಸೆ ಮಾಡಲೇಬೇಕು. ೧೦೦ಕ್ಕಿಂತ ಹೆಚ್ಚಾದಾಗ ತಕ್ಷಣವೇ ಚಿಕಿತ್ಸೆಯಾಗಬೇಕು. ನಮ್ಮ ನಾಡಿನ ಆರು ಪಟ್ಟಣಗಳಲ್ಲಿ ರಕ್ತದಲ್ಲಿನ ಸೀಸದ ಪ್ರಮಾಣವನ್ನು ೨೩,೭೦೦ ಮಕ್ಕಳಲ್ಲಿ ಪರೀಕ್ಷಿಸಲಾಯಿತು. ಹಾಗೆಯೇ ಕೆಲವು ಅಪರೋಕ್ಷ ಮಾರ್ಗದಿಂದ ದೇಶದ ಮತ್ತು ಕೆಲವು ನಗರಗಳ ಪರಿಸರದಲ್ಲಿನ ಸೀಸದ ಮಟ್ಟವನ್ನು ಅಂದಾಜು ಮಾಡಲಾಯಿತು. ಹನ್ನೆರಡು ವರ್ಷದ ಒಳಗಿನ ಮತ್ತು ಅದಕ್ಕೆ ಮೇಲ್ಪಟ್ಟುವೆಂದು ಮಕ್ಕಳ ಪರಿಸ್ಥಿತಿಯನ್ನು ಎರಡು ಮಟ್ಟದಲ್ಲಿ ಪರೀಕ್ಷಿಸಲಾದ ನಂತರ ದೊರೆತ ಮಾಹಿತಿಯು ದಿಗ್ಭ್ರಮೆಗಳಿಗೆ ಎಡೆಮಾಡಿಕೊಡುತ್ತದೆ. ಪಟ್ಟಣದವರಿಗಿಂತ ಹಳ್ಳಿಗಾಡಿನ ಮಕ್ಕಳಲ್ಲಿ ಕಡಿಮೆ ಸೀಸ ಕಂಡುಬಂದರೂ ಎರಡೂ ಗುಂಪಿನಲ್ಲೂ ಸರಾಸರಿ ಶೇ. ೫೦ರಷ್ಟು ಮಕ್ಕಳ ಸೀಸದ ಮಟ್ಟ ಶೇ. ೧೦ಕ್ಕಿಂತ ಹೆಚ್ಚು ಎಂದು ಕಂಡುಬಂದಿದೆ. ಒಟ್ಟಾರೆ ದೇಶದಲ್ಲಿ ಕಲ್ಕತ್ತ, ಬೆಂಗಳೂರು ಮತ್ತು ಚೆನ್ನೈ ನಗರಗಳಲ್ಲಿ ಇದು ಹೆಚ್ಚುತ್ತಿದೆ. ಮುಂಬಯಿ ಮತ್ತು ದೆಹಲಿಯಲ್ಲಿ ಬೇರೆಲ್ಲೆಡೆಗಿಂತ ಹೆಚ್ಚಿದ್ದು ಈಗ ಕಡಿಮೆಯಾಗುತ್ತಿರುವ ಸೂಚನೆಗಳು ಕಂಡುಬಂದಿವೆ. ಬಹುಶಃ ಈ ಎರಡು ನಗರಗಳಲ್ಲಿ ಸೀಸ ರಹಿತ ಪೆಟ್ರೋಲ್ ಕಡ್ಡಾಯವಾಗಿ ಬಳಕೆಗೆ ಬಂದುದರ ಪರಿಣಾಮವಿರಬೇಕು. ಮಕ್ಕಳ ವಿಷಯದಲ್ಲಂತೂ ತುರ್ತು ಕ್ರಮ ತೆಗೆದುಕೊಳ್ಳದಿದ್ದರೆ, ಬುದ್ಧಿಮಾಂದ್ಯತೆ, ಅಂಗವಿಕಲತೆಯ ಆಪತ್ತುಗಳಿಗೆ ಒಳಗಾಗಬಹುದೆಂಬುದು ಪರಿಸ್ಥಿತಿಯ ಗಂಭೀರತೆಯನ್ನು ಸಾರುತ್ತದೆ. ಗರ್ಭಿಣಿ ಹೆಂಗಸರ ಮತ್ತು ಎಲ್ಲ ಮಕ್ಕಳ ನಿಯತಕಾಲಿಕ ಸೀಸದ ಪರೀಕ್ಷೆ ಮತ್ತು ಚಿಕಿತ್ಸೆ ರಾಷ್ಟ್ರಮಟ್ಟದಲ್ಲಿ ತುರ್ತಾಗಿ ನಡೆಯಬೇಕಾಗಿದೆ.

*ಇತ್ತೀಚಿನ ರಕ್ತ ಪರೀಕ್ಷೆಯ ಫಲಿತಾಂಶಗಳ ಮಾಹಿತಿಯನ್ನು ವಿಶ್ಲೇಷಿಸಿದಾಗ ಒಂದು ಸ್ವಾರಸ್ಯಕರ ವಿಷಯ ಕಂಡುಬಂತು. ರಕ್ತದಲ್ಲಿನ ಸೀಸವನ್ನು ರೇಡಿಯೋ ಐಸೊಟೋಪ್ ಫಿಂಗರ್ ಪ್ರಿಂಟ್ ಮೂಲಕ ಪರೀಕ್ಷಿಸಿದಾಗ, ಬಹುಪಾಲು ಭಾರತೀಯರ ದೇಹದ ಸೀಸ ಹೊರನಾಡಿನದು ಎಂದು ತಿಳಿದುಬಂತು ! ಹೊರಗಿನಿಂದ ತರಿಸಿಕೊಂಡ ಕೈಗಾರಿಕಾ ವಸ್ತುಗಳ ಗುಣಮಟ್ಟ ಕಡಿಮೆ ಇದ್ದು ಅವುಗಳಲ್ಲಿ ಬಳಸಿರುವ ಸೀಸ ಸಾವಯವ ಮಾರ್ಗದಲ್ಲಿ ಬೆರೆತುಕೊಂಡಿದೆ. ಮುಂದುವರಿದ ರಾಷ್ಟ್ರಗಳು ತಮ್ಮ ರಾಷ್ಟ್ರದಲ್ಲೇ ಬಳಕೆಯಾಗುವ ವಸ್ತುಗಳ ಗುಣಮಟ್ಟ ಕಾಯ್ದುಕೊಳ್ಳುತ್ತಾರೆ. ರಫ್ತು ಮಾಡುವಂಥವು ಎಷ್ಟೋ ಸಲ ಕಳಪೆಯವು. ಇತ್ತೀಚೆಗೆ ಬಹಳ ಭಾರಿ ಪ್ರಮಾಣದ ಸಿಗರೇಟ್ ಉತ್ಪಾದನೆಯನ್ನು ಅಮೆರಿಕ ಸರ್ಕಾರ ಗುಣಮಟ್ಟ ಸಾಲದೆಂದು ಅದನ್ನು ದೇಶದಲ್ಲಿ ಮಾರದಂತೆ ತಡೆದರೂ, ಅದನ್ನು ವಶಪಡಿಸಿಕೊಂಡು ಹಾಳುಮಾಡಲಿಲ್ಲ.*

ನಿಯತಕಾಲಿಕ ಪರೀಕ್ಷೆ ಮತ್ತು ಚಿಕಿತ್ಸೆಗಳಿಗೆ ನಮ್ಮಲ್ಲಿನ ವೈದ್ಯಕೀಯ ವ್ಯವಸ್ಥೆ ಒಂದಿಷ್ಟೂ ಸಜ್ಜಾಗಿಲ್ಲ. ಈಗಷ್ಟೆ ಈ ಬಗ್ಗೆ ತಿಳಿವಳಿಕೆ ಮೂಡಲಾರಂಭಿಸಿದೆ. ಜನರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸುವ ಬೃಹತ್ ಕಾರ್ಯವನ್ನು ಪ್ರಪ್ರಥಮವಾಗಿ ನಡೆಸುತ್ತಿರುವ ಸಂಸ್ಥೆ ಅಡ್ಮಿರಲ್ ಡಾಸನ್‌ರವರ ಅಧ್ಯಕ್ಷತೆಯನ್ನು ಹೊಂದಿರುವ ಜಾರ್ಜ್ ಫೌಂಡೇಷನ್. ಡಾ॥ ಅಬ್ರಹಾಂ ಜಾರ್ಜ್ ಅಮೆರಿಕದ ಅನಿವಾಸಿ ಭಾರತೀಯ. ಆ ದೇಶದಲ್ಲಿ ಸೀಸದ ವಿಷಯದ ಬಗ್ಗೆ ನಡೆಯುತ್ತಿರುವ ಸಂಶೋಧನೆಗಳನ್ನು ಹತ್ತಿರದಿಂದ ಗಮನಿಸಿರುವ ಜಾರ್ಜ್ ನಮ್ಮ ದೇಶದಲ್ಲಿ ಅಂಥ ಕಾರ್ಯಕ್ರಮವನ್ನು ಹುಟ್ಟುಹಾಕಲು ಈ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಈ ಸಂಸ್ಥೆ ಬೆಂಗಳೂರಿನಲ್ಲಿ ಸೇಂಟ್ ಜಾನ್ ಆಸ್ಪತ್ರೆಯ ಆಶ್ರಯವನ್ನು ಪಡೆದಿದೆ. ಬಯೋಕೆಮಿಸ್ಟ್ರಿ ವಿಭಾಗದ ಡಾ॥ ಟಿ. ವೆಂಕಟೇಶರು ಮೊದಲಿಗೆ ಬೆಂಗಳೂರಿನಲ್ಲೂ ಈಗ ದೇಶಾದ್ಯಂತವೂ ಈ ನಿಟ್ಟಿನ ಕಾರ್ಯಕ್ರಮವನ್ನು ಚಳುವಳಿಯೋಪಾದಿಯಲ್ಲಿ ನಡೆಸುತ್ತಿದ್ದಾರೆ.

ಪರಿಸರ ಮಾಲಿನ್ಯವು ಮಾನವ ನಿರ್ಮಿತ. ಎಂದಿಗೂ ಪ್ರಾಣಿಗಳು ತಮಗೇ ಮಾರಕವಾಗುವ ರೀತಿ ಪರಿಸರವನ್ನು ಹಾಳುಮಾಡುವುದು ಕಂಡುಬಂದಿಲ್ಲ. ಮಾನವ ಮಾಲಿನ್ಯವನ್ನು ನಿಲ್ಲಿಸಲೂ ಬಲ್ಲ ಎಂಬ ನಂಬಿಕೆ ಈ ಕಾರ್ಯಕ್ರಮಕ್ಕೆ ಹುರುಪು ನೀಡಿದೆ. ಸಾರ್ವಜನಿಕರೂ ಸರ್ಕಾರವೂ ಉದ್ಯಮಪತಿಗಳೂ ಸೀಸ ಪರೀಕ್ಷೆಯ ಉಪಕರಣ ಮತ್ತು ಔಷಧಿಗಾಗಿ ನಿಧಿ ನೀಡಿ, ತಿಳಿವಳಿಕೆಯನ್ನು ಹರಡಲು ವ್ಯಾಪಕವಾಗಿ ಪ್ರಯತ್ನಿಸುವ ಗಳಿಗೆ ಬಂದಿದೆ.

*(ಈ ಚಳುವಳಿಯಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು, ಸೀಸದ ನಂಜಿಗೆ ಚಿಕಿತ್ಸೆಯ ಅಗತ್ಯವಿರುವವರು ಬೆಂಗಳೂರಿನಲ್ಲಿ ಡಾ॥ ಟಿ. ವೆಂಕಟೇಶ್ ಅವರನ್ನು ಸಂಪರ್ಕಿಸಬಹುದು. ದೂರವಾಣಿ : ೫೫೩೨೧೪೬ ಅಥವಾ ೫೫೩೦೨೪-೫೦೫೦).*

ಕೆ. ಎಸ್. ಪಾರ್ಥಸಾರಥಿ
ಇ-೧೦, ವೈರ್‌ಲೆಸ್ ಮಾನಿಟರಿಂಗ್ ಸ್ಟೇಷನ್ ಕಾಂಪೌಂಡ್, ಜಯನಗರ, ಬೆಂಗಳೂರು - ೫೬೦ ೦೪೧

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ !
ತನುವಿನಲಿ ಹುಸಿ ತುಂಬಿ, ಮನದಲ್ಲಿ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ !
ಕೂಡಲಸಂಗಮದೇವ.

ಬಸವಣ್ಣ

# ಬೀರಣ್ಣನ ಪತ್ರ

**ಮಾ**ನ್ಯ ಮಾನವ ಸಂಪನ್ಮೂಲ ಮಂತ್ರಿಗಳಾದ ಶ್ರೀ ಮುರಳಿ ಮನೋಹರ ಜೋಶಿ ಅವರಿಗೆ ಗೊಂದಲಪುರದ ಬೀರಣ್ಣನ ಅನೇಕ ನಮಸ್ಕಾರಗಳು.

ನಿಮ್ಮದೆಲ್ಲ ಆರಾಮವಷ್ಟೇ. ನಾವು ತಕ್ಕಮಟ್ಟಿಗೆ ಪಾಡಾಗಿದ್ದೇವೆ. ಕೆಲವು ತಿಂಗಳ ಹಿಂದೆ ನಿಮ್ಮನ್ನು ಭೇಟಿ ಮಾಡಿದ್ದೆ. ನನ್ನ ಮಗ ಫಲಜ್ಯೋತಿಷಿಯಾದರೆ ಸಾಕಷ್ಟು ಕಮಾಯಿಸಬಹುದೆಂದು ಕನಸು ಕಾಣುತ್ತ ನಿಮ್ಮ ಶಿಫಾರಸಿಗಾಗಿ ಬಂದಿದ್ದೆ. 'ಇದಕ್ಕೆ ಸಂಸ್ಕೃತ ಕಲಿತಿರಬೇಕಾದ್ದು ಅಗತ್ಯ' - ಎಂದು ನೀವು ನನ್ನನ್ನು ಒಂದೇ ಮಾತಿಗೆ ಚಿತ್ ಮಾಡಿದಿರಿ. ನಾನು ಪೆಚ್ಚಾಗಿ ಹಿಂದಿರುಗಿದೆ.

ನಮ್ಮ ಹೊಲದ ತೆವರಿ ಮೇಲಿರುವ ಬೇವಿನ ಮರದ ಕೆಳಗೆ ಕುಳಿತು ಆಲೋಚಿಸಿದಾಗ ನನಗೆ ಜ್ಞಾನೋದಯವಾಯಿತು! ಶೂದ್ರರ ನಾಲಿಗೆಯಲ್ಲಿ ದೇವಭಾಷೆ ಸಂಸ್ಕೃತ ನುಸುಳಬಾರದು ಎಂಬ ನಿಮ್ಮ ವಿಚಾರ 'ಭಾರತೀಯ ಸಂಸ್ಕೃತಿ'ಗೆ ಅನುಗುಣವಾಗಿಯೇ ಇದೆ. ಶೂದ್ರರು ಮಾತಾಡುತ್ತ ಬೆಳೆಯುತ್ತಾರೆ, ಸಂಸ್ಕೃತ ಶ್ಲೋಕಗಳನ್ನು ಪಠಿಸುತ್ತಾ ಬೆಳೆಯುವುದಿಲ್ಲ. ಇದು ನನ್ನ ತಲೆಗೆ ತಡವಾಗಿ ಹೊಳೆಯಿತು !

ನಮ್ಮ ಕೆಲವು ವಿಚಾರವಾದಿಗಳು, ಬುದ್ಧಿಜೀವಿಗಳು, ವಿಜ್ಞಾನಿಗಳು ಇತ್ತೀಚೆಗೆ ತೀರಾ ಗಂಭೀರವಾಗಿ ವಾದ-ವಿವಾದ ನಡೆಸುತ್ತಿರುವುದನ್ನು ಗಮನಿಸುತ್ತಿದ್ದೇನೆ. ಯಾರೇ ಕೂಗಾಡಲಿ, ಏನೇ ಚೀರಾಡಲಿ - ನೀವಂತೂ ನಿಮ್ಮ ಆತ್ಮಕ್ಕೆ ಪ್ರಿಯವಾದ ಹಿಡೆನ್ ಅಜೆಂಡಾ ಬಿಟ್ಟು ಸರಿಯುವವರಲ್ಲ ಎಂಬುದನ್ನು ಬಲ್ಲೆ. ನಮ್ಮ ಕುವೆಂಪು ವಿಶ್ವವಿದ್ಯಾನಿಲಯ ಸಹ, ವಿಶ್ವವಿದ್ಯಾನಿಲಯ ಅನುದಾನ ಆಯೋಗದ ಹೊಸ ಗಾಳದಿಂದ ಕೊನೆಗೂ ತಪ್ಪಿಸಿಕೊಂಡಿತಂತಲ್ಲ! ಎಲ್ಲ ಆ 'ಕುವೆಂಪು' ಮಾಡಿರುವ ಮಸಲತ್ತು! ಅಥವಾ ರಾಜೇಂದ್ರ ಚೆನ್ನಿಯವರೋ ?

ಇದಕ್ಕಾಗಿ ನೀವೇನೂ ಧೃತಿಗೆಡಬೇಕಾಗಿಲ್ಲ! ಬಹುಸಂಖ್ಯೆಯ ಜ್ಯೋತಿಷಿಗಳು, ಅವಿಚಾರಿಗಳು ನಿಮ್ಮ ಬೆಂಬಲಕ್ಕಿದ್ದಾರೆ. ಅಷ್ಟೇ ಏಕೆ ? ಗೊಂದಲಪುರದ ನಾವೆಲ್ಲ ನಿಮ್ಮ ಬೆಂಬಲಕ್ಕಿದ್ದೇವೆ. ನೀವು ಆಯ್ದುಕೊಂಡ ದಾರಿಯಲ್ಲೇ ಮುನ್ನಡೆಯಿರಿ.



ನಮ್ಮ ಬೆಂಬಲ ನಿಮಗೆಂದು ಸ್ಪಷ್ಟಪಡಿಸಿದನಂತರ ನಮ್ಮ ಒಂದೆರಡು ಸಲಹೆಗಳನ್ನು ನಿಮ್ಮೊಂದಿಗೆ ನಿವೇದಿಸಿಕೊಳ್ಳದಿದ್ದರೆ ಕರ್ತವ್ಯಲೋಪವಾಗುತ್ತದೆ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಜ್ಯೋತಿರ್ವಿಜ್ಞಾನವನ್ನು ಪಾಠ ಮಾಡುವ ವಿಚಾರ ಅಷ್ಟೇನೂ ಬುರ್ನಾಸಿನದಲ್ಲ! ನೇಪಾಳದ ಅರಮನೆ ಜೋತಿಷಿ ಯಾವುದಾದರೂ ನಮ್ಮ ವಿಶ್ವವಿದ್ಯಾಲಯದಲ್ಲಿ ಜ್ಯೋತಿರ್ವಿಜ್ಞಾನ ಕಲಿತಿದ್ದರೆ ಇಂಥ ಅನಾಹುತ ಆಗುತ್ತಿತ್ತೆ? ಅದರ ಜೊತೆಗೆ, ನಮ್ಮ ಕಡೆ ಪ್ರಚಲಿತವಿರುವ ಬಾನಾಮತಿ, ಜಲಶಿಲ್ಪಿ, ಹಲ್ಲಿಶಕುನ, ಕವಡೆಶಾಸ್ತ್ರ, ನಾಡಿಶಾಸ್ತ್ರಗಳಂಥ ವಿಷಯಗಳನ್ನು ನಮ್ಮೂರ ಶಾಲೆಗಳಿಂದಲೇ ಕಲಿಸಬಹುದಲ್ಲವೆ ? ಪ್ರಾಥಮಿಕ ಪಠ್ಯಗಳಲ್ಲಿ ಇವನ್ನು ಸರಳವಾಗಿ ಬೋಧಿಸಲು ಅನುಕೂಲವಾಗುವಂತೆ ಪಾಠಗಳನ್ನು ತಯಾರಿಸಬಲ್ಲ ಪರಿಣತರು ನಮ್ಮಲ್ಲಿದ್ದಾರೆ. ಇವನ್ನೆಲ್ಲ ಕ್ರಮವಾಗಿ ಕಲಿಯುವ ನಮ್ಮ ಮಕ್ಕಳು ಈ ಶತಮಾನದಲ್ಲಿ ಸತ್ಪ್ರಜೆಗಳಾಗಿ ಬದುಕುತ್ತಾರೆಂಬುದು ಈ ಬೀರಣ್ಣನ ದೃಢವಾದ ನಂಬಿಕೆ. ದಯವಿಟ್ಟು ಈ ವಿಷಯವನ್ನು ಕೂಡಲೇ ಪರಿಶೀಲನೆಗೆ ತೆಗೆದುಕೊಳ್ಳಬೇಕಾಗಿ ವಿನಂತಿ.




ಬಾನಾಮತಿಯನ್ನು ನೀವು ಮರೆತಿರಾದರೂ ಹೇಗೆ ? ವೇದ - ಉಪನಿಷತ್ತುಗಳಲ್ಲೇ ಇದರ ಉಲ್ಲೇಖ ಇದೆಯೆಂದು ನಮ್ಮ ಈರಾಂಜಣೆ ಮೊನ್ನೆ ಹೇಳಿದ್ದನ್ನು ಕೇಳಿದ್ದೇನೆ. ಆತ ಪಂಡಿತರಂತೆ ಗತ್ತು ತೋರಿಸುತ್ತಾನೆ ಕೆಲವು ಸಲ, ನಂಬದಿರುವಂತಿಲ್ಲ !

ನನಗೆ ತಿಳಿದಂತೆ ಬಾನಾಮತಿಯನ್ನು ಮಕ್ಕಳಿಗೆ ಕಲಿಸಬೇಕಾದ್ದು ಅತ್ಯವಶ್ಯಕ. ಆದರೆ ನಮ್ಮ ದೇಶದ ಪ್ರಜೆಗಳ ಮೇಲೆ ಈ ವಿದ್ಯೆಯನ್ನು ಖಂಡಿತ ಪ್ರಯೋಗಿಸಬಾರದು ಎಂಬ ಕಾನೂನು ಮಾಡಬೇಕಾದ್ದೂ ಅತ್ಯಗತ್ಯ.

ಇನ್ನು ಈ ಬಾನಾಮತಿಯ ಪವರ್ ಏನು ಎಂಬ ಬಗ್ಗೆ ಒಂದೆರಡು ಉದಾಹರಣೆ ಕೊಡಬಹುದು. ಕಾರ್ಗಿಲ್‌ನಂಥ ದುರ್ಗಮ ಪ್ರದೇಶದಲ್ಲಿ ನಮ್ಮ ಸೈನಿಕರು ಹಗಲು ರಾತ್ರಿ ನಿದ್ದೆಗೆಟ್ಟು ಗಡಿ ರಕ್ಷಣೆ ಮಾಡುತ್ತಿದ್ದಾರೆ. ನಮ್ಮ ಸೈನಿಕರು ಮತ್ತು ಜಾರ್ಜ್ ಫರ್ನಾಂಡಿಸ್ ತೂಕಡಿಸುವ ಸಮಯ ನೋಡಿ ಶತ್ರು ಸೈನಿಕರು ಅಥವಾ ಉಗ್ರವಾದಿಗಳು ಗಡಿ ದಾಟಿ ಆಕ್ರಮಣ ನಡೆಸಲು ಹೊಂಚು ಹಾಕುತ್ತಿರುತ್ತಾರೆ. ಇಂಥ ಸಮಯದಲ್ಲಿ ನಮ್ಮ ಬಾನಾಮತಿ ಉಪಯೋಗಕ್ಕೆ ಬರುತ್ತದೆ. ನಮ್ಮ ಸೈನಿಕರಿಗೆಲ್ಲ ಪ್ರಾಥಮಿಕ ಶಾಲೆಯಿಂದಲೇ ಬಾನಾಮತಿ ಪಾಠ ಆಗಿರುತ್ತದೆಯಷ್ಟೆ! ಇವರು ತಮ್ಮ ಡೇರೆಗಳಲ್ಲೇ ಬೆಚ್ಚಗೆ ಕುಳಿತು ಬಾನಾಮತಿ ಪ್ರಯೋಗಿಸಿದರಾಯಿತು. ಶತ್ರು ಸೈನಿಕರ ಡೇರೆಗಳಲ್ಲಿ ಬೆಂಕಿ ಕಾಣಿಸಿಕೊಳ್ಳುತ್ತದೆ. ಒಂದು ಕಡೆ ಬೆಂಕಿ ಆರಿಸಲು ಪ್ರಯತ್ನಿಸುವಾಗ, ಮತ್ತೊಂದು ಕಡೆ ಉರಿ ಕಾಣಿಸಿಕೊಳ್ಳುತ್ತದೆ ! ಹಗಲು-ರಾತ್ರಿ ಇದರ ಪುನರಾವರ್ತನೆಯಾಗುತ್ತದೆ. ಶತ್ರು ಸೈನಿಕರು ಈ ಸೈತಾನ ಬೆಂಕಿ ಆರಿಸುವ ಪ್ರಯತ್ನದಲ್ಲಿ ತಮ್ಮ ಶ್ರಮ ವ್ಯಯಮಾಡುತ್ತಾರೆ. ಮಿಂಚಿನ ವೇಗದಲ್ಲಿ ಗಡಿ ದಾಟಿ ದಾಳಿ ಮಾಡಲು ಅವಕಾಶವೇ ಸಿಗುವುದಿಲ್ಲ !

ಆದರೆ ಇಲ್ಲೂ ಒಂದು ಎಚ್ಚರಿಕೆ ವಹಿಸಬೇಕಾದ ಅಗತ್ಯವಿದೆ. ಬಾನಾಮತಿ ವಿದ್ಯೆಯನ್ನು ಶತ್ರುಗಳೊಂದಿಗೆ ಹಂಚಿಕೊಳ್ಳತಕ್ಕದ್ದಲ್ಲ ! ವರ್ಷಾನುವರ್ಷ ಶತ್ರು ಸೈನಿಕರನ್ನು ತಮ್ಮ ಶಿಬಿರದಿಂದ ಹೊರಗೆ ತಲೆಹಾಕದಂತೆ ಮಾಡುವ ನಮ್ಮ ಮುಂಚೂಣಿ ಸೈನಿಕರ ತಂಡವನ್ನು 'ಬಾನಾಮತಿ ಬ್ರಿಗೇಡ್' ಎಂದು ಕರೆಯಬಹುದು.

ನಮ್ಮ ವಿಶೇಷ ಕಾರ್ಯಪಡೆ (ಎಸ್. ಟಿ. ಎಫ್.) ಕಾಡುಗಳ್ಳ ವೀರಪ್ಪನ್‌ನ್ನು ಹಿಡಿಯಲು ಇಷ್ಟು ಪರದಾಡಬೇಕಾಗುವುದಿಲ್ಲ! ನಾನು ಮೊದಲೇ ಹೇಳಿದಂತೆ ನಮ್ಮ ಬುದ್ಧಿಜೀವಿಗಳು ಏನಾದರೂ ಕೂಗಾಡಲಿ, ನಿಮ್ಮ ಕೆಲಸ ಮುಂದುವರಿಸಿ.

*ಎಂದು ನಿಮ್ಮ ಬೀರಣ್ಣ*

* * *

ಪ್ರಿಯ ಯಜಮಾನಪ್ಪನವರಿಗೆ ನಮಸ್ಕಾರ.

ನಮ್ಮ ಗೊಂದಲಪುರದ ಇಡೀ ಪ್ರಜೆಗಳ ಸಹಿಯಿರುವ ಪತ್ರವನ್ನು ಭಾರತದ ಮಾನವ ಸಂಪನ್ಮೂಲ ಮಂತ್ರಿಗಳಿಗೆ ತಲುಪಿಸಲು ಸಹಾಯ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಒಂದೆರಡು ದಿನಗಳಿಂದ ಮೋಡ ಮುಚ್ಚಿಕೊಂಡಿದೆ. ಮಳೆ ಬರುವ ಸಾಧ್ಯತೆ ಇದೆಯೆಂದು ನಮ್ಮ ಹವಾಮಾನ ತಜ್ಞ ಮ್ಯಾಂತಪ್ಪ ಹೇಳಿದ್ದಾನೆ.

*ಎಂದು ನಿಮ್ಮ ವಿಶ್ವಾಸಿ*
*ಬೀರಣ್ಣ ಗೊಂದಲಪುರ*

# ವೈಶಿಷ್ಟ್ಯಪೂರ್ಣ ಚಂದ್ರೋದಯ

**ತೆ**ಳ್ಳನೆಯ ಮೋಡವಿದ್ದರೂ ಕೆಲವು ಖಗೋಳೀಯ ಘಟನೆಗಳನ್ನು ನೋಡುವುದು ಸಾಧ್ಯವಿದೆ. [illegible] ತಿಂಗಳ ಹುಣ್ಣಿಮೆಯಂದು ಘಟಿಸುವ ಚಂದ್ರಗ್ರಹಣವೂ ಇಂತಹುದೇ. ಈ ನೆರಳಿನಾಟದಲ್ಲಿ ಈ ಬಾರಿ ಚಂದ್ರ ನೆರಳಿನ ಮಧ್ಯಭಾಗವನ್ನು ಪ್ರವೇಶಿಸುವುದೇ ಇಲ್ಲ. ಆದ್ದರಿಂದ ಇದು ಪಾರ್ಶ್ವಗ್ರಹಣ. ಚಂದ್ರನ ಒಂದಂಶ ಕಾಣುತ್ತಲೇ ಇರುತ್ತದೆ. ಭಾರತದ ಯಾವುದೇ ಭಾಗದಿಂದ ಉದಯಿಸುವ ಚಂದ್ರನನ್ನು ಗಮನಿಸಿದರೆ ಸಾಕು. ಅರ್ಧ ಚಂದ್ರನನ್ನು ಹೋಲುವ, ಆದರೆ ಸ್ವಲ್ಪ ಭಿನ್ನವಾಗಿದೆ ಎಂದೆನಿಸುವಂತಹ ಚಂದ್ರ ಉದಯಿಸುತ್ತದೆ. ಈ ವೈಶಿಷ್ಟ್ಯಪೂರ್ಣ ಚಂದ್ರೋದಯವನ್ನು ನೋಡಲು ಎರಡು ಕಣ್ಣುಗಳು ಸಾಕು; ದೂರದರ್ಶಕ ಬೇಕಿಲ್ಲ.

ರಾತ್ರಿ ೯.೪೫ರ ಹೊತ್ತಿಗೆ ನೆರಳಿನಿಂದ ಹೊರಬರುವ ಚಂದ್ರ ತನ್ನ ಪೂರ್ಣ ಪ್ರಕಾಶದಿಂದ ಪ್ರಜ್ವಲಿಸುತ್ತದೆ. ಇದಕ್ಕೆ ಮೊದಲು ಚಂದ್ರನ ಸ್ಥಾನವನ್ನು ವಿಶೇಷವಾಗಿ ಗಮನಿಸಿ. ಅದರ ಸಮೀಪ ಇರುವ ಕ್ಷೀಣ ನಕ್ಷತ್ರ ಉತ್ತರಾಷಾಢ. ಪಾಶ್ಚಾತ್ಯರು ಇದನ್ನು Nunki ಎನ್ನುತ್ತಾರೆ. ಅದೇ ದಿಕ್ಕಿನಲ್ಲಿ ಸ್ವಲ್ಪ ಆಚೀಚೆ ಕಣ್ಣು ಹೊರಳಿಸಿದರೆ ಪ್ರಕಾಶಮಾನವಾಗಿ ಹೊಳೆಯುವ ಮಂಗಳ ಗ್ರಹವನ್ನು ಕಾಣಬಹುದು. ಮಂಗಳಗ್ರಹಕ್ಕೂ ಚಂದ್ರನಿಗೂ ನಡುವೆ ಇರುವ ಧನುರಾಶಿಯನ್ನು ಗುರುತಿಸಲು ಇದು ಒಳ್ಳೆಯ ಅವಕಾಶ.

ಉತ್ತರ
ಸಪ್ತರ್ಷಿ ಮಂಡಲ
ಬೂಟಿಸ್
ಸಿಂಹ
ಹರ್ಕ್ಯುಲಸ್
ಪೂರ್ವ
ಪಶ್ಚಿಮ
ಕನ್ಯಾ
ಒಫಿಯೂಕಸ್
ತುಲಾ
ವೃಶ್ಚಿಕ
ದಕ್ಷಿಣ

ಕಳೆದ ತಿಂಗಳು (ಜೂನ್) ನಭಾವ ಲೋಕನದಲ್ಲಿ ಮಂಗಳದ ಹಿನ್ನಡೆ ಮುಗಿದಿದೆ ಎಂದು ಬರೆದಿದ್ದೆ. ಅದು ತಪ್ಪು. ಓದುಗರು ಈ ತಪ್ಪನ್ನು ಕ್ಷಮಿಸಬೇಕು. ಕಳೆದ ತಿಂಗಳು ಮಂಗಳನ ಸ್ಥಾನವನ್ನು ಸೂಚಿಸಿದ್ದ ನಕ್ಷೆಯನ್ನು ಈ ತಿಂಗಳೂ ಬಳಸಿ, ಅದರ ಸ್ಥಾನವನ್ನು ಗುರುತಿಸಿದಾಗ ಈ ತಪ್ಪಿನ ಮಹತ್ವ ತಿಳಿಯುತ್ತದೆ. ಸಾಮಾನ್ಯವಾಗಿ ವೃಶ್ಚಿಕದಿಂದ ಧನುವಿನತ್ತ ಚಲಿಸಬೇಕಾಗಿದ್ದ ಮಂಗಳ ಈ ತಿಂಗಳು ಸಹ ಧನುವಿನಿಂದ ವೃಶ್ಚಿಕದತ್ತವೇ ಸಾಗುತ್ತದೆ. ಇದೇ ಹಿಮ್ಮುಖ ಚಲನೆ. ದಿನದಿಂದ ದಿನಕ್ಕೆ ಕೆಂಪು ಬಣ್ಣದ ಅಂಟಾರೆಸ್ ಅಥವಾ ಜ್ಯೇಷ್ಠಾ ನಕ್ಷತ್ರದ ಕಡೆಗೆ ಸಾಗುವ ಇದು ಜುಲೈ ೧೯ರಂದು ಜ್ಯೇಷ್ಠಾಕ್ಕೆ ಸುಮಾರು [illegible] ಡಿಗ್ರಿ ದೂರದಲ್ಲಿ ತಟಸ್ಥವಾಗುತ್ತದೆ. ಈ ಅವಧಿಯಲ್ಲಿ ಈ ಎರಡೂ ಕೆಂಪುಕಾಯಗಳ ಸಾಮ್ಯ ಮತ್ತು ವ್ಯತ್ಯಾಸಗಳನ್ನು ಪರಿಶೀಲಿಸಬಹುದು. ಅಂದಿನಿಂದ ಮುಂದಕ್ಕೆ ಅದು ನೇರ ಚಲನೆ ಆರಂಭಿಸುತ್ತದೆ. ಅಂದರೆ ಪುನಃ ಪೂರ್ವಕ್ಕೆ ಧನುರಾಶಿಯತ್ತ ಚಲಿಸತೊಡಗುತ್ತದೆ. ಕಳೆದ ತಿಂಗಳು ಪ್ರಕಾಶದ ಗರಿಷ್ಠವನ್ನು ಮುಟ್ಟಿದ್ದ ಇದು ಕ್ರಮೇಣ ಕುಂದುವುದನ್ನೂ ಗಮನಿಸಬಹುದು.

ಮೋಡಗಳಿಂದ ಆವೃತವಾದ ಆಕಾಶ ಅಪರೂಪಕ್ಕೊಂದು ಬಿಡುವು ಮಾಡಿಕೊಟ್ಟಾಗ ಕಾಣುವ ದೃಶ್ಯ ಸುಂದರವಾದುದು. ಧನು, ವೃಶ್ಚಿಕ, ದಕ್ಷಿಣ ಶಿಲುಬೆ(southern cross)ಇವುಗಳ ಮೂಲಕ ಹಾದುಹೋಗುವ ಆಕಾಶಗಂಗೆ. ಉತ್ತರ ಶಿಲುಬೆಯೂ ಇದೆ. ವಾಯವ್ಯ ದಿಕ್ಕಿನಲ್ಲಿ ಸಪ್ತರ್ಷಿಮಂಡಲವನ್ನು ಗುರುತಿಸಬಹುದು. ಈಶಾನ್ಯದಲ್ಲಿ ಕಾಣುವುದು ಉತ್ತರ ಶಿಲುಬೆ. ರಾಜಹಂಸ ಅಥವಾ ಸಿಗ್ನಸ್ ಎಂಬ ಹೆಸರೂ ಇದಕ್ಕಿದೆ.



ನೆತ್ತಿಯ ಮೇಲೆ ಕಾಣುವ ನೀಲಿ ನಕ್ಷತ್ರ ಚಿತ್ರಾ. ಇದು ಕನ್ಯಾರಾಶಿಗೆ ಸೇರಿದೆ. ಇದರಿಂದ ಸ್ವಲ್ಪ ಉತ್ತರಕ್ಕೆ ಕಾಣುವ ಕೆಂಪು ನಕ್ಷತ್ರ ಸ್ವಾತಿ. ಇದು ಬೂಟಿಸ್ (ಸಹದೇವ) ಎಂಬ ನಕ್ಷತ್ರಪುಂಜಕ್ಕೆ ಸೇರಿದೆ. ಇದರ ಪಕ್ಕದಲ್ಲೇ ಕ್ಯಾನಿಸ್ ವೆನಾಸಿಚಿಸಿ ಎಂಬ ಎರಡು ನಾಯಿಗಳ ಕಾಲ್ಪನಿಕ ಚಿತ್ರದ ನಕ್ಷತ್ರ ಪುಂಜವೂ ಇದೆ. ಆಫ್ರಿಕಾದ ಕಥೆಯೊಂದರಲ್ಲಿ ಬೂಟಿಸ್ ಎಂಬುದು ದ್ರಾಕ್ಷಿ ಬೆಳೆಗಾರನ ಹೆಸರು. ಎರಿಗೊನೆ ಇವನ ಮಗಳು. ಚಾರಾ ಮತ್ತು ಆಸ್ಟಿರಿಯಾನ್ ಎಂಬ ಎರಡು ನಾಯಿಗಳು ಇವನಿಗೆ ನಿಷ್ಠವಾಗಿದ್ದುವು. ಸಮೃದ್ಧಿಯಾಗಿ ಬೆಳೆಸಿದ್ದ ದ್ರಾಕ್ಷಿಯನ್ನು ಕಂಡ ಬಾಕುಸ್ ಎಂಬ ದೇವದೂತ ಧರೆಗಿಳಿದು ಬೂಟಿಸ್‌ಗೆ ದ್ರಾಕ್ಷಾರಸವನ್ನು ಮಾಡುವ ವಿಧಾನವನ್ನು ಕಲಿಸಿಕೊಟ್ಟ. ಅದರ ಹೊಸರುಚಿಗೆ ಮಾರುಹೋದ ಬೂಟಿಸ್, ಇನ್ನಷ್ಟು ತಯಾರಿಸಿ ತನ್ನ ಸ್ನೇಹಿತರನ್ನು ಆಸ್ವಾದಿಸಲು ಆಹ್ವಾನಿಸಿದ. ಚೆನ್ನಾಗಿ ಕುಡಿದ ಅವರು ಮತ್ತೇರಿ ಬಿದ್ದರು. ಎಚ್ಚರವಾದಾಗ ಅವರಿಗೆ ಒಂದು ದುಃಸ್ವಪ್ನದಂತೆ ಅನಿಸಿರಬೇಕು. ಬೂಟಿಸ್ ತಮ್ಮೆಲ್ಲರನ್ನೂ ಕೊಲ್ಲಲು ಮಾಡಿದ ಸಂಚು ಎಂದುಕೊಂಡು, ಮಲಗಿದ್ದ ಬೂಟಿಸ್‌ನನ್ನೇ ಕೊಂದು ಹೆಣವನ್ನು ಕೊಚ್ಚೆಯಲ್ಲಿ ಎಸೆದರು. ತಂದೆಯನ್ನು ಕಾಣದೆ ಎರಿಗೊನೆ ಚಿಂತಾಕ್ರಾಂತಳಾದಳು. ನಿಷ್ಠಾವಂತ ನಾಯಿಗಳು ಅವನ ಹೆಣವನ್ನು ಹುಡುಕಿದವು. ದುಃಖಿತಪ್ಪಳಾದ ಎರಿಗೊನೆ ಆತ್ಮಹತ್ಯೆ ಮಾಡಿಕೊಂಡಳು. ಈ ದುರಂತದಿಂದ ಮನನೊಂದ ದೇವತೆಗಳು ಆಕಾಶದಲ್ಲಿ ಸ್ಥಾನ ಕಲ್ಪಿಸಿಕೊಟ್ಟರು. ಬೂಟಿಸ್‌ನ ಪಕ್ಕದಲ್ಲೇ ಎರಡು ನಾಯಿಗಳಿವೆ. ಮಗಳು ಎರಿಗೊನೆಯೂ (ಕನ್ಯಾ) ವಿರ್ಗೋ ಎಂಬ ಹೆಸರಿನಲ್ಲಿ ಸಮೀಪವೇ ಇದ್ದಾಳೆ – ಇದು ಕಥೆ. ಬೂಟಿಸ್ ಅಕ್ಕ ಪಕ್ಕದ ಪುಂಜಗಳನ್ನು ನೆನಪಿಟ್ಟುಕೊಳ್ಳಲು ಸುಲಭ ಉಪಾಯ ಈ ಕಥೆ.

ಚಂದ್ರನ ಚಲನೆ ಸಾಗಿದಂತೆ ಇತರ ಗ್ರಹಗಳನ್ನು ಕಾಣುವ ಪ್ರಯತ್ನ ನಡೆಸಬಹುದು. ಉಳಿದ ನಾಲ್ಕೂ ಗ್ರಹಗಳು ಬೆಳಗಿನ ಝಾವ ಕಾಣುತ್ತವೆ. ಪೂರ್ವ ದಿಕ್ಕಿನಲ್ಲಿ ಸೂರ್ಯೋದಯಕ್ಕೆ ಮುನ್ನ ಶುಕ್ರ, ಶನಿ ಮತ್ತು ರೋಹಿಣಿ ನಕ್ಷತ್ರ ಇವು ರಚಿಸುವ ಪುಟ್ಟ ತ್ರಿಕೋಣವನ್ನು ಕಾಣಬಹುದು. ಈ ತ್ರಿಕೋಣದ ವಿನ್ಯಾಸ ದಿನದಿನಕ್ಕೆ ಬದಲಾಗುವುದನ್ನು ಗಮನಿಸಬಹುದು. ಶನಿಗಿಂತ ಶುಕ್ರದ ಚಲನೆ ವೇಗವಾಗಿರುವುದೇ ಇದಕ್ಕೆ ಕಾರಣ. ಬುಧ ಮತ್ತು ಗುರು ದಿಗಂತದ ಅಂಚಿನಲ್ಲಿ ಕಾಣುತ್ತವೆಯಾದರೂ ಸಂಧ್ಯಾ ಪ್ರಕಾಶದಲ್ಲಿ ಗುರುತಿಸುವುದು ಕಷ್ಟವಾದೀತು.

ಚಂದ್ರ ಈ ನಾಲ್ಕೂ ಗ್ರಹಗಳನ್ನು ಮರೆಮಾಡುವ ''ಗ್ರಹಣ''ದಂತಹ ಘಟನೆಗಳು ಈ ತಿಂಗಳು ನಡೆಯಲಿವೆ. ಆದರೆ ಭಾರತದಿಂದ ಅವು ಚಂದ್ರನ ಪಕ್ಕದಲ್ಲೇ ಇರುವಂತೆ ಮಾತ್ರ ಕಾಣುತ್ತವೆ. ಜುಲೈ ೧೭ರಂದು ಶುಕ್ರ, ಶನಿಗಳ ಸಮೀಪ ಕಾಣುವುದು. ಜುಲೈ ೨೦ರ ಬೆಳಗಿನ ಝಾವ, ಅಂದರೆ ಅಮಾವಾಸ್ಯೆಯ ಹಿಂದಿನ ದಿನ ಚಂದ್ರನನ್ನು ಕಾಣುವುದು ಸಾಧ್ಯವಾದರೆ, ಪಕ್ಕದಲ್ಲೇ ಗುರು ಮತ್ತು ಬುಧಗಳನ್ನೂ ಕಾಣಬಹುದು. ಜುಲೈ ೧೯ರಂದೇ ಪ್ರಯತ್ನ ನಡೆಸಬಹುದು.

ಜುಲೈ ತಿಂಗಳ ಕೊನೆಯ ವಾರದಲ್ಲಿ ಈಟಾಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿಯ ಕಾರಣ ಗಂಟೆಗೆ ೪೦-೫೦ ಉಲ್ಕೆಗಳು ಬೀಳುವ ಸಾಧ್ಯತೆ ಇದೆ. ಅಕ್ವೇರಿಯಸ್ (ಕುಂಭ)ದಿಂದ ಹೊರಟಂತೆ ಕಾಣುವುದರಿಂದ ಈ ಹೆಸರು ಬಂದಿದೆ.

ಎರಡು ಹೋಳಾಗಿ ಹೋದ ಲೀನಿಯರ್ ಧೂಮಕೇತು ಇದ್ದಕ್ಕಿದ್ದಂತೆ ಹೆಚ್ಚಿನ ಪ್ರಕಾಶ ಪಡೆದು ಮೀನರಾಶಿಯಲ್ಲಿ ಕಾಣುತ್ತಿದೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು-೫೬೦ ೦೦೧

# ಸಾಹಿತ್ಯ ಮತ್ತು ಚರಿತ್ರೆ
(ಲೇಖನಗಳು)

ಡಾ|| ಎಸ್. ಚಂದ್ರಶೇಖರ್

ನಮ್ಮ ಪ್ರಕಾಶನ
೫೧೫, ಶಾರದಾ ನಗರ, ತಿಪಟೂರು - ೫೭೨ ೨೦೨

ಪುಟ : ೧೬೦ ಬೆಲೆ : ರೂ. ೭೦

**ಡಾ||** ಎಸ್. ಚಂದ್ರಶೇಖರ್ ತಮ್ಮ ಕೃತಿಯಲ್ಲಿ ಹೇಳಿಕೊಂಡಿರುವಂತೆ ಕಳೆದ ಎರಡು ದಶಕಗಳಲ್ಲಿ ಬರೆದ ಕೆಲವು ಲೇಖನಗಳನ್ನು ಈ ಕೃತಿಯಲ್ಲಿ ಸೇರಿಸಿದ್ದಾರೆ. ಇಲ್ಲಿನ ಲೇಖನಗಳನ್ನು ಮುಖ್ಯವಾಗಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಮೊದಲನೆ ಭಾಗದಲ್ಲಿ ನವೋದಯ ಸಾಹಿತ್ಯದ ಹಿನ್ನೆಲೆಯಲ್ಲಿ ಸಾಮಾಜಿಕ ಗತಿಶೀಲತೆ, ರಾಷ್ಟ್ರೀಯ ಚಳವಳಿ, ಕನ್ನಡ ಸಾಹಿತ್ಯ ಮತ್ತು ಕೋಮು ಸಮಸ್ಯೆ, ಸಾಹಿತ್ಯ ಉಪರಾಷ್ಟ್ರೀಯತೆಗೆ ತೋರಿದ ಪ್ರತಿಕ್ರಿಯೆ, ಬಿ. ಎಂ. ಶ್ರೀ ಮಾಸ್ತಿ, ಕುವೆಂಪು, ಗೊರೂರರ ಕೃತಿಗಳ ವಿಶ್ಲೇಷಣೆ, ಆಧುನಿಕ ಭಾರತದಲ್ಲಿ ಧರ್ಮ ಮತ್ತು ರಾಜಕಾರಣದ ಬಗ್ಗೆ ಲೇಖನಗಳಿವೆ.

ಎರಡನೇ ಭಾಗದಲ್ಲಿ ರಾಬರ್ಟ್ ಸೆವೆಲ್‌ರ ಮರೆತು ಹೋಗಿರುವ ಸಾಮ್ರಾಜ್ಯ, ವಿಜಯನಗರ, ಒಡೆಯರ ಚರಿತ್ರೆ, ಟಿಪ್ಪುಸುಲ್ತಾನ್ ಬಗ್ಗೆ ಇತಿಹಾಸಕಾರರ ಧೋರಣೆಗಳು, ಸಮಾಜವಾದಿ ಚಳುವಳಿಗಳು ಮತ್ತು ಸ್ವಾತಂತ್ರ್ಯ ಹೋರಾಟ, ಅರಸು ಆಡಳಿತ, ಕನ್ನಡ ಕಿರುಪತ್ರಿಕೆಗಳು, ಜಾತಿ ಪದ್ಧತಿ ಮತ್ತು ದಂಡಯಾತ್ರೆಯಂತಹ ಲೇಖನಗಳು ಸೇರಿವೆ.

ಆರ್ಯರು ಭಾರತಕ್ಕೆ ಬಂದ ಮೇಲೆ ಈ ನೆಲದ ಮೂಲ ಜನರ ಮೇಲೆ ಹಿಡಿತವನ್ನು ಸಾಧಿಸಲು ನೂರಾರು ವರ್ಷಗಳು ಅನೇಕ ರೀತಿಯ ದಬ್ಬಾಳಿಕೆಗಳನ್ನು ನಡೆಸಿ ವರ್ಣಾಶ್ರಮ, ಜಾತಿ ಪದ್ಧತಿಗಳನ್ನು ಸಮಾಜದ ಮೇಲೆ ಹೇರಿ ತಾವು ಉನ್ನತ ಸ್ಥಾನವನ್ನು ಪಡೆದುಕೊಂಡರು. ವೇದ, ಉಪನಿಷತ್ತುಗಳು, ಬ್ರಾಹ್ಮಣ ಗ್ರಂಥಗಳು, ಮನುಸ್ಮೃತಿ, ರಾಮಾಯಣ, ಮಹಾಭಾರತದಂತಹ ಕೃತಿಗಳನ್ನು ಸೃಷ್ಟಿಸಿ ಸ್ಥಳೀಯರ ಮೇಲೆ ಕೀಳುಮಟ್ಟದ ಕಪೋಲಕಲ್ಪಿತ ಕಥೆಗಳನ್ನು ಹೇರಲಾಯಿತು. ಸ್ಥಳೀಯ ರಾಜ ಮಹಾರಾಜರು ದೆವ್ವ ಭೂತಗಳಾದರೆ, ಅವರ ಸ್ತ್ರೀಯರು ಆರ್ಯರ ತೊತ್ತುಗಳು, ದೇವದಾಸಿಯರಾದರು. ಶಿವ ರುದ್ರನಾದರೆ, ರಾವಣ ಖಳನಾಯಕನಾದ. ಬುದ್ಧನ ಅನುಯಾಯಿಗಳನ್ನು, ಅವನ ಚರಿತ್ರೆಯನ್ನು, ಧ್ವಂಸ ಮಾಡಲಾಯಿತು. ದ್ರಾವಿಡರನ್ನು ಶೂದ್ರರನ್ನಾಗಿಸಿ, ಅಸ್ಪೃಶ್ಯರನ್ನಾಗಿಸಿ, ಅಂತಿಮವಾಗಿ ಅವರನ್ನು ಎಲ್ಲಾ ವಿಧದಲ್ಲೂ ನೆಲಮಟ್ಟಕ್ಕೆ ಮಲಗಿಸಲಾಯಿತು.

ಇದೇ ನೆಲದಲ್ಲಿ ಹಿಂದೂ ಧರ್ಮಕ್ಕೆ ವಿರುದ್ಧವಾಗಿ ಸಿಡಿದುನಿಂತ ಹಲವು ಮಾನವೀಯ ಧರ್ಮಗಳನ್ನು ಮತ್ತು ಮಹಾಪುರುಷರನ್ನು ಹಿಂದೂ ಧರ್ಮ ಕಾಲಕಾಲಕ್ಕೆ ತನ್ನ ವಿಷವರ್ತುಲಕ್ಕೆ ಸೆಳೆದುಕೊಂಡು ತನ್ನ ಒಡಲಲ್ಲಿ ಜೀರ್ಣಿಸಿಕೊಂಡಿತು. ಹಿಂದೂ ಧರ್ಮ ತನ್ನ ಅನೇಕ ಬರ್ಬರ ಕೃತ್ಯಗಳಿಂದ ಸಮಾಜದಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡಾಗೆಲ್ಲ ಯಾರೋ ಒಬ್ಬರು ಅದನ್ನ ಮರುಸ್ಥಾಪನೆ ಮಾಡಿರುವ ಯುಕ್ತಿ, ಕುಯುಕ್ತಿಗಳನ್ನು ನಾವು ಚರಿತ್ರೆಯ ಉದ್ದಕ್ಕೂ ನೋಡಬಹುದಾಗಿದೆ.




ಚಂದ್ರಶೇಖರ್ ಅವರ 'ಸಾಹಿತ್ಯ ಮತ್ತು ಚರಿತ್ರೆ' ಕೃತಿಯಲ್ಲಿರುವ ಲೇಖನಗಳನ್ನು ಆಳವಾಗಿ ಅವಲೋಕಿಸಿದಾಗ ಸನಾತನ ಹಿಂದೂ ಮೂಲಭೂತವಾದಿ ವಿಕೃತ ಮನಸ್ಸುಗಳು ಚರಿತ್ರೆಯ ಉದ್ದಕ್ಕೂ ವ್ಯವಸ್ಥಿತವಾಗಿ ಹೇಗೆ ಪಿತೂರಿ ನಡೆಸಿವೆ ಎನ್ನುವುದು ಕಂಡುಬರುತ್ತದೆ. ಭಾರತದ ಮಧ್ಯಕಾಲೀನ ಚರಿತ್ರೆಯನ್ನು ಬರೆದ ಬ್ರಿಟಿಷರು ಮತ್ತು ಯುರೋಪಿಯನ್ನರು ಪಟ್ಟಭದ್ರ ಹಿತಾಸಕ್ತಿಗೆ ಅನುಗುಣವಾಗಿ ಹಿಂದೂ-ಮುಸ್ಲಿಮರ ನಡುವೆ ಕಲಹವನ್ನು ಸೃಷ್ಟಿಸಿ ಮತೀಯ ಸಂಘರ್ಷ ಉಂಟು ಮಾಡಿದ್ದನ್ನು ಬಿಟ್ಟರೆ ಮಿಕ್ಕಿದ್ದೆಲ್ಲ ಹಿಂದೂಮಯವೆ.

ಬಹುತೇಕ ಭಾರತೀಯ ಚರಿತ್ರಕಾರರು, ಅದರಲ್ಲೂ ಮುಖ್ಯವಾಗಿ ರಾವ್‌ದ್ವಯರು, ಒಡೆಯರ ಚರಿತ್ರೆಯನ್ನು ಬರೆಯುವಾಗ ತೋರಿಸುವ ಚಾಣಾಕ್ಷತೆಯನ್ನು ಪ್ರಸ್ತುತ ಕೃತಿಯಲ್ಲಿ ವಿವರಿಸಲಾಗಿದೆ. ಒಡೆಯರನ್ನೂ ಸೇರಿ ಹಲವು ಹಿಂದೂರಾಜರನ್ನು ಮಹಾ ಧರ್ಮಾತ್ಮರು, ಹಿಂದೂಗಳ ಮತ್ತು ಬ್ರಾಹ್ಮಣರ ಪೋಷಕರೆಂದು ಹಾಡಿ ಹೊಗಳಿರುವ ರಾವ್‌ದ್ವಯರು ಟಿಪ್ಪುಸುಲ್ತಾನ್ ಬಗ್ಗೆ ಬರೆಯುವಾಗ ಕ್ರೂರರಾಗುತ್ತಾರೆ. ಇವರ ಚರಿತ್ರೆಯ ವಿಶ್ಲೇಷಣೆ ಹೇಗಿದೆ ಎಂದರೆ ನಿಮ್ಮ ಮುಖ ತೋರಿಸಿ, ನಾವು ಕಾನೂನು ಹೇಳುತ್ತೇವೆ, ಎನ್ನುವಂತಿದೆ. ಹಿಂದೂಗಳ ಧರ್ಮೋದ್ಧಾರಕರೆಂದು ಕರೆಸಿಕೊಳ್ಳುವ ಮರಾಠದ ಪೇಶ್ವೆಗಳ ಸೈನ್ಯ ಶೃಂಗೇರಿ ಮಠವನ್ನು ಲೂಟಿಮಾಡಿದಾಗ ಟಿಪ್ಪುಸುಲ್ತಾನ್ ಅದೇ ಮಠಕ್ಕೆ ಆ ನಷ್ಟವನ್ನು ತುಂಬಿಕೊಡುತ್ತಾನೆ. ಇದು ರಾವ್‌ದ್ವಯರ ಚರಿತ್ರೆಯಲ್ಲಿ ಎಲ್ಲಿಯೂ ಪ್ರಸ್ತಾಪವಾಗದೆ ಹೋಗಿರುವುದನ್ನು ಚಂದ್ರಶೇಖರ್ ಗುರುತಿಸುತ್ತಾರೆ. ಇದೇ ರೀತಿ ಹಿಂದೂ ಮತೀಯ ಮನಸ್ಸುಗಳು ಚರಿತ್ರೆಗೆ ಬಗೆದಿರುವ ಅನ್ಯಾಯವನ್ನು ಈ ಕೃತಿಯಲ್ಲಿ ಹಲವು ಕಡೆ ಪ್ರಸ್ತಾಪಿಸಲಾಗಿದೆ.

ಆಧುನಿಕ ಭಾರತದಲ್ಲಿ ಹಲವು ಕಾರಣಗಳಿಂದ ಕೋಮುವಾದ ಹುಟ್ಟಿ ಗಟ್ಟಿಯಾಗಿ ಬೆಳೆದು ದೇಶದ ಸಮಗ್ರತೆ ಮತ್ತು ಏಕತೆಗೆ ಕಂಟಕಪ್ರಾಯವಾಗಿದೆ ಎನ್ನುವುದನ್ನು ಕೃತಿಯಲ್ಲಿ ನೋಡಬಹುದಾಗಿದೆ. ಜಗತ್ತಿನಲ್ಲಿಯೆ ವಿಚಿತ್ರವೆನ್ನುವಂತೆ ಜಾತಿಪದ್ಧತಿ ಭಾರತಕ್ಕೆ ಅಂಟಿಕೊಂಡಿದೆ. ಇದನ್ನು ಭಾರತೀಯ ವೈಶಿಷ್ಟ್ಯ, ಸಮಾಜ ಮತ್ತು ಧರ್ಮವನ್ನು ಉಳಿಸಿಕೊಂಡು ಬರಲು ಆಧಾರಸ್ತಂಭ ಎಂದು ನಂಬುವವರು ಇದ್ದಾರೆ. ಜಾತಿಪದ್ಧತಿ ಪ್ರಗತಿಯ ಶತ್ರುವಾಗಿದ್ದು ಆಧುನಿಕ ಕಾಲದಲ್ಲಿ ಜಾತಿ ಒಂದು ವ್ಯವಸ್ಥಿತ ಸಂಸ್ಥೆಯಾಗಿ ಎಲ್ಲ ಜನತಾಂತ್ರಿಕ ಅಂಶಗಳಿಗೂ ಅಡಚಣೆ ಉಂಟುಮಾಡಿದೆ. ಬಿಳಿಯರ ದಬ್ಬಾಳಿಕೆಗೂ ಜಾತಿ ವೈಷಮ್ಯವೇ ಮುಖ್ಯ ಕಾರಣವಾಗಿದ್ದು, ಧರ್ಮಗಳು ಇದಕ್ಕೆ ಹೊರತಲ್ಲ ಎನ್ನುವುದನ್ನು ಪ್ರಗತಿಪರರಾರೂ ಅಲ್ಲಗಳೆಯಲಾರರು.

ರಾಷ್ಟ್ರೀಯ ಚಳವಳಿ, ಕನ್ನಡ ಸಾಹಿತ್ಯ ಮತ್ತು ಕೋಮು ಸಮಸ್ಯೆ, ಸಾಹಿತ್ಯವು ಉಪರಾಷ್ಟ್ರೀಯತೆಗೆ ತೋರಿದ ಪ್ರತಿಕ್ರಿಯೆ, ಕರ್ನಾಟಕದ ಏಕೀಕರಣ, ಮಾಸ್ತಿಯವರ ಚಾರಿತ್ರಿಕ ಕಾದಂಬರಿಗಳು, ಕುವೆಂಪು ಕಾದಂಬರಿಗಳಲ್ಲಿ ಸಮಾಜ ಚಿತ್ರಣ ಮತ್ತು ಆಧುನಿಕತೆಯ ಪ್ರಕ್ರಿಯೆ, ಗೊರೂರರ ಕೃತಿಗಳಲ್ಲಿ ಸ್ವಾತಂತ್ರ್ಯ ಚಳವಳಿಯ ಘೋಷಣೆಗಳು ಮತ್ತು ಆಧುನಿಕ ಭಾರತದಲ್ಲಿ ಧರ್ಮ ಮತ್ತು ರಾಜಕಾರಣ, - ಹೀಗೆ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲುವ ಚಂದ್ರಶೇಖರ್ ಅವರ ಲೇಖನಗಳು ಕನ್ನಡ ಸಾಹಿತ್ಯ ಮತ್ತು ಚರಿತ್ರೆಯ ಸಂಬಂಧಗಳನ್ನು ಒಂದು ಹೊಸ ಅವಲೋಕನದ ಅಡಿಯಲ್ಲಿ ತಂದು ನಿಲ್ಲಿಸಿವೆ. ಒಟ್ಟು ಲೇಖನಗಳನ್ನು ಗಮನದಲ್ಲಿಟ್ಟುಕೊಂಡು ಕೊನೆಗೆ ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು : ಚರಿತ್ರೆಯನ್ನು ಸಮಕಾಲೀನ ಆಗುಹೋಗುಗಳ ಜೊತೆಗೆ ಬೆಸೆದು ಅದರ ಆಳಕ್ಕಿಳಿದು ಅಲ್ಲಿನ ವಸ್ತುಸಂಗತಿಗಳನ್ನು ಸೃಜನಶೀಲತೆಯ ಒರೆಗೆ ಹಚ್ಚಿ ತೆರೆದಿಟ್ಟಿರುವುದು ಇಲ್ಲಿನ ವಿಶೇಷವಾಗಿದೆ. ಲೇಖನಗಳಿಗೆ ಒಂದು ತಾತ್ವಿಕತೆ ಹಾಗೂ ನಿರ್ದಿಷ್ಟತೆಯ ಜೊತೆಗೆ ಸಾಹಿತ್ಯ, ಚರಿತ್ರೆ ಮತ್ತು ಸಂಸ್ಕೃತಿಗೆ ಒಂದು ಹೊಸ ಆಯಾಮ ಬಂದಿರುವುದನ್ನು ಇಲ್ಲಿ ಕಾಣಬಹುದಾಗಿದೆ.

ಎಂ. ವೆಂಕಟಸ್ವಾಮಿ
೪೨೭, ಮೊದಲನೆ ಮಹಡಿ, ೧೩ನೇ ಮುಖ್ಯರಸ್ತೆ, ಎಂ.ಸಿ. ಬಡಾವಣೆ, ವಿಜಯನಗರ, ಬೆಂಗಳೂರು-೪೦

# ವಿದ್ಯಾಸಾಗರ ಪ್ರೊ॥ ಎಂ. ಪಿ. ಎಲ್. ಶಾಸ್ತ್ರಿ

**ತೊಂ**ಭತ್ತು ವರ್ಷಗಳನ್ನು ದಾಟಿದ್ದ ಮಾನ್ಯ ಶಾಸ್ತ್ರಿಗಳು ಜೂನ್ ತಿಂಗಳ ಮೊದಲ ವಾರದಲ್ಲಿ ನಿಧನರಾದರು. ವಿಜಯಪುರ (ಹಿಂದೆ ವಡಗೇನಹಳ್ಳಿ) ಬಳಿಯ ಮುತ್ತೂರು ಅವರೂರು. ತಂದೆ ಪುರುಷೋತ್ತಮ ಶಾಸ್ತ್ರಿಗಳಂತೆ ಮಗನೂ ಸಂಸ್ಕೃತ ಸಾಹಿತ್ಯ, ವೇದಾಂತ, ಮುಂತಾದುವನ್ನು ವ್ಯಾಸಂಗ ಮಾಡಿ ಗಟ್ಟಿಗ ಎನಿಸಿಕೊಂಡವರು. ನಾನು ಏಳೆಂಟು ವರ್ಷದವನಿದ್ದಾಗ ಮುತ್ತೂರಿನಲ್ಲೇ ಪುರುಷೋತ್ತಮ ಶಾಸ್ತ್ರಿಗಳನ್ನು ನೋಡಿದ್ದೆ. ಅವರ ಭರ್ಜರಿ ಕಂಠ ಮಾತ್ರ ಜ್ಞಾಪಕವಿದೆ. ಮಗ ಎಂ.ಪಿ.ಎಲ್. ಅವರನ್ನು ಮಾಗಡಿ ಬಳಿಯ ಕೆಂಪಸಾಗರದಲ್ಲಿ ೧೯೫೩ರಲ್ಲಿ ಕಂಡಿದ್ದೆ. ನಮ್ಮೂರಿನ ಶಾಲೆಯಲ್ಲಿ ಮಾಗಡಿ ಪ್ರೌಢಶಾಲೆಯ ವಿದ್ಯಾರ್ಥಿಗಳು ಸಮಾಜ ಸೇವೆಗಾಗಿ ಕ್ಯಾಂಪ್ ಮಾಡಿದ್ದಾಗ ಶಾಸ್ತ್ರಿಯವರನ್ನು ಕರೆಸಿದ್ದರು. ಕೆಂಪೇಗೌಡನ ಕಾಲದ ದೊಡ್ಡಮಠವೇ ನಮ್ಮ ಶಾಲೆ. ಅಲ್ಲಿ ಅನೇಕ ಕೆತ್ತನೆಗಳಿವೆ. ಅವನ್ನು ನೋಡಿದ ನಂತರ ಶಾಸ್ತ್ರಿಗಳ ಭಾಷಣ. ಅವರು ಕಾಳಿದಾಸನ ಶಾಕುಂತಲ ನಾಟಕದ ''ಉದ್ಯಾನಲತಾ ವನಲತಾಭಿಃ'' ಎಂಬ ಶ್ಲೋಕಭಾವವನ್ನು ಉದ್ಧರಿಸಿ ನಮ್ಮ ಗ್ರಾಮದ ಶಿಲ್ಪಕಲೆಯನ್ನು ಶ್ಲಾಘಿಸಿದ್ದು ಈಗಲೂ ನೆನಪಿದೆ. ಅದನ್ನು ಕೇಳಿದ್ದ ಬೇರೆಯವರಾರೂ ಅದನ್ನು ನೆನಪಿನಲ್ಲಿಟ್ಟಿರಲಾರರೆಂದು ನನ್ನ ಊಹೆ. ಅದಾದ ೨೧ ವರ್ಷಗಳ ನಂತರ ನಾನೂ ಅವರೂ ಬೆಂಗಳೂರಿನ ಗಾಂಧಿನಗರದ ಆರ್ಯ ವಿದ್ಯಾಶಾಲೆಯಲ್ಲಿ ಒಟ್ಟಿಗೆ ಉಪನ್ಯಾಸ ನೀಡಿದ್ದೆವು. ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಬ್ರಹ್ಮಜ್ಞಾನ ಪಡೆಯುವ ಅಗತ್ಯದ ಬಗ್ಗೆ ಅಂದು ಶಾಸ್ತ್ರಿಗಳು ವಿವರವಾಗಿ ಉಪದೇಶ ನೀಡಿದರು. ಆಮೇಲೆ ನನ್ನ ಭಾಷಣ. ನಾನು ಹೇಳಿದೆ: ಸಂಜೆ ಐದೂವರೆಯಲ್ಲಿ ಭಾಷಣಗಳನ್ನು ಕೇಳುತ್ತಾ ಕುಳಿತಿದ್ದೀರಿ. ಅದೂ ಬ್ರಹ್ಮಜ್ಞಾನದ ಬಗ್ಗೆ. ಸದ್ಯ, ಮಾಗಡಿಯ ನಮ್ಮ ಶಾಲೆಯಲ್ಲಿ ಇವಕ್ಕೆಲ್ಲಾ ಅವಕಾಶವಿರಲಿಲ್ಲ. ಎಲ್ಲಾ ಬಯಲಿನ ಭಾಷಣಗಳು. ಓಡಿಹೋಗಲು ಸುಲಭವಾಗಿತ್ತು. ನೀವು ಹಾಗೆ ತಪ್ಪಿಸಿಕೊಳ್ಳಲು ಇಲ್ಲಿ ಮೋಟುಗೋಡೆಗಳು ಸಹ ಇಲ್ಲ. ಬ್ರಹ್ಮಜ್ಞಾನ ಪಡೆಯುವ ಮೊದಲು ನಿಮ್ಮ ಶಾಲೆಯ ಪಕ್ಕದಲ್ಲಿ ಹೆಂಡದಂಗಡಿ ಏಕಿದೆಯೆಂಬ ಜ್ಞಾನ ಪಡೆಯಿರಿ. ಇತ್ಯಾದಿ. ಪ್ರೊಫೆಸರ್ ಶಾಸ್ತ್ರಿಗಳ ಪರಿಚಯವಾಗಿ ಆಗ್ಗೆ ಐದಾರು ವರ್ಷಗಳಾಗಿತ್ತು. ಭೇಟಿಯಾದಾಗೊಮ್ಮೆ ನೊಂದು ನುಡಿದರು : ''ಏನು, ಹೀಗೆ ಮಾಡಿಬಿಟ್ಟಿರಲ್ಲಾ ! ಮಕ್ಕಳಿಗೆ ನಮ್ಮ ಪರಂಪರೆಯ ಬಗ್ಗೆ ಗೌರವ ಮೂಡಬೇಕು. ಬ್ರಹ್ಮಜ್ಞಾನವನ್ನು ತಾತ್ಸಾರ ಮಾಡಬಹುದೇ ?'' ಮಕ್ಕಳು ಮೊದಲು ತಮ್ಮ ವಾಸ್ತವಿಕ ಇರವನ್ನು ತಿಳಿದುಕೊಳ್ಳಬೇಕು, ಮುಂತಾಗಿ ನಾನು ಉತ್ತರ ನೀಡಿದೆ. ''ನಿಮ್ಮ ಸರ್ಕಾರ ಬಂದರೆ ಬರೀ ಅದನ್ನೇ ಹೇಳಿಕೊಡುತ್ತೀರೇನೋ ಎಂಬ ಸಂಶಯ ನನ್ನದು,'' ಎಂದರು. ಅಂತಹ ಸಂಶಯ ಅನಗತ್ಯವೆಂಬುದನ್ನು ಕ್ರಮೇಣ ಅವರು ಕಂಡುಕೊಂಡಿದ್ದಿರಬೇಕು. ಅವರು ತೀರಿಕೊಳ್ಳುವ ನಾಲ್ಕೈದು ವಾರಗಳ ಮುಂಚೆ ಸುಮಾರು ಅರ್ಧ ಗಂಟೆಕಾಲ ಅವರ ಮನೆಯಲ್ಲಿ ಕೂತು ಲೋಕಾಭಿರಾಮವಾಗಿ ಏನೇನೋ ಮಾತನಾಡುವ ಸಂದರ್ಭವನ್ನು ನನ್ನ ಸ್ನೇಹಿತೆ ಡಾ॥ ನಂದಿನಿ ಮತ್ತು ಡಾ॥ ಪದ್ಮನಾಭರಾವ್ ಕಲ್ಪಿಸಿಕೊಟ್ಟಿದ್ದರು. ನಾನವರನ್ನು ಹೀಗೆ ಭೇಟಿಯಾಗುತ್ತಿದ್ದುದು ಸ್ವಲ್ಪ ವಿರಳವೇ. ರಸ್ತೆಯಲ್ಲೋ, ಅವರ ಕಾಲೇಜಿನ ಕಾರಿಡಾರಿನಲ್ಲೋ ಹತ್ತು-ಹದಿನೈದು ನಿಮಿಷಗಳ ಕಾಲ ಮಾತನಾಡುತ್ತಿದ್ದುದೇ ಹೆಚ್ಚು. ಅವರ ತುಂಟ ನಗೆ, ಛೇಡಿಸುವ ಮಾತುಗಳು, ಒಳಹೊಕ್ಕು ನೋಡುವ ಕಣ್ಣುಗಳು ಮತ್ತು ಇವೆಲ್ಲವುಗಳ ಜೊತೆ ಒಂದು ರೀತಿಯ ಸಹಜ ವಾತ್ಸಲ್ಯ - ಇವು ಅವರನ್ನು ಭೇಟಿಯಾದಾಗಲೆಲ್ಲಾ ನಾನೂ ಗಮನಿಸಿದ್ದೇನೆ. ''ಸಂಸ್ಕೃತ ಓದಿಯೂ ಹೀಗಾಗಿಬಿಟ್ಟನಲ್ಲಾ'' ಎಂಬ ವ್ಯಥೆ ಅವರಿಗಿದ್ದಿರಬೇಕು. ನನ್ನ ಗುರುಗಳೂ ಅವರ ಆಪ್ತ ಸ್ನೇಹಿತರೂ ಆಗಿದ್ದ ಪ್ರೊ॥ ಎಸ್. ರಾಮಚಂದ್ರರಾವ್ ಅವರಲ್ಲಿ ಅವರು ಆ ವ್ಯಥೆಯನ್ನು ಹಂಚಿಕೊಂಡಿದ್ದುದೂ ಉಂಟು.

ಕಡೆಯ ಭೇಟಿಯಲ್ಲಿ ಅವರು ನನ್ನ ಪ್ರಕೃತದ ವ್ಯಾಸಂಗದ ಬಗ್ಗೆ ವಿಚಾರಿಸಿ ಸರ್ಕಾರದ ಶಿಕ್ಷಣ (ಅ)ನೀತಿಯ ಬಗ್ಗೆ ಖಾರವಾಗಿ, ನೊಂದು, ಮಾತನಾಡಿದರು. ಕಂಪ್ಯೂಟರ್ ಜಾಲದ ಮೋಹದಲ್ಲಿ ಸಿಲುಕಿ ದೇಶದ ಇಡೀ ಶಿಕ್ಷಣ ವ್ಯವಸ್ಥೆ ಹಾಳಾಗುತ್ತಿದೆ. ನಾಳೆಯ ದಿನಗಳಲ್ಲಿ ಶಾಲಾ - ಕಾಲೇಜುಗಳ ಅಧ್ಯಾಪಕರಾಗಲು ಯಾರು ಮತ್ತು ಎಂತಹ ನೈಪುಣ್ಯವಿರುವವರು ಬರುತ್ತಾರೆ, ಸಂಶೋಧನೆಗಳನ್ನೇನಾದರೂ ಮಾಡುವವರು ಇರುತ್ತಾರೆಯೆ, ಸಾಹಿತ್ಯ - ತತ್ತ್ವಶಾಸ್ತ್ರ ಮುಂತಾದುವನ್ನು ಗಂಭೀರವಾಗಿ ಅಭ್ಯಾಸ ಮಾಡುವವರು ಯಾರು, ಮುಂತಾಗಿ ತಮ್ಮ ಕಳವಳ ವ್ಯಕ್ತಪಡಿಸಿದರು. ''ನೀವೆಲ್ಲಾ ಏನು ಮಾಡುತ್ತಿದ್ದೀರಿ? ಈ ವಿಷಯಗಳನ್ನು ಕುರಿತು ಚಳುವಳಿ ಏಕೆ ನಡೆಸುವುದಿಲ್ಲ'' ಎಂದು ಮೂದಲಿಸಿದಾಗ ಅವರ ಮನದಾಳದಲ್ಲಿದ್ದುದು ನಮ್ಮನ್ನು ಟೀಕೆ ಮಾಡುವ ಉದ್ದೇಶವಲ್ಲವೆಂಬುದು ಸ್ಪಷ್ಟವಾಗಿತ್ತು. ಇನ್ನು ಕೆಲವೇ ವರ್ಷಗಳಲ್ಲಿ ಲಕ್ಷಗಟ್ಟಲೆ ಕಂಪ್ಯೂಟರ್ ತಂತ್ರಜ್ಞರು ಬೇಕಾಗುತ್ತಾರೆಂದೂ, ಅದಕ್ಕಾಗಿ ನಲವತ್ತು ಹೊಸ ಇಂಜನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸುವುದಾಗಿಯೂ ನಮ್ಮ ರಾಜ್ಯದ ಉನ್ನತ ಶಿಕ್ಷಣ ಸಚಿವರ ಹೇಳಿಕೆಯನ್ನು ಅವರ ಗಮನಕ್ಕೆ ತಂದಾಗ ಸುಮ್ಮನೆ ನಕ್ಕುಬಿಟ್ಟರು. ವಲಸೆ ಹೋಗಿದ್ದವರೆಷ್ಟು ಮಂದಿ ಅಮೆರಿಕಾದಿಂದ ಹಿಂದಿರುಗುತ್ತಿದ್ದಾರೆ, ಬೆಂಗಳೂರಿನಲ್ಲೇ ಎಷ್ಟು ಕಂಪ್ಯೂಟರ್ ಕಂಪನಿಗಳಲ್ಲಿ ನೂರಾರು ಉದ್ಯೋಗಿಗಳನ್ನು ಮನೆಗೆ ಕಳಿಸುತ್ತಿದ್ದಾರೆಂಬ ಲೆಕ್ಕ ಅವರಿಗೆ ಕೊಡಿ, ಎಂಬ ಸಲಹೆ ನೀಡಿದರು. ಅವರ ಕಾಲೇಜೂ ಸೇರಿದಂತೆ ರಾಜ್ಯದ ಕಾಲೇಜುಗಳಲ್ಲಿ ಉಂಟಾಗುತ್ತಿರುವ ದುಃಸ್ಥಿತಿಯ ಬಗ್ಗೆ ಒಂದು ಸೂಕ್ಷ್ಮ ವಿಶ್ಲೇಷಣೆ ನೀಡಿ ಭವಿಷ್ಯ ಇನ್ನೂ ಕಪ್ಪಾಗಿರುತ್ತದೆಯೆಂಬ ಆತಂಕವನ್ನು ತೋರ್ಪಡಿಸಿದರು.

ಅವರ ಕಾಲೇಜು ಸರ್ಕಾರದ ನಿಯಮಗಳನ್ನು ಬುದ್ಧಿವಂತಿಕೆಯಿಂದ ಉಲ್ಲಂಘಿಸುತ್ತಿದೆ, ಅದಕ್ಕೆ ಅಧಿಕಾರಿಗಳ ಕುಮ್ಮಕ್ಕೂ ಇದೆ, ವಿಶ್ವವಿದ್ಯಾನಿಲಯವು ಇದನ್ನು ನೋಡುತ್ತಾ ಸುಮ್ಮನಿರುವುದು ಸರಿಯಲ್ಲ, ಇತ್ಯಾದಿ ಅಂಶಗಳನ್ನು ಎಂಭತ್ತರ ದಶಕದಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಸೆನೆಟ್ ಸಭೆಯಲ್ಲಿ ಸ್ವಲ್ಪ ಉಗ್ರವಾಗಿ ಪ್ರತಿಪಾದಿಸಿದ್ದೆ. ಎಪ್ಪತ್ತರ ದಶಕದಲ್ಲಿ ಅವರ ಕಾಲೇಜಿನಲ್ಲಿ ಮೀಸಲಾತಿಯ ನಿಯಮಗಳು ಜಾರಿಗೆ ಬಂದಿರಲಿಲ್ಲ. ವಿದ್ಯಾರ್ಥಿಗಳ ಸೇರ್ಪಡೆಯಲ್ಲೂ ಈ ನಿಯಮಗಳಿಗೆ ಮಾನ್ಯತೆ ಇರಲಿಲ್ಲ. ಆಮೇಲೆ ಕೆಲವು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳು ಪ್ರವೇಶ ಪಡೆದಾಗ ಹಿರಿಯ ಅಧ್ಯಾಪಕರೊಬ್ಬರು ಅದರ ಬಗ್ಗೆ ಅವಹೇಳನಕರ ರೀತಿಯಲ್ಲಿ ಮಾತನಾಡಿದ್ದರು. ಆ ವಿದ್ಯಾರ್ಥಿಗಳಿದ್ದ ತರಗತಿಗೆ ಹೋದಾಗ ಅವರಿಗೆ ಕೆಟ್ಟ ವಾಸನೆ ತಡೆಯಲಾಗುತ್ತಿರಲಿಲ್ಲವಂತೆ ! ಈ ಮಾತಿನ ವಿರುದ್ಧ ಪ್ರತಿಭಟಿಸಿದ್ದ ಒಂದಿಬ್ಬರು ತರುಣ ಅಧ್ಯಾಪಕರೂ ಅಲ್ಲಿದ್ದರು. ಮಾನ್ಯ ಶಾಸ್ತ್ರಿಗಳಂಥವರು ಇಂತಹ ಸನ್ನಿವೇಶವನ್ನು ಪೋಷಿಸಬಾರದೆಂದು ಸಹ ನಾನು ಆ ಸಭೆಯಲ್ಲಿ ರೋಷದಿಂದ ಮಾತನಾಡಿದ್ದೆ. ಅದಾದ ಕೆಲವು ವಾರಗಳ ನಂತರ ಪ್ರೊಫೆಸರ್ ಶಾಸ್ತ್ರಿಯವರ ಭೇಟಿಯಾಯಿತು: ''ಏನು, ನಮ್ಮ ಕಾಲೇಜಿನ ಬಗ್ಗೆ ನಿಮ್ಮ ಅಸಮಾಧಾನವನ್ನು ಕಾರಿಕೊಂಡಿರಂತೆ ! ಎಲ್ಲ ಕಾಲೇಜುಗಳನ್ನೂ ಹೀಗೆ ಒಂದೇ ತಕ್ಕಡಿಗೆ ಹಾಕಿ ತೂಗಿಬಿಡುವುದು ಸರಿಯೆ ? ನನ್ನೊಡನೆ ನೇರವಾಗಿ ಚರ್ಚಿಸುವುದು ಬಿಟ್ಟು ಎಲ್ಲೋ ಸಭೆಯಲ್ಲಿ ನಮ್ಮನ್ನು ಟೀಕಿಸುವುದೆ ?'' ಅಂದು ಚಿಕ್ಕ ವಾಗ್ಯುದ್ಧ ನಡೆದರೂ ಅವರ ವಾತ್ಸಲ್ಯದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ವಿಶ್ವವಿದ್ಯಾನಿಲಯಕ್ಕೆ ಸೇರಿದ ಕಾಲೇಜುಗಳಲ್ಲಿ ಸ್ನಾತಕೋತ್ತರ ತರಗತಿಗಳು ಕೂಡದೆಂದು ಕೆಲವು ಶೈಕ್ಷಣಿಕ ನಿಜಾಮರು ಪಟ್ಟುಹಿಡಿದಿದ್ದಾಗ ಸಭೆಯೊಂದರಲ್ಲಿ ಅವರನ್ನೆಲ್ಲಾ ಚೆನ್ನಾಗಿ ಜಾಲಾಡಿ ಶಾಸ್ತ್ರಿಗಳ ಕಾಲೇಜಿಗೆ ಅದನ್ನು ಕೊಡಲೇಬೇಕೆಂದು ಆಗ್ರಹಪಡಿಸಿದ್ದೆ. ಅದಕ್ಕೆ ಬೆಂಬಲ ಸಿಕ್ಕಿ ಅಂಗೀಕಾರವೂ ಆಯಿತು. ಮಾರನೆಯ ದಿನವೇ ಅನಿರೀಕ್ಷಿತವಾಗಿ ಶಾಸ್ತ್ರಿಯವರು ನಮ್ಮ ಕಾಲೇಜಿಗೆ ಫೋನ್ ಮಾಡಿ ನನಗೆ ಹೇಳಿದರು: ''ಏನು, ನಮ್ಮ ಪರವಾಗಿ ಬಹಳ ಜೋರಾಗಿ ಗುಡುಗಿದಿರಂತಲ್ಲಾ ! ನೀವು ನಮ್ಮ ವಿರೋಧಿಗಳೆಂದು ಕೆಲವರು ಹೇಳುತ್ತಿದ್ದರು. ನಾನದನ್ನು ಎಂದೂ ಒಪ್ಪಿರಲಿಲ್ಲ. ಅದು ಬೇರೆ ಮಾತು. ಆದರೆ ಕಟ್ಟುನಿಟ್ಟಾಗಿ ನೀವು ವಾದಿಸಿದಿರೆಂದು ಕೇಳಿ ಸಂತೋಷವಾಯಿತು. ನಾನೇನೂ ನಿಮಗೆ ಥ್ಯಾಂಕ್ಸ್ ಹೇಳಬೇಕಾಗಿಲ್ಲ ತಾನೆ ?''

ಎಪ್ಪತ್ತರ ದಶಕದಲ್ಲಿ ಕಾಲೇಜು ಅಧ್ಯಾಪಕರು ಚಳುವಳಿ ನಡೆಸಿದ್ದರು: ಸರ್ಕಾರವೇ ನೇರವಾಗಿ ವೇತನ ಪಾವತಿಸಬೇಕೆಂದು. ಖಾಸಗಿ ಆಡಳಿತದ ಕಾಲೇಜುಗಳ ಪರವಾಗಿ ಶಾಸ್ತ್ರಿಗಳು ಅದನ್ನು ತೀವ್ರವಾಗಿ ವಿರೋಧಿಸಿದ್ದರು; ನಾವು ಅವರನ್ನು ತೀವ್ರವಾಗಿ ಖಂಡಿಸಿದ್ದೆವು. ಆ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲ ಖಾಸಗಿ ಮಂಡಲಿಗಳ ಒಂದು ಸಭೆಯನ್ನು ಶಾಸ್ತ್ರಿಗಳು ಅವರ ಕಾಲೇಜಿನಲ್ಲಿ ಏರ್ಪಡಿಸಿದ್ದರು. ನಮ್ಮ ಒಕ್ಕೂಟದ ಅಧ್ಯಕ್ಷರಾಗಿದ್ದ ಶ್ರೀ ಎಂ. ಸತ್ಯನಾರಾಯಣ ರಾವ್ ಮತ್ತು ನಾನು ನಮ್ಮ ಕರಪತ್ರಗಳನ್ನು ಹಂಚಲು ಅಲ್ಲಿಗೆ ಹೋದೆವು. ಗೇಟಿನ ಬಳಿಯೇ ಶಾಸ್ತ್ರಿಗಳು ಸಿಕ್ಕಿದರು : ''ಓಹೋ, ಇಲ್ಲಿಗೇ ಬಂದುಬಿಟ್ಟಿರಾ, ಬನ್ನಿ. ಕೊಡಿ, ನಿಮ್ಮ ಕರಪತ್ರಗಳನ್ನು ನಾನೇ ಹಂಚುತ್ತೇನೆ. ಬೇಕಿದ್ದರೆ ನಮ್ಮನ್ನುದ್ದೇಶಿಸಿ ನೀವೂ ಮಾತನಾಡಿ. ಆದರೆ ನನ್ನ ಅಭಿಪ್ರಾಯ ನಿಮಗೆ ತಿಳಿದೇ ಇದೆಯಲ್ಲವೆ ?'' – ಹಾಗೆಂದಿದ್ದ ಶಾಸ್ತ್ರಿಗಳು ಅಂದು

*೫೯ನೇ ಪುಟಕ್ಕೆ*

# ಕನ್ನಡಿಗರು ದ್ರಾವಿಡರಲ್ಲವೇ...?

**ಡಾ||** ಕಾ. ವೆಂ. ಶ್ರೀನಿವಾಸ ಮೂರ್ತಿಯವರ ಬರೆಹ "ಕನ್ನಡಿಗರು ದ್ರಾವಿಡರೇ ?" ಎಂಬುದನ್ನು ಓದಿ ಮನನ ಮಾಡುತ್ತಿದ್ದಂತೆ, ಈ ವಿಷಯದ ಕುರಿತು ಕುತೂಹಲ ಕೆರಳಿ ವಿಷಯದ ಬಗ್ಗೆ ಮತ್ತೆ ಅಭ್ಯಸಿಸುವಂತಾಯಿತು. ಅವರು ದ್ರಾವಿಡ ಎಂಬ ನಿರುಕ್ತ ನೇರವಾಗಿ ತಮಿಳು ಭಾಷೆ ಮತ್ತು ಅದರ ಸಂಸ್ಕೃತಿಯನ್ನು ಮಾತ್ರ ಕುರಿತದ್ದು ಎಂದು ಪ್ರಸ್ತಾವ ಮಾಡಿದ್ದಾರೆ. ಅಹುದು ! ಸಂಕ್ಷಿಪ್ತ ಕನ್ನಡ ನಿಘಂಟು ಸಹ ದ್ರಾವಿಡ ಎಂದರೆ ತಮಿಳು ಭಾಷೆ ಎಂದೇ ಅರ್ಥವನ್ನು ನೀಡಿದೆ. ಆದರೆ ಅದೇ ನಿಘಂಟುವಿನಲ್ಲಿ 'ಪಂಚ ದ್ರಾವಿಡ' ಎಂಬ ಪದಕ್ಕೆ "ಕನ್ನಡ, ತಮಿಳು, ತೆಲುಗು, ತುಳು ಮತ್ತು ಮಲೆಯಾಳ ಎಂಬ ಐದು ಭಾಷೆಗಳು" ಎಂಬ ನಿರೂಪಣೆಯೂ ಇದೆಯಷ್ಟೇ ! ಅಂತಂದ ಬಳಿಕ ಕನ್ನಡ, ಕನ್ನಡಿಗರು ದ್ರಾವಿಡವರ್ಗದಲ್ಲಿಯೇ ಸೇರ್ಪಡೆಯಾದದ್ದು ಕಂಡುಬರುತ್ತದೆ.

ಹಳೆಯ ಸಾಹಿತ್ಯದಲ್ಲಿ ಛಪ್ಪನ್ನಾರು ಪ್ರದೇಶಗಳನ್ನು ನಿರೂಪಿಸುವಾಗ ಕರ್ನಾಟಕ ಮತ್ತು ತಮಿಳುನಾಡುಗಳ ಪ್ರದೇಶವನ್ನು ಕರ್ನಾಟ ಹಾಗೂ ದ್ರವಿಳ (ದ್ರಾವಿಡ) ಎಂದು ಗುರುತಿಸಿದ್ದಿದೆ. ಆದರೆ ಆ ಮಾತುಗಳು ಸದ್ಯದ ರಾಜ್ಯ ವಿಂಗಡನೆಗೆ ಸರಿಹೊಂದುವಂಥದಲ್ಲ. ಹಾಗೆ ನೋಡಿದರೆ ಕನ್ನಡ ಪ್ರದೇಶಗಳ ವಿವಿಧ ಭಾಗಗಳನ್ನು ಕುಂತಲ, ಕರ್ನಾಟ, ಮಾಹಿಷ್ಮತಿ, ಮಹಾರಾಷ್ಟ್ರ ಎಂದು ಹಲವಾರು ವಿಂಗಡಣೆಗಳಿಂದ ಆಗ ಗುರುತಿಸಲಾಗುತ್ತಿತ್ತು.

ಕನ್ನಡದ ಪ್ರಾಚೀನತೆಯ ಬಗ್ಗೆ ಹೆಮ್ಮೆ ಪಟ್ಟುಕೊಂಡರೂ ಕನ್ನಡಕ್ಕಿಂತ ಮೊದಲು ತಮಿಳು ಭಾಷೆ ಇತ್ತು ಎಂಬುದಕ್ಕೆ ಪ್ರತಿವಾದವಿಲ್ಲವಷ್ಟೇ. ಮೂಲ ದ್ರವಿಳ (ಹಳೇ ತಮಿಳು) ವಿವಿಧ ಪ್ರಾದೇಶಿಕ ಭಿನ್ನತೆಗಳೊಂದಿಗೆ ಪ್ರಚಲಿತವಿದ್ದ ಪುರಾತನ ಕಾಲದಲ್ಲಿ ಸಂಸ್ಕೃತದ ಸಂಕರ ದೊಂದಿಗೆ ಕಾಲಾನುಕ್ರಮದಲ್ಲಿ ಕನ್ನಡ, ತೆಲುಗು, ಮಲೆಯಾಳ, ತುಳು ಭಾಷೆಗಳು ಪ್ರತ್ಯೇಕತೆಯನ್ನು ನಿರೂಪಿಸುವಷ್ಟರಮಟ್ಟಿಗೆ ಹೊಮ್ಮಿದ್ದು ಐತಿಹಾಸಿಕ ಸತ್ಯವಾಗಿದೆ; ಎಂದೇ ಪಂಚದ್ರಾವಿಡ ಎಂಬ ಪದವು ಹುಟ್ಟಿಕೊಂಡಿದೆ. ಪಂಚದ್ರಾವಿಡ ಎಂಬ ಪದಪುಂಜವನ್ನು ಗಮನಿಸಿದರೆ ಈ ಐದು ಭಾಷಿಕರನ್ನು 'ದ್ರಾವಿಡ' ವರ್ಗದವರೆಂದು ತಪ್ಪಾಗಿ ಗುರುತಿಸಿ ದವರು ಹರ್ಬರ್ಟ್ ರಿಸ್ಲೆ ಎಂದು ಆತನ ತಲೆಯ ಮೇಲೆ ಗೂಬೆ ಕೂರಿಸುವುದು ಸರಿಯಾದೀತೇ ?

ಪಂಪ, ರನ್ನರಂಥವರ ಹಳೆಗನ್ನಡ ಕಾವ್ಯಗಳನ್ನು ಓದುತ್ತಿದ್ದಂತೆ ಆಗಿನ ಕನ್ನಡ ಭಾಷೆ ಸೌಷ್ಠವವು ತಮಿಳು ಭಾಷೆಗೆ ಎಷ್ಟೊಂದು ಹತ್ತಿರವಿದೆ ಎಂದೆನಿಸುತ್ತದೆ. ಮೂಲ ದ್ರವಿಳ ಭಾಷೆಯು ಸಂಸ್ಕೃತ ಭಾಷೆಯೊಂದಿಗೆ ಸಂಪರ್ಕ, ಸಾಹಚರ್ಯ, ಒಗೆತನ ಮಾಡುತ್ತ ಮಾಡುತ್ತ ವಿವಿಧ ಪ್ರದೇಶಗಳ ಸ್ಥಾನಿಕ ವಿಶೇಷತೆಗಳ ಫಲವಾಗಿ ಕನ್ನಡ, ತೆಲುಗು, ಮಲೆಯಾಳ, ತುಳು ಭಾಷೆಗಳು ಕುಸುಮಿಸಿದವು ಎಂಬುದು ಇದರಿಂದ ಖಚಿತಗೊಳ್ಳುತ್ತದೆ.

ಇನ್ನು ನಮ್ಮ ರಾಷ್ಟ್ರಗೀತೆಯಾಗಿರುವ "ಜನಗಣಮನ"-ದಲ್ಲಿ ದ್ರಾವಿಡ ಇದೆ, ಕರ್ನಾಟಕ ಇಲ್ಲ ಎಂಬುದಕ್ಕೆ ಸಹ ಐತಿಹಾಸಿಕ ಕಾರಣವೇ ಸೂಕ್ತ ಸಮಾಧಾನ ನೀಡುತ್ತದೆ. ಕವಿಯು ಒಂದು ಪದವನ್ನು ಯಾವ ಅರ್ಥದಲ್ಲಿ ಬಳಸಿದ್ದಾನೆ ಎಂಬುದನ್ನು ಗುರುತಿಸಿಕೊಂಡೇ ಕವನದ ಅರ್ಥಾನ್ವಯ ಮಾಡುವುದು ರೂಢಿಯಷ್ಟೇ. ಟಾಗೋರರು ಈ ಕವನವನ್ನು ಬರೆದಾಗ ಕರ್ನಾಟಕ, ಆಂಧ್ರ, ಹೀಗೆ ಭಾಷಾವಾರು ರಾಜ್ಯಗಳಿರಲಿಲ್ಲ; ದಕ್ಷಿಣ ಭಾರತವೆಲ್ಲ ದ್ರಾವಿಡ ಪ್ರದೇಶ (ಪಂಚದ್ರಾವಿಡ) ಎಂದೇ ಸಮ್ಮತವಾಗಿತ್ತು. ಈಗಿನ ಸ್ಥಿತಿಗತಿಗೆ ಅನುಗುಣವಾಗಿ ನಮ್ಮ ರಾಷ್ಟ್ರಗೀತೆಯನ್ನು ಅರ್ಥೈಸುವುದಾದರೆ, ಸಿಂಧ್ ಪ್ರಾಂತ್ಯ ಈಗ ಭಾರತದಲ್ಲಿಲ್ಲ, ಗೋವೆ, ಪಾಂಡಿಚೇರಿ, ಸಿಕ್ಕಿಂ, ಅಂಡಮಾನ್ - ನಿಕೋಬಾರ್ ಇತ್ಯಾದಿಗಳು ಈಗ ಭಾರತದಲ್ಲಿವೆ. ಪ್ರಾದೇಶಿಕ ಪುನರ್ ವ್ಯವಸ್ಥೆಗಳು ಆಗುತ್ತಾ ಹೋದಂತೆ ರಾಷ್ಟ್ರಗೀತೆಯನ್ನು ಮಾರ್ಪಾಟು ಮಾಡುವುದು ಸೂಕ್ತವಾದೀತೇ ? ರಾಷ್ಟ್ರಗೀತೆ, ರಾಷ್ಟ್ರಧ್ವಜ ಮುಂತಾದ ಶ್ರದ್ಧಾಕೇಂದ್ರಗಳು ಭಾವನಾತ್ಮಕ ವಿಷಯಗಳು, ಅವನ್ನು ಸರಳ ತಾರ್ಕಿಕತೆಯಿಂದ ತೂರುತ್ತಾ ಹೋಗುವುದು ಸರಿ ಎನಿಸದು.

ಆಲೂರು ವೆಂಕಟರಾಯರು ರಾಷ್ಟ್ರಗೀತೆಯಲ್ಲಿ 'ಕರ್ನಾಟಕ' ಪದ ಸೇರಬೇಕೆಂದು ಮನವಿ ಮಾಡಿಕೊಂಡಿದ್ದಕ್ಕೆ ದ್ರಾವಿಡವೇ ಬೇರೆ, ಕರ್ನಾಟಕವೇ ಬೇರೆ ಎಂಬ ಭಾವನೆಯು ಪ್ರೇರೇಪಿಸಿತು ಎಂದೆನಿಸುವುದಿಲ್ಲ. ಬೊಂಬಾಯಿ ಪ್ರೆಸಿಡೆನ್ಸಿಯಲ್ಲಿ ಸಿಂಧ್, ಗುಜರಾತ್, ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದ ಪ್ರದೇಶಗಳು ಇದ್ದವು. ಸಿಂಧ್, ಗುಜರಾತ್, ಮಹಾರಾಷ್ಟ್ರಗಳನ್ನು ಎಲ್ಲರೂ ಗುರುತಿಸುತ್ತಿದ್ದರು. ಉತ್ತರ ಕರ್ನಾಟಕವನ್ನು ಯಾರೂ ಲೆಕ್ಕಿಸುತ್ತಿದ್ದಿಲ್ಲ, ಅದನ್ನು ದಕ್ಷಿಣ ಮಹಾರಾಷ್ಟ್ರ ಎಂದು ಬಗೆದು ಕರ್ನಾಟಕ ಮತ್ತು ಕನ್ನಡವನ್ನು ಲೆಕ್ಕಕ್ಕೆ ಹಿಡಿಯುತ್ತಿದ್ದಿಲ್ಲ. ಉದಾಹರಣೆಗೆ, ಉತ್ತರ ಕರ್ನಾಟಕದಲ್ಲಿ ಹಾದು ಹೋಗುತ್ತಿದ್ದ ರೇಲ್ವೆಯನ್ನು ಎಂ. ಎಸ್. ಎಂ. (ಅಂದರೆ ಮದ್ರಾಸ್ ಅಂಡ್ ಸದರ್ನ್ ಮರಾಠಾ ರೇಲ್ವೆ) ಎಂದು ಕರೆಯುತ್ತಿದ್ದರು. ಇದರಿಂದ ಕುಲಪುರೋಹಿತರ ಮನಸ್ಸಿನಲ್ಲಿ ಗುಜರಾತ್-ಮಹಾರಾಷ್ಟ್ರಗಳ ಉಲ್ಲೇಖವಿದೆ, ಕರ್ನಾಟಕದ ಉಲ್ಲೇಖವಿಲ್ಲ, ಎಂಬ ಹಳಹಳಿಕೆ ಕೊರೆಯುತ್ತಿದ್ದುದು ಸ್ಪಷ್ಟವಾಗುತ್ತದೆ.

ರಾಷ್ಟ್ರಗೀತೆಯನ್ನು ಸ್ವೀಕಾರ ಮಾಡುವ ಕಾಲಕ್ಕೆ ಕವೀಂದ್ರ ರವೀಂದ್ರರು ಇರಲಿಲ್ಲ. ದಿವಂಗತರ ಕವನವನ್ನು ಮಾರ್ಪಾಟು ಮಾಡುವ ಧಾರ್ಷ್ಟ್ಯವನ್ನು ರಾಷ್ಟ್ರಗೀತೆ ಆಯ್ಕೆ ಸಮಿತಿಯವರು ತೋರಲಿಲ್ಲ. ಅಂಕಿತಗಳನ್ನು ತಿದ್ದುವ ಜಗದ್ಗುರುಗಳಾರೂ ಆ ಸಮಿತಿಯಲ್ಲಿರಲಿಲ್ಲ !

"ಜಯ ಭಾರತ ಜನನಿಯ ತನುಜಾತೆ" ಎಂಬ ನಮ್ಮ ನಾಡಗೀತೆಯ ಕುರಿತು ಆಲೋಚನೆ ಈ ಸಂದರ್ಭದಲ್ಲಿ ಪ್ರಸ್ತುತ ಎನಿಸುತ್ತದೆ. ಪುಟ್ಟಪ್ಪನವರು ಮೊದಲು ಈ ಕವನವನ್ನು ಬರೆದಾಗ ಮಧ್ವಾಚಾರ್ಯರ ಹೆಸರು ಅದರಲ್ಲಿರಲಿಲ್ಲ. ಕರ್ನಾಟಕದಲ್ಲಿ ಮಾಧ್ವರು ಗಣನೀಯವಾಗಿದ್ದಾರಷ್ಟೇ. ಈ ಕವನವು ನಾಡಗೀತೆಯಾಗಬೇಕಾದರೆ ಮಾಧ್ವರ ಹೆಸರು ಇರತಕ್ಕದ್ದು ಎಂಬ ಆಶಯದ ಮನವಿ, ಒತ್ತಾಯ ಬಂದವು. ಪುಣ್ಯಕ್ಕೆ ಪುಟ್ಟಪ್ಪನವರು ಜೀವಂತವಿದ್ದುದರಿಂದ ತಮ್ಮ ಕವನದಲ್ಲಿ ಈ ಮಾರ್ಪಾಟು ಮಾಡಿದರು; ನಾಡಗೀತೆಯಾಗಿ ಈ ಕವನ ಸ್ವೀಕೃತವಾಯಿತು.

ಏನೇ ಆಗಲಿ 'ಪಂಚದ್ರಾವಿಡ' ಎಂಬ ಪದಪುಂಜದಲ್ಲಿ ಕನ್ನಡವು ಸೇರಿದೆ ಎಂದ ಬಳಿಕ ಕನ್ನಡ - ಕರ್ನಾಟಕ ದ್ರಾವಿಡವೇ ಎಂಬುದು ನಿಖರಗೊಳ್ಳುತ್ತದೆ. ನಮ್ಮ ಮೂಲವನ್ನು ಮರೆಮಾಚಿ, ಈಗಿನ ನಮ್ಮ ಗುರುತನ್ನು - ಪ್ರತ್ಯೇಕತೆಯನ್ನು ಮಾತ್ರ ಸಾಧಿಸುವುದು ಸರಳ ತಾರ್ಕಿಕತೆ ಇರಬಹುದು, ಆದರೆ ಐತಿಹಾಸಿಕ ಬೆಳವಣಿಗೆಯನ್ನು ತಾರ್ಕಿಕತೆಯಿಂದ ಉಜ್ಜಿ ಮರೆಸುವುದು ಸುಲಭವೇನಲ್ಲ.

ಗೀತಾ ಗುರುರಾಜ್ ಕುಲಹಳ್ಳಿ
೨೯೩, ಭೀಮಕ್ಕಪ್ಪಾ, ಜೈನ್ ಬಸದಿ ರಸ್ತೆ
ಹಿಂದವಾಡಿ, ಬೆಳಗಾವಿ - ೫೯೦೦೧೧

೫೮ನೇ ಪುಟದಿಂದ

ಸಂಜೆ ಸರ್ಕಾರದ ಜೊತೆ ನಡೆದ ಸಭೆಯಲ್ಲಿ ತಮ್ಮ ವಿರೋಧ ವ್ಯಕ್ತಪಡಿಸಲಿಲ್ಲ. ಆಗಾಗ್ಗೆ ನಮ್ಮ ಭೇಟಿಯಾದಾಗಲೆಲ್ಲ ಅವರೆನ್ನುತ್ತಿದ್ದರು : "ನೋಡಿ, ಏನೋ ಅನುಕೂಲ ಬೇಕೆಂದು ವಾದ ಮಾಡಿದಿರಿ. ಈಗ ನಮ್ಮ ವಾತಾವರಣ, ಶಿಸ್ತು, ಎಲ್ಲಾ ಹೇಗೆ ಕಲುಷಿತಗೊಂಡಿದೆ." ಅದರಿಂದ ಕಲುಷಿತಗೊಳ್ಳಲಿಲ್ಲವೆಂಬ ನಮ್ಮ ಸಮಜಾಯಿಷಿ ಅವರಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಅವರ ಮನಸ್ಸಿನಲ್ಲಿ ಯಾವಾಗಲೂ ಕುದಿಯುತ್ತಿದ್ದ ಪ್ರಶ್ನೆ ನಮ್ಮ ಶೈಕ್ಷಣಿಕ ಮಟ್ಟವು ಶ್ರೇಷ್ಠವಾಗಿರಬೇಕಾದರೆ ನಾವು ಮಾಡಬೇಕಾದ್ದೇನು ಎಂಬುದು. ಇಡೀ ವ್ಯವಸ್ಥೆಯು ಶ್ರೇಷ್ಠತೆಯನ್ನು ಸಾಧಿಸಿಕೊಳ್ಳದಿದ್ದರೆ ಕೆಲವು ದ್ವೀಪಗಳಾದರೂ ಹಾಗಿರಲಿ ಎಂಬುದು ಅವರ ಅಭಿಪ್ರಾಯ. ಆ ಬಗ್ಗೆ ವಿಪುಲ ಚರ್ಚೆ ಇನ್ನೂ ಮುಂದುವರಿಯಬೇಕಾಗಿದೆ.

ಶಾಸ್ತ್ರಿಗಳು ಹಠಾತ್ತಾಗಿ ತೀರಿಕೊಂಡರು : ಅನಾಯಾಸವಾಗಿ. "ಅನಾಯಾಸೇನ ಮರಣಂ ವಿನಾ ದೈನ್ಯೇನ ಜೀವನಂ" ಎಂಬ ಆಶಯವೊಂದಿದೆ. ಅವರ ಮನೆಯ ಬಳಿ ಇದನ್ನು ಪ್ರಸ್ತಾಪಿಸಿದಾಗ ಶಾಸ್ತ್ರಿಗಳೊಡನೆ ಸುಮಾರು ಮೂವತ್ತು ವರ್ಷ ಕೆಲಸ ಮಾಡಿರುವ ಸಹೋದ್ಯೋಗಿಯೊಬ್ಬರು ನುಡಿದರು: "ಶಾಸ್ತ್ರಿಗಳು ಅನಾಯಾಸವಾಗಿ ಮರಣ ಹೊಂದಿದರು; ಆದರೆ ಅನೇಕರನ್ನು ದೈನ್ಯದಿಂದ ಜೀವನ ಮಾಡುವಂತೆ ಅವರು ಮಾಡಿದ್ದರೆಂಬುದನ್ನು ಮರೆಯಲಾಗದು." ಇದು ತೀಕ್ಷ್ಣವಾದ ಆಪಾದನೆಯಂತೆ ತೋರಬಹುದು. ಆದರೆ ನಮ್ಮೆಲ್ಲ ಪಾಂಡಿತ್ಯ, ಸಜ್ಜನಿಕೆ, ಸರಳತೆ, ಶೈಕ್ಷಣಿಕ ಒಲವು-ಶ್ರದ್ಧೆ, ಕ್ರಿಯಾಶೀಲತೆ, ಸಾರ್ವಜನಿಕ ಜೀವನ, ಇತ್ಯಾದಿ ಅಲೆಗಳ ಮಧ್ಯೆ ಯಾರನ್ನೂ ದೈನ್ಯತೆಯತ್ತ ದೂಕಿಬಿಡಬಾರದು. ಮಾನ್ಯ ಪ್ರೊಫೆಸರ್ ಎಂ.ಪಿ.ಎಲ್. ಶಾಸ್ತ್ರಿಗಳೂ ಇದನ್ನು ಒಪ್ಪುತ್ತಿದ್ದರೆಂದು ಭಾವಿಸಬಹುದು. ಅವರಿಗೆ ನನ್ನ ಗೌರವದ ನಮನ ಸಲ್ಲುತ್ತದೆ. 'ಹೊಸತು'ವಿಗಾಗಿ ಅವರ ಸಂದರ್ಶನ ಪಡೆಯುತ್ತೇನೆಂದು ಕಡೆಯ ಭೇಟಿಯಲ್ಲಿ ಅವರಿಗೆ ಹೇಳಿದ್ದೆ. ಆದರೆ ಅದು ಆಗಲೇ ಇಲ್ಲ. 'ಹೊಸತು' ಶ್ರೀ ಶಾಸ್ತ್ರಿಗಳಿಗೆ ತನ್ನ ಗೌರವ ಸೂಚಿಸುತ್ತಾ ತಲೆಬಾಗುತ್ತದೆ.

-ಜಿ. ರಾಮಕೃಷ್ಣ

# ನಾಟಕದ ಫಣಿಯಮ್ಮ



೧೯೯೦ರ ಅಕ್ಟೋಬರ್‌ನಲ್ಲಿ ಹೆಗ್ಗೋಡಿನಲ್ಲಿ ನೀನಾಸಂ ಸಂಸ್ಕೃತಿ ಶಿಬಿರ. ಅದೇ ಸಮಯದಲ್ಲಿ ನೀನಾಸಂ ರಂಗಶಿಕ್ಷಣ ಕೇಂದ್ರದ ವಿದ್ಯಾರ್ಥಿಗಳ ಪ್ರಥಮ ನಾಟಕ ಕಲಿಕೆಯೂ ನಡೆದಿತ್ತು. ಭಾಸನ ದೂತ ಘಟೋತ್ಕಚ ನಾಟಕದ ಒಂದು ದೃಶ್ಯದ ಪ್ರದರ್ಶನ ಸಂಸ್ಕೃತಿ ಶಿಬಿರಾರ್ಥಿಗಳಿಗಿತ್ತು. ಆ ವರ್ಷದ ವಿದ್ಯಾರ್ಥಿಗಳೆಲ್ಲ ನನಗೆ ಹೊಸಬರು. ಆದರೆ ದುಶ್ಯಳೆಯಾಗಿ ಅಭಿನಯಿಸಿದ ಫಣಿಯಮ್ಮ ೩-೪ ವರ್ಷಗಳಿಂದ ಗೊತ್ತಿದ್ದ ಹುಡುಗಿ. ೮೯ನೇ ಸಾಲಿನ ರಂಗಶಿಕ್ಷಣ ಕೇಂದ್ರದ ವಿದ್ಯಾರ್ಥಿಗಳಿಗೆ ಫ್ರಿಟ್ಸ್ ಬೆನೆವಿಟ್ಸ್ ಷೇಕ್ಸ್‌ಪಿಯರ್‌ನ 'ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್' ಆಡಿಸಿದಾಗ ಫಣಿಯಮ್ಮ ಕಿನ್ನರಿಯಾಗಿ ಅಭಿನಯಿಸಿದ್ದಳು. ವೆಂಕಟರಮಣ ಐತಾಳರು ನಿರ್ದೇಶಿಸಿದ ದೂತ ಘಟೋತ್ಕಚ ನಾಟಕದಲ್ಲಿ ಸಂಸ್ಕೃತ ಮಾತುಗಳು, ಯಕ್ಷಗಾನ ಹೆಜ್ಜೆಗಳು, ಶುದ್ಧ ಕನ್ನಡ ಭಾಷೆ ಈ ವಾತಾವರಣದಲ್ಲಿ ದಲಿತಲೋಕದಿಂದ ಬಂದ ಫಣಿಯಮ್ಮನನ್ನು ಕಂಡಾಗ ನನಗೊಂದು ರೀತಿಯ ಹೆಮ್ಮೆ. ಅಚ್ಚರಿ, ಖುಷಿ ಎಲ್ಲಾ ಆಗಿತ್ತು.

ಹೆಗ್ಗೋಡಿನ ಶಿವರಾಮ ಕಾರಂತ ರಂಗಮಂದಿರದ ಸನಿಹವೇ ಇರುವ ಹರಿಜನ ಕೇರಿಯಲ್ಲಿ ಬೆಳೆದ ಫಣಿಯಮ್ಮ ಹೇಗೆ ನೀನಾಸಂ ಪ್ರವೇಶಿಸಿದಳು ? ಪ್ರಾರಂಭದಲ್ಲಿ ಜಾತಿಯ ಕೀಳರಿಮೆಯಿಂದ ನರಳಿದಳೇ ? ವಿದ್ಯಾಭ್ಯಾಸ ಮಾಡುವಾಗ ಮೇಲ್ವರ್ಗದ ವಿದ್ಯಾರ್ಥಿಗಳು ವರ್ತಿಸಿದ ರೀತಿ ಸೂಕ್ಷ್ಮಮತಿ ಫಣಿಯಮ್ಮನಿಗೆ ನೋವುಂಟುಮಾಡಿರಬಹುದಲ್ಲವೇ ? ಫಣಿಯಮ್ಮ ಈ ಸ್ಥಿತಿಗೆ ಬರುವ ಮೊದಲು ಇದನ್ನೆಲ್ಲ ಹೇಗೆ ಎದುರಿಸಿದಳು ? ದೂತ ಘಟೋತ್ಕಚ ನಾಟಕ ಕಲಿಕೆ ನೋಡುತ್ತಿರುವಾಗಲೇ ನನ್ನ ಮನದಲ್ಲಿ ಪ್ರಶ್ನೆಗಳು ಏಳತೊಡಗಿದ್ದವು. ಅಂದೇ ಸಂಜೆ ಅವಳನ್ನು ಭೇಟಿ ಮಾಡಿ ಮಾತಾಡಬೇಕೆಂದು ನಿರ್ಧರಿಸಿದೆ.

**ಕೂಲಿ ಮಾಡಿದರೇ ಜೀವ್ನ**

ಫಣಿಯಮ್ಮನ ಮನೆ ಬಳಿ ಹೋದಾಗ ಅವಳ ತಂದೆ ಸೋಮಪ್ಪ ಹೊರಗೆ ಕೂತಿದ್ದರು. ಫಣಿಯಮ್ಮ ಹೊರಬಂದು ಒಳಗೆ ಕರೆದಳು. ಚಿಕ್ಕ ಚೊಕ್ಕ ಮನೆಯೊಳಗೆ ಮೇಜು, ಕುರ್ಚಿಗಳು ಇದ್ದವು. 'ಅಮ್ಮ ಇದ್ದಾರಾ ?' - ಕೇಳಿದೆ. 'ಗದ್ದೆ ಕೆಲ್ಸಕ್ಕೆ ಹೋಗಿದಾರೆ' ಅಂದಳು. ಮಾತುಕತೆ ಶುರುವಾಯ್ತು.

''ಜಮೀನು ಇದೆಯಾ ?''

''ನಾಲ್ಕು ಎಕರೆ ಒಣ ಜಮೀನಿದೆ. ಅದರಲ್ಲೇನೂ ಆದಾಯ ಇಲ್ಲ. ಕೂಲಿ ಮಾಡಿದರೇ ನಮ್ಮ ಜೀವ್ನ.''

''ಶಾಲೇಲಿ ಓದುವಾಗ ಮೇಲ್ವರ್ಗದ ವಿದ್ಯಾರ್ಥಿಗಳು ನಿನ್ನ ಜೊತೆ ಸೇರ್ತಿದ್ರಾ ?''

''ಅವರ ರೀತಿ ನೀತಿಗೆ ಸಿಟ್ಟು ಬರ್ತಿತ್ತು. ನಾವು ಅವರ ಜೊತೆ ಹೆಚ್ಚಾಗಿ ಬೆರೀತಿರ್ಲಿಲ್ಲ. ಶಾಲೆಗೆ ಹೋಗಲ್ಲ ಅಂದ್ರೂ ನಮ್ಮಣ್ಣ ಶಾಲೆಗೊಯ್ದು ಕೂಡಿಹಾಕಿ ಬರ್ತಿದ್ದ.''

''ಶಾಲೇಲಿ ಓದುವಾಗ, ಹಾಡೋದು, ನಾಟಕದಲ್ಲಿ ಭಾಗವಹಿಸೋದು ರೂಢಿ ಇತ್ತಾ ?''

'ಹೆಡ್ಡಾಯಣ', 'ಮಂಗನಿಂದ ಮಾನವ', 'ಜಯಂಟ್ ಮಾಮ' ನಾಟಕಗಳಲ್ಲಿ ಭಾಗವಹಿಸಿದ್ದೆ. ಆದರೆ ೮ನೇ ತರಗತಿಗೆ ಬರೋ ಹೊತ್ತಿಗೆ ನಾಚಿಕೆ ಶುರುವಾಯ್ತು. ಆಮೇಲೆ ೧೦ನೇ ತರಗತಿವರೆಗೂ ಯಾವುದರಲ್ಲೂ ಭಾಗವಹಿಸಲೇ ಇಲ್ಲ.

''೧೦ನೇ ಕ್ಲಾಸ್ ಮುಗಿದ ನಂತ್ರ ವರದಾ ಮೂಲದಲ್ಲಿ ನಡೆದ ಸ್ಪರ್ಧೇಲಿ ಭಾಗವಹಿಸಿದ್ದೆ. ಲಾವಣೀಲಿ ಮೊದಲ ಬಹುಮಾನ ಬಂದಿತ್ತು.

''೧೯೮೩-೮೪ರಲ್ಲಿ ನೀನಾಸಂನ ಜನಸ್ಪಂದನ ಕಾರ್ಯಕ್ರಮ ಪ್ರಾರಂಭವಾಗಿತ್ತು. ಕರ್ನಾಟಕದಲ್ಲಿ ರಂಗ ಚಟುವಟಿಕೆ ಇಲ್ಲದ ಪ್ರದೇಶದಲ್ಲಿ ಚಟುವಟಿಕೆ ಪ್ರಾರಂಭಿಸೋದು ಅದರ ಉದ್ದೇಶವಾಗಿತ್ತು. ನಮ್ಮೂರಲ್ಲಿ 'ಮಾರಿಕೊಂಡವರು' ನಾಟಕ ಮಾಡಿಸುವಾಗ ಜಯತೀರ್ಥ ಜೋಷಿ ನನ್ನ ಗುರ್ತಿಸಿದರು. ನಂತರ 'ಹೆಣದ ಬಟ್ಟೆ' ನಾಟಕದಲ್ಲೂ ಅಭಿನಯಿಸಿದೆ. ಈ ನಾಟಕ ಸುಮಾರು ೧೮ ಪ್ರದರ್ಶನ ಆಯ್ತು. ಈ ಸಂದರ್ಭದಲ್ಲಿ ಪುರುಷೋತ್ತಮ ತಲವಾಟ, ತಾಳಗುಪ್ಪದ ಕಮಲಾಕ್ಷಿ ತುಂಬಾ ಚೆನ್ನಾಗಿ ನನ್ನ ನೋಡಿಕೊಂಡ್ರು.''



ನಮ್ಮ ಹಿಂದೂ ರಾಜರಿಗೆ ಈ ಗತಿ ಬಂತೆ !
ಐ. ಎಸ್. ಪಿ. ಗೆ ಧಿಕ್ಕಾರ !!

''ನೀನಾಸಂಗೆ ಬಂದಾಗ ಜಾತಿ ದೃಷ್ಟಿಯಿಂದ ಕಹಿ ಅನುಭವ ಆಗಿದ್ದುಂಟಾ ?''

''ಇಲ್ಲ. ಚಿದಂಬರರಾವ್ ಜಂಬೆ ಮತ್ತು ಕೆ. ವಿ. ಸುಬ್ಬಣ್ಣ ತುಂಬಾ ಪ್ರೋತ್ಸಾಹ ಕೊಟ್ರು. ನೀನಾಸಂ ರಂಗಶಿಕ್ಷಣ ಕೇಂದ್ರದಲ್ಲಿ ನನ್ನ ಜೊತೆಗೇ ಓದ್ತಿದ್ದ ವನಜಾಕ್ಷಿ-ಬ್ರಾಹ್ಮಣ ಹುಡುಗಿ - ಹೆಚ್ಚು ನನ್ನ ಜೊತೇನೇ ಇರ್ತಿದ್ಲು. ಆತ್ಮೀಯರಾದೆವು.''

''ರಂಗಕರ್ಮಿಗಳ ಬಗ್ಗೆ ನಮ್ಮಲ್ಲಿ ಕೀಳುದೃಷ್ಟಿ ಉಂಟು. ಈ ದೃಷ್ಟಿಯಿಂದ ಕೇಳ್ತಿದ್ದೇನೆ. ನೀನಾಸಂಗೆ ಸೇರೋದಕ್ಕೆ ಮನೇಲಿ ಪ್ರೋತ್ಸಾಹ ಇತ್ತಾ ?''

''ನಾಟಕ ಅಂದ್ರೆ ಮನೇಲಿ ಬಯ್ತಿದ್ರು. ಎಂಟನೇ ಕ್ಲಾಸಲ್ಲಿದ್ದಾಗಲೇ ನನಗೆ ಮದುವೆ ಮಾಡೋ ಮನಸ್ಸು ಮನೇವರಿಗಿತ್ತು. ನಾನೊಪ್ಪಲಿಲ್ಲ. ನಾಟಕ ರಂಗದಲ್ಲೇ ಮುಂದುವರಿದೆ. ಆಮೇಲಾಮೇಲೆ ಪ್ರೋತ್ಸಾಹ ಕೊಟ್ರು.''

**ಕಲಿಯುತ್ತ.. ಕಲಿಸುತ್ತ..** ಫಣಿಯಮ್ಮ ನೀನಾಸಂ ರಂಗಶಿಕ್ಷಣ ಕೇಂದ್ರದಲ್ಲಿ ಕೆಲಸ ಮಾಡತೊಡಗಿದ ಮೇಲೆ ವಿದ್ಯಾರ್ಥಿಗಳ ನಾಟಕದಲ್ಲೂ ಭಾಗವಹಿಸಿದಳು. ಮಕ್ಕಳಿಗೆ ನಾಟಕ ನಿರ್ದೇಶಿಸಿದಳು. ದೊಡ್ಡವರಿಗೂ ನಾಟಕ ಕಲಿಸಿದಳು.

ಪಿ. ಎಸ್. ರಾಮಪ್ಪನವರ ಪುಟ್ಟ ಅಕ್ಷರ ಲೋಕದಲ್ಲಿ ನಾಟಕಾನ ತುಮರಿ ಶಾಲಾ ಮಕ್ಕಳಿಗೆ ನಿರ್ದೇಶಿಸಿದಳು. ಅಲ್ಲಿರುವ ಸುಮಾರು ೬೮ ವಿದ್ಯಾರ್ಥಿಗಳನ್ನೂ ಅವರು ಈ ನಾಟಕದಲ್ಲಿ ಬಳಸಿಕೊಂಡಿದ್ದು ವಿಶೇಷವಾಗಿತ್ತು.

ಚಿದಂಬರರಾವ್ ಜಂಬೆಯವರು 'ಅಲ್ಲಾ ಉದ್ದೀನ್ ಅದ್ಭುತ ದೀಪ' ನಿರ್ದೇಶಿಸಿದಾಗ ಕಾಸ್ಟೂಮ್, ಸೆಟ್, ಮುಖವಾಡ ತಯಾರಿಕೆ ಕಲಿತ ಫಣಿಯಮ್ಮ *ಕಿಂದರಜೋಗಿ*, *ನಕ್ಷತ್ರ* ನಾಟಕಗಳನ್ನು ಹೆಗ್ಗೋಡಲ್ಲಿ ನಿರ್ದೇಶಿಸಿದಳು.

ತಮ್ಮ ಮನೆಯ ಸುತ್ತ ಕುಡಿತದ ಹಾವಳಿಯಿಂದ ಜನ ಹಾಳಾಗುತ್ತಿರುವುದನ್ನು ನೋಡಿ ಬೇಸತ್ತ ಫಣಿಯಮ್ಮ ಆ ಘಟನೆಗಳನ್ನೇ ಬಳಸಿ 'ಕುಡಿತದ ಕೆಡುಕು' ಎಂದು ಹೆಸರಿಟ್ಟು ಊರಿನ ದೊಡ್ಡವರಿಗೆ ನಾಟಕ ಆಡಿಸಿದಳು. ರೇಡಿಯೋ ನಾಟಕವೊಂದರ ಆಧಾರದಿಂದ *ಗೌಡನ ಗತ್ತು* ನಾಟಕ ರಚಿಸಿ ಸಾಗರದಲ್ಲಿ ಆಡಿಸಿದಳು.

ಫಣಿಯಮ್ಮನ ಅಪ್ಪ ಅಮ್ಮನಿಗೆ ನಾಟಕದಲ್ಲಿ ಆಸಕ್ತಿ ಇರಲಿಲ್ಲ. ಅಪ್ಪ ಜಾನಪದ, ಲಾವಣಿ ಹಾಡ್ತಿದ್ದರು. ಫಣಿಯಮ್ಮ ಅವುಗಳನ್ನು ಕಲಿತು ಜಿಲ್ಲಾ ಮಟ್ಟದ ಯುವಜನ ಮೇಳಗಳಲ್ಲಿ ಹಾಡಿ ಬಹುಮಾನ ಪಡೆದಳು. ಅಪ್ಪ ವಾಲಗದ ಶ್ರುತಿ ಹಿಡೀತಿದ್ರು. ಅಜ್ಜ ಮತ್ತು ಮಾವ ವಾಲಗದವರು. - ಹಿರಿಯರ ಈ ಚಟುವಟಿಕೆಗಳು ಫಣಿಯಮ್ಮ ನಾಟಕ ರಂಗದಲ್ಲಿ ತೊಡಗಲು ಕಾರಣವಾಗಿರಬಹುದೇನೋ.

ಫಣಿಯಮ್ಮನ ತಾಯಿ ಹಾಲಮ್ಮ. ಹಡೆದ ಐವರು ಹೆಣ್ಣು ಮಕ್ಕಳಲ್ಲಿ ನಡುವಿನವರು ಫಣಿಯಮ್ಮ. ಇಬ್ಬರು ಅಣ್ಣಂದಿರು. ಇವರೆಲ್ಲರಲ್ಲಿ ೧೦ನೇ ತರಗತಿಯವರೆಗೆ ಓದಿದವರು ಫಣಿಯಮ್ಮ ಮಾತ್ರ. ಒಬ್ಬ ಅಕ್ಕ ಗೌರಮ್ಮ ಹಸೆ ಕಲಾವಿದೆ. ಭೀಮನಕೋಣೆಯ 'ಚರಕ' ಮಹಿಳಾ ಗ್ರಾಮೋದ್ಯೋಗ ಘಟಕದ ಅಧ್ಯಕ್ಷೆ.

ಈಗ ಫಣಿಯಮ್ಮನಿಗೆ ನಾಚಿಕೆಯಾಗಲೀ, ತಾನು ದಲಿತಲೋಕದವಳು ಎಂಬ ಕೀಳರಿಮೆಯಾಗಲೀ ಇಲ್ಲ. ನೀನಾಸಂನಲ್ಲಿ ಎಲ್ಲರಂತೆ ಅವಳು.

೧೯೮೪ರಲ್ಲಿ ನೀನಾಸಂ ಸೇರಿದ ಈಕೆ ರಂಗಶಿಕ್ಷಣ ಮುಗಿದನಂತರ ಇಲ್ಲಿಯೇ ರಂಗಭೂಮಿ ಹಿನ್ನೆಲೆ ಕೆಲಸಗಳು ಮತ್ತು ದೈಹಿಕ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾಳೆ.

**ರಂಗಮಿತ್ರ - ಫಣಿಯಮ್ಮ**

ಅಂದು ಜಯತೀರ್ಥ ಜೋಷಿ ಫಣಿಯಮ್ಮನನ್ನು ಗುರುತಿಸದಿದ್ದರೆ, ಪುರುಷೋತ್ತಮ ತಲವಾಟ, ಕಮಲಾಕ್ಷಿ, ಕೆ. ವಿ. ಸುಬ್ಬಣ್ಣ, ಚಿದಂಬರರಾವ್ ಜಂಬೆ, ವನಜಾಕ್ಷಿ ಮುಂತಾದವರು ಪ್ರೋತ್ಸಾಹಿಸದಿದ್ದರೆ ೧೯೯೦ರಲ್ಲಿ ಪ್ರದರ್ಶನಗೊಂಡ 'ದೂತ ಘಟೋತ್ಕಚ' ನಾಟಕದಲ್ಲಿ ಫ್ರಿಟ್ಸ್ ಬೆನೆವಿಟ್ಸ್ ನಿರ್ದೇಶಿಸಿದ 'ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್' ನಾಟಕದಲ್ಲಿ ಫಣಿಯಮ್ಮನನ್ನು ನೋಡುತ್ತಿರಲಿಲ್ಲ.

ರಂಗಮಿತ್ರ ಫಣಿಯಮ್ಮ ನಿರ್ದೇಶಿಸಿದ ಮಕ್ಕಳ ನಾಟಕವೊಂದನ್ನು ನಾವು - ಭಾರತಿ ಕಲಾವಿದರು - ನಮ್ಮೂರಲ್ಲೂ ಆಡಿಸಿದ್ದೆವು. ಫಣಿಯಮ್ಮನ ಇನ್ನೂ ಹೆಚ್ಚಿನ ನಾಟಕಗಳನ್ನು ನಮ್ಮೂರಲ್ಲಿ ಆಡಿಸುವ ಬಯಕೆಯಿದೆ.

ಬಂದಗದ್ದೆ ರಾಧಾಕೃಷ್ಣ
ಕೆಳದಿ ಪೋಸ್ಟ್, ಶಿವಮೊಗ್ಗ - ೫೭೭ ೪೦೧

# ಯೋಗಪ್ರವೇಶ-೨೨

**ಜಿ. ರಾಮಕೃಷ್ಣ**

ಸರ್ವಾಂಗಾಸನವನ್ನು ಮಾಡುವ ಕ್ರಿಯೆಯಲ್ಲಿ ಜಾಲಂಧರ ಬಂಧವು ಸಹಜವಾಗಿ ಉಂಟಾಗುತ್ತದೆಂದು ಹಿಂದೆಯೇ ಸೂಚಿಸಲಾಗಿತ್ತು. ಪದ್ಮಾಸನ – ಸಿದ್ಧಾಸನಗಳ ಭಾಗವಾಗಿ ಸಹ ಈ ಬಂಧವನ್ನು ಅಭ್ಯಾಸ ಮಾಡಬಹುದು. ಗಲ್ಲವನ್ನು ಎದೆಯತ್ತ ಬಗ್ಗಿಸಿದಾಗ ಕಂಠಭಾಗವು ಸಂಕುಚಿತಗೊಳ್ಳುತ್ತದೆ. ಕಂಠದ ಕಚ್ಚು (ಇದನ್ನು ಇಂಗ್ಲಿಷಿನಲ್ಲಿ 'ನಾಚ್' ಎನ್ನುತ್ತಾರೆ) ಇರುವ ಭಾಗಕ್ಕೆ ಗಲ್ಲವನ್ನು ಒತ್ತಿಹಿಡಿಯುವುದು ಜಾಲಂಧರ ಬಂಧ. ಹಠಪ್ರದೀಪಿಕೆಯ ವಿವರಣೆಯು ಇದನ್ನೇ ದೃಢೀಕರಿಸುತ್ತದೆ (ಕಂಠಮಾಕುಂಚ್ಯ ಹೃದಯೇ ಸ್ಥಾಪಯೇಚ್ಚಿಬುಕಂ ದೃಢಮ್। ಬಂಧೋ ಜಾಲಂಧರಾಖ್ಯೋಽಯಂ ಜರಾಮೃತ್ಯುವಿನಾಶಕಃ॥ ೩.೬೯). ಪ್ರಾಣಾಯಾಮದ ಭಾಗವಾದ ಕುಂಭಕಕ್ಕೆ (ಒಳಕ್ಕೆ ತೆಗೆದುಕೊಂಡ ಶ್ವಾಸವನ್ನು ಅಲ್ಲಿಯೇ ಹಿಡಿದಿಟ್ಟುಕೊಳ್ಳುವುದು) ಇದು ಪೂರಕವಾಗಿರುತ್ತದೆ. ಒಂದೊಂದು ಬಾರಿಯೂ ಇದನ್ನು ಅರ್ಧ ನಿಮಿಷದ



ವರೆಗೆ ಮಾಡಬಹುದು. ಧ್ವನಿಯನ್ನು ಹೊರಡಿಸಲು ಅನುವಾಗುವ ಎಲ್ಲ ಅಂಗಗಳಿಗೂ ಇದು ಹಿತವಾದುದು. ಕುತ್ತಿಗೆ ನೋವು, ಬೆನ್ನೆಲುಬಿನ ನೋವು ಇರುವವರು ಇದನ್ನು ಅಭ್ಯಾಸ ಮಾಡಬಾರದು. ಬೆನ್ನುಹುರಿಯನ್ನು ಸ್ವಲ್ಪಮಟ್ಟಿಗೆ ಮೇಲೆತ್ತುವಂತಹ ವ್ಯಾಯಾಮವು ಈ ಬಂಧದಿಂದ ಸಾಧ್ಯವಾಗುತ್ತದೆ. 'ಜಾಲ' ಎಂಬುದು ಮಿದುಳನ್ನು ಹಾಗೂ ಕುತ್ತಿಗೆಯ ಮುಖಾಂತರ ಹಾದುಹೋಗುವ ನರಗಳನ್ನು ಸೂಚಿಸುತ್ತದೆ. ಅದನ್ನು ಮೇಲಕ್ಕೆತ್ತುವುದು (ಧರ) ಈ ಬಂಧದ ಉದ್ದೇಶ.

ಜಿಹ್ವಾ ಬಂಧ ಸಹ ಪ್ರಾಣಾಯಾಮಕ್ಕೆ ಪೂರಕವಾದ ಕ್ರಿಯೆ. ನಾಲಿಗೆಯನ್ನು ಬಾಯಿಯ ಮಾಳಿಗೆಯಂತಿರುವ 'ತಾಲು' ಎಂಬ ಭಾಗಕ್ಕೆ ಗಟ್ಟಿಯಾಗಿ ಒತ್ತಿಹಿಡಿಯುವುದು ಹಾಗೂ ನಾಲಿಗೆಯ ತುದಿಗಳನ್ನು ಮೇಲಿನ ದವಡೆಗಳಿಗೆ ಆನಿಸುವುದು ಈ ಬಂಧಕ್ಕೆ ಅಗತ್ಯವಾಗುತ್ತದೆ. ನಾಲಿಗೆಯು ತಾಲುವನ್ನು ಸಂಪೂರ್ಣವಾಗಿ ಆಶ್ರಯಿಸುವಂತಾಗಬೇಕು. ಹಿಂದೆ ವಿವರಿಸಿದ್ದ ವಿಪರೀತ ಕರಣಿ ಮಾಡುವಾಗ ಈ ಬಂಧವನ್ನು ಪ್ರಯೋಗಿಸುವುದು ಉಚಿತವೆನ್ನುತ್ತಾರೆ. ಬಾಯಿಯನ್ನು ಮುಚ್ಚಿಕೊಂಡಿದ್ದರೂ ಈ ಬಂಧವನ್ನು ಅನುಭವಿಸಲು ಸಾಧ್ಯ. ಕಂಠಭಾಗದ ಮಾಂಸಖಂಡಗಳಿಗೆ ರಕ್ತ ಸಂಚಾರವು ಹೆಚ್ಚಲು ಈ ಬಂಧ ಸಹಾಯಕವಾಗುತ್ತದೆ. ಥೈರಾಯಿಡ್ ಗ್ರಂಥಿಗೂ ಒಳ್ಳೆಯ ವ್ಯಾಯಾಮ ಒದಗಿಸುತ್ತದೆ. ಕಿವಿಯ ತಮಟೆಯು ಗಟ್ಟಿ ಯಾಗಿಕಿವುಡುತನ ಉಂಟಾಗುವ ಸಾಧ್ಯತೆಯಿದ್ದರೆ ಈ ಬಂಧದ ಅಭ್ಯಾಸವು ಅದರ ನಿವಾರಣೆಗೆ ಸಹಾಯಕವೆನ್ನುತ್ತಾರೆ.

ಮೂಲ ಬಂಧವು ಗುದನಾಳದ ಸುತ್ತ ಇದ್ದು ಅದನ್ನು ಮುಚ್ಚಲು ಅನುಕೂಲ ಮಾಡಿಕೊಡುವ ಉಂಗುರಾಕಾರದ ಸಂಕೋಚಕ ಸ್ನಾಯುಗಳಿಗೆ ಸಂಬಂಧಿಸಿದ್ದು. ಆ ಉಂಗುರಾಕಾರದ ಸ್ನಾಯುಗಳನ್ನು (ಅವನ್ನು ಇಂಗ್ಲಿಷಿನಲ್ಲಿ 'ಸ್ಫಿಂಕ್ಟರ್ಸ್' ಎನ್ನುತ್ತಾರೆ) ಬಲವಂತವಾಗಿ ಸಂಕೋಚನಗೊಳಿಸುವುದು ಈ ಬಂಧದ ಕ್ರಿಯೆಯ ಮೂಲಾಂಶ. ಇದಕ್ಕೆ ಪದ್ಮಾಸನ ಅಥವಾ ಸಿದ್ಧಾಸನವು ಅವಶ್ಯಕ. ಇದು ಸಿದ್ಧಾಸನದ ಒಂದು ಅಂಗವೆಂದರೂ ತಪ್ಪಾಗಲಾರದು. ಗುದನಾಳದ ಉಂಗುರ ಸ್ನಾಯುಗಳ ಸಂಕೋಚನಕ್ಕೆ ಇಡೀ ಕಿಬ್ಬೊಟ್ಟೆಯ ಸಂಕೋಚನವು ಅಗತ್ಯವಾಗುತ್ತದಾದ್ದರಿಂದ ಈ ಬಂಧವು ಕಿಬ್ಬೊಟ್ಟೆಯ ವ್ಯಾಯಾಮವಾಗಿಯೂ ಪರಿಣಮಿಸುತ್ತದೆ. ಗುದನಾಳದ ಉಂಗುರ ಸ್ನಾಯುಗಳಲ್ಲಿ ನರಮಂಡಲದ ಎರಡು ವಿಭಾಗಗಳು ಕೊನೆಗೊಂಡಿರುತ್ತವೆ. ಆ ನರಗಳಿಗೆ ಈ ಬಂಧವು



ವ್ಯಾಯಾಮ ಒದಗಿಸುತ್ತದೆ. ನರಮಂಡಲದ ಮೂಲಭಾಗದ ಸಂಕೋಚನವೆಂಬ ಕಾರಣದಿಂದ ಇದಕ್ಕೆ ಮೂಲಬಂಧವೆಂಬ ಹೆಸರಿದೆ. ಈ ಬಂಧದ ಪ್ರಯೋಗದಲ್ಲಿ ನ್ಯೂನತೆ ಉಂಟಾದರೆ ಮಲಬದ್ಧತೆಯು ಸಂಭವಿಸುವ ಸಾಧ್ಯತೆ ಇರುತ್ತದಾದ್ದರಿಂದ ಎಚ್ಚರಿಕೆ ಅಗತ್ಯ. ಅಂತೆಯೇ ಜನನಾಂಗಗಳ ಮೇಲೂ ಅಹಿತಕರ ಪರಿಣಾಮ ಉಂಟಾಗುವುದರಿಂದ ತಪ್ಪಿಸಿಕೊಳ್ಳಬೇಕು. ವ್ಯವಸ್ಥಿತವಾಗಿ ಈ ಬಂಧವನ್ನು ಅಭ್ಯಾಸ ಮಾಡಬೇಕಾದ್ದು ಈ ಕಾರಣಗಳಿಂದಲೇ ಎನ್ನಬಹುದು. ಸಹಜವಾಗಿಯೇ ಈ ಬಂಧವನ್ನು ಚಿತ್ರದ ಮೂಲಕ ನಿರ್ದೇಶಿಸುವುದು ಸಾಧ್ಯವಿಲ್ಲ. ಪ್ರಾಣಾಯಾಮದ ಅಂಗವಾಗಿ ಈ ಬಂಧವನ್ನು ಅಭ್ಯಸಿಸುವುದು ರೂಢಿಯಲ್ಲಿದೆ.

ಪ್ರಾಣಾಯಾಮವನ್ನು ಲೇಖನಗಳ ಮುಖಾಂತರ ತಿಳಿಸಿಕೊಡುವ ಸಾಮರ್ಥ್ಯ ಪ್ರಸ್ತುತ ಲೇಖಕನಿಗೆ ಇಲ್ಲವಾದ್ದರಿಂದ ಆ ಪ್ರಯತ್ನಕ್ಕೆ ಕೈ ಹಾಕುವುದಿಲ್ಲ. ಮೊದಲಿಗೆ ಉಜ್ಜಾಯೀ ಒಂದನ್ನು ವಿವರಿಸಲಾಗಿತ್ತು. ಅದೂ ಒಂದು ವಿಧದ ಪ್ರಾಣಾಯಾಮವೇ. ಅದಕ್ಕಿಂತಲೂ ಸಂಕೀರ್ಣವಾದ ಪ್ರಾಣಾಯಾಮ ವಿಧಾನಗಳಿವೆ. ಅವನ್ನು ಚೆನ್ನಾಗಿ ಅಭ್ಯಾಸ ಮಾಡಿರುವವರಿಂದ ನೇರವಾಗಿ ಕಲಿತುಕೊಳ್ಳುವುದು ಉತ್ತಮ. ಒಳ್ಳೆಯ ಯೋಗಾಭ್ಯಾಸ ಪಟುವು ಬೇರೇನೇ ಮಾಡಲಿ ಬಿಡಲಿ, ಪ್ರಾಣಾಯಾಮವನ್ನು ತಪ್ಪದೆ ಮಾಡುತ್ತಾನೆಂಬ ಮಾತೊಂದಿದೆ. ಕೆಲವರು ಯಾಂತ್ರಿಕವಾಗಿ ಮೂಗು ಹಿಡಿದುಕೊಂಡು (ತಮ್ಮದೇ ಮೂಗನ್ನು ಎಂದು ಹೇಳಬೇಕಾಗಿಲ್ಲವಷ್ಟೆ!) ತಮಗರ್ಥವಾಗದ ಕೆಲವು ಮಂತ್ರಗಳನ್ನು ಮಟಮಟ ಹೇಳಿಕೊಳ್ಳುತ್ತಾರೆ. ಅದೇ ಪ್ರಾಣಾಯಾಮವೆಂದು ಅವರು ನಂಬುತ್ತಾರೇನೋ! ಆದರೆ ನಿಜವಾದ ಪ್ರಾಣಾಯಾಮವು ಅಷ್ಟು ಅರ್ಥ ವಿಹೀನವೂ ಅಲ್ಲ, ಅನುಪಕಾರಿಯೂ ಅಲ್ಲ. ಏಕಾಗ್ರತೆಯ ಸಾಧನವಾಗಿ ಮನಸ್ಸಿನ ಆರೋಗ್ಯಕ್ಕೆ ಮತ್ತು ಉತ್ತಮ ವ್ಯಾಯಾಮವಾಗಿ ದೇಹಕ್ಕೆ ಅದು ಬಹಳ ಪ್ರಯೋಜನಕಾರಿಯೆಂದು ಅನುಭವದಿಂದ ಸಾಬೀತಾಗಿದೆ. ಆದ್ದರಿಂದ ಆಸನ-ಪ್ರಾಣಾಯಾಮಗಳು ಕ್ಷುದ್ರ ಸಂಪ್ರದಾಯದ ಭಾಗವೆಂದು ಅಲಕ್ಷಿಸದೆ ಅವನ್ನು ಯಥಾವತ್ತಾಗಿ ಅಭ್ಯಾಸ ಮಾಡುವುದು ಸ್ವಾಗತಾರ್ಹ.

'ಯೋಗಪ್ರವೇಶ'ದ ಲೇಖನಮಾಲೆಯನ್ನು ಇದರೊಂದಿಗೆ ಸಮಾಪ್ತಿ ಮಾಡಲಾಗಿದೆ.

❑❑❑

## ಸಾದರ ಸ್ವೀಕಾರ

**ಬೀದರ ಜಿಲ್ಲೆಯ ಅನುಭಾವಿ ಕವಿಗಳು**
ಬಸವರಾಜ ಸಬರದ
**ಪುಟ : ೫೮** **ಬೆಲೆ : ರೂ. ೫೦**
**ವಿಶ್ವಗುರು ಬಸವ ಧರ್ಮ ಪ್ರಚಾರ ಕೇಂದ್ರ,**
ಶ್ರೀಗುರು ಬಸವೇಶ್ವರ ಸಂಸ್ಥಾನ ಮಠ,
ಹುಲಸೂರು, ಬಸವಕಲ್ಯಾಣ, ಬೀದರ ಜಿಲ್ಲೆ

**ಕರ್ನಾಟಕಲೋಚನ** (ವಿಶೇಷಾಂಕ)
**ಪುಟ : ೧೪೪**
**ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ,**
ಬಿ. ಎಂ. ಶ್ರೀ. ಕಲಾಭವನ, ೪ನೇ ಮುಖ್ಯರಸ್ತೆ,
ಎನ್. ಆರ್. ಕಾಲೋನಿ, ಬೆಂಗಳೂರು - ೧೯

**ಮುಳುಗು ಕೋಟೆ** (ಗೀತ ನಾಟಕ)
ತೋ. ಮ. ಶಂಕ್ರಯ್ಯ
**ಪುಟ : ೭೦** **ಬೆಲೆ : ರೂ. ೩೦**
**ರಂಗಭಾರತಿ (ರಿ)**, ಹೂವಿನ ಹಡಗಲಿ - ೫೮೩೨೧೯,
ಬಳ್ಳಾರಿ ಜಿಲ್ಲೆ

**ವೈದ್ಯನ ವಚನಗಳು** ಡಾ॥ ಎಸ್. ಎಸ್. ಪಾಟೀಲ
**ಪುಟ : ೭೨** **ಬೆಲೆ : ರೂ. ೩೫**
**ಎಂ. ಆರ್. ಎಲ್. ಪಬ್ಲಿಷಿಂಗ್ ಹೌಸ್**, ೧೨೦೮,
೨ನೇ ಮಹಡಿ, ೨೬ನೇ ಮುಖ್ಯರಸ್ತೆ, ೪೧ನೇ ಅಡ್ಡರಸ್ತೆ
೯ನೇ ಬಡಾವಣೆ, ಜಯನಗರ, ಬೆಂಗಳೂರು - ೫೬೦೦೬೯

**ಚಿಗರೆಯ ಮರಿ** (ಕವಿತೆಗಳು) ಪಾ. ಭಿ. ಪಾಟೀಲ
**ಪುಟ : ೨೮** **ಬೆಲೆ : ರೂ. ೧೮**

**ಹೇಗಿದ್ದರು ಹೇಗಾದರು** (ಜೀವನ ಚಿತ್ರಗಳು)
ಸಿಸು ಸಂಗಮೇಶ
**ಪುಟ : ೩೨** **ಬೆಲೆ : ರೂ. ೨೦**

**ಗಾಳಿ ಹೋಯ್ತು ನೀರು ಬಂತು** (ಮಕ್ಕಳ ಪದ್ಯಗಳು)
ಸಿಸು ಸಂಗಮೇಶ
**ಪುಟ : ೩೨** **ಬೆಲೆ : ರೂ. ೨೦**
*ಈ ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಭಾರತೀ ಸಾಹಿತ್ಯ ಭಂಡಾರ**, ಕಂಬ್ರಾಜಿ ಬಜಾರ,
ವಿಜಾಪುರ - ೫೮೬ ೧೦೧

## ಸತ್ಯ ಮತ್ತು ಮೌಲ್ಯ

ಸತ್ಯ ಮತ್ತು ಮೌಲ್ಯಗಳು ಒಂದೇ ಅಥವಾ ಬೇರೆ ಬೇರೆಯೇ ಎನ್ನುವ ಪ್ರಶ್ನೆಗೆ ಬಹುಮಂದಿ 'ಬುದ್ಧಿಜೀವಿ'ಗಳಿಂದ ತಕ್ಷಣವೇ ಬರಬಹುದಾದ ಉತ್ತರ 'ಒಂದೇ' ಎಂದು. ಏಕೆಂದರೆ, ನಾವು ಹೇಳುತ್ತಲೇ ಬಂದಿಲ್ಲವೇ, ''ಯಾವಾಗಲೂ ಸತ್ಯವನ್ನೇ ಹೇಳು'' ಎಂದು ? ಇದರಿಂದ ಸತ್ಯವನ್ನೇ ಉನ್ನತ ಮೌಲ್ಯವನ್ನಾಗಿ ಪರಿಗಣಿಸಿದಂತಾಯಿತಲ್ಲ? ಮತ್ತೆ ಎರಡಕ್ಕೂ ವ್ಯತ್ಯಾಸವೆಲ್ಲಿಂದ ಬರಲು ಸಾಧ್ಯ ? ಹೀಗೆ ಸಾಗುವುದು 'ಬುದ್ಧಿಜೀವಿ'ಗಳ ಒಂದು ವಾದಸರಣಿ.

ಆದರೆ ಈ ಆದರ್ಶ ಸಿದ್ಧಾಂತದ ದಂತಗೋಪುರದಿಂದಿಳಿದು, ವಾಸ್ತವಿಕತೆಯ ಸವಾಲುಗಳನ್ನು ಎದುರಿಸಬೇಕಾದಾಗ, ಎರಡರ ಸಂಬಂಧವನ್ನು ಕುರಿತ ಪುನರ್ಪರಿಶೀಲನೆ ಅಗತ್ಯವೆನಿಸುತ್ತದೆ. ಇದನ್ನು ಮಾಡಬೇಕಾದವರೂ 'ಬುದ್ಧಿಜೀವಿ'ಗಳೇ. ''ಯಾವಾಗಲೂ ಸತ್ಯವನ್ನು ಹೇಳುವುದು ಒಳ್ಳೆಯದೇ ?'' ಎನ್ನುವ ಒಂದು ಪ್ರಶ್ನೆಯೇ ಸಾಕು, ಎರಡರ ವ್ಯತ್ಯಾಸವನ್ನು ಬೆಳಕಿಗೆ ತರುವುದಕ್ಕೆ. ಆರೋಗ್ಯವು ಕ್ಷೀಣಿಸುತ್ತಿರುವ ರೋಗಿಯೊಬ್ಬನಿಗೆ ವೈದ್ಯನು ಅವನ ಆರೋಗ್ಯವು ಸುಧಾರಿಸುತ್ತಿದೆಯೆಂದು 'ಸುಳ್ಳು' ಹೇಳಿದರೆ, ಅವನ ಆರೋಗ್ಯದ ಕ್ಷೀಣತೆಯ ತೀವ್ರತೆಯನ್ನಾದರೂ ಸ್ವಲ್ಪ ತಪ್ಪಿಸಲು ಸಾಧ್ಯವಾಗಬಹುದಲ್ಲವೇ ? ಅದೇ ಸಮಯದಲ್ಲಿ ರೋಗಿಯ ಕಾಯಿಲೆಯ ಉಪಶಮನಕ್ಕೆ ಬೇಕಾಗುವ ಔಷಧೋಪಚಾರವನ್ನು (ರೋಗಿಗೆ ತಿಳಿಯದಂತೆಯೂ) ಮಾಡುವುದು 'ಸತ್ಯನಿಷ್ಠನಾದ' ವೈದ್ಯನ ಕರ್ತವ್ಯವಾಗಿರುವುದಲ್ಲವೇ ? (ಈ ಬಗ್ಗೆ ಆರ್. ಕೆ. ನಾರಾಯಣ್‌ರ ಒಂದು ಕತೆಯನ್ನು ನೋಡಬಹುದು. 'ಎ ಡಾಕ್ಟರ್ಸ್ ವರ್ಡ್' ಎಂದು ಅದರ ಹೆಸರು).

ಯಾವುದೇ ಯುದ್ಧದಲ್ಲಿ ಒಂದು ರಾಷ್ಟ್ರವು ಸೋಲುತ್ತಿದ್ದರೂ, ಸೋಲುತ್ತಿಲ್ಲವೆಂದು ಸುದ್ದಿಯನ್ನು ಸಾರ್ವತ್ರಿಕ ಮಾಧ್ಯಮದಲ್ಲಿ ಬಿತ್ತರಿಸಿದರೆ, 'ಸತ್ಯಸುದ್ದಿ'ಯಿಂದ ದೇಶದಲ್ಲಾಗಬಹುದಾದ 'ಗಾಬರಿ'ಯನ್ನು ತಪ್ಪಿಸಿ, ಯುದ್ಧವನ್ನು ಧೈರ್ಯದಿಂದ ಮುಂದುವರಿಸುತ್ತಾ, ಕ್ರಮೇಣ ಗೆಲ್ಲಲೂಬಹುದಲ್ಲವೇ ? ಇದಲ್ಲವೆ ರಾಜಕೀಯ ಚಾಣಾಕ್ಷತನ ? ದಡ್ಡ ವಿದ್ಯಾರ್ಥಿಯೊಬ್ಬನನ್ನು ಅವನು 'ದಡ್ಡ'ನೆಂದು ಬೈಯ್ಯದೆ, ಅವನಿಗೆ ಬುದ್ಧಿ ಇದೆಯೆಂದೂ, ಪ್ರಯತ್ನಪಟ್ಟರೆ ಅದನ್ನು ಅಭಿವೃದ್ಧಿಗೊಳಿಸಿಕೊಳ್ಳಬಹುದೆಂದೂ ಉತ್ತೇಜನ ಕೊಟ್ಟರೆ ಅವನು ನಿಜವಾಗಿಯೂ ಪ್ರಯತ್ನಪಟ್ಟು ವಿದ್ಯಾವಂತನಾಗುವ ಸಾಧ್ಯತೆಯಿರುವುದಲ್ಲವೇ ? ನಿಜ ಜೀವನದಲ್ಲಿ ಇಂಥ ನಿದರ್ಶನಗಳನ್ನು ಎಷ್ಟೋ ಕೊಡಬಹುದು.

ಅಂದರೆ, ವಾಸ್ತವಿಕ ಜೀವನದ ಪರಿಧಿಯಲ್ಲಿ 'ಸತ್ಯ'ದ ಪಾತ್ರವೇನು ಎಂದು ಪರೀಕ್ಷಿಸಿ ನೋಡಿದರೆ, ಅದರಿಂದ 'ಕೆಡುಕು' ಸಂಭವಿಸಬಹುದಾದ ಕೆಲವು ಸಂದರ್ಭಗಳು ಇರುತ್ತವೆಂದು ವೇದ್ಯವಾಗುತ್ತದೆ. ಹಾಗಾದಮೇಲೆ, ಸತ್ಯವೇ ಉನ್ನತ ಮೌಲ್ಯ, ಯಾವಾಗಲೂ ಸತ್ಯವನ್ನೇ ಹೇಳಬೇಕು ಎನ್ನುವ 'ಆದರ್ಶ' ವಾಕ್ಯಗಳು ಅರ್ಥಹೀನವಾಗುತ್ತವೆ. ಸತ್ಯವೇ ಮೌಲ್ಯವೆನ್ನುವುದಕ್ಕಿಂತಲೂ, ಅದು ಕೆಲ ಸಂದರ್ಭಗಳಲ್ಲಿ 'ಮೌಲ್ಯ'ವೂ, ಮತ್ತೆ ಕೆಲವು ಸಂದರ್ಭಗಳಲ್ಲಿ 'ದುರ್ಮೌಲ್ಯ'ವೂ ಆಗಬಹುದೆಂದು ಹೇಳಬೇಕಾಗುತ್ತದೆ. ಆದ್ದರಿಂದಲ್ಲವೇ ನಮ್ಮಲ್ಲಿ ಹೇಳುವುದು ''ಪ್ರಿಯವಾದ ಅಸತ್ಯವನ್ನಾದರೂ ಹೇಳು, ಅಪ್ರಿಯವಾದ ಸತ್ಯವನ್ನು ಹೇಳಬೇಡ''ವೆಂದು.

ಇದರರ್ಥ, ಆಗಬಹುದಾದ ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡೇ ಯಾವುದೇ ಸಂದರ್ಭದಲ್ಲಿ ಸತ್ಯವನ್ನು ನುಡಿಯಬೇಕೆ, ಬೇಡವೇ ಎನ್ನುವುದನ್ನು ತೀರ್ಮಾನಿಸಬೇಕೆಂದಾಯಿತು. ಒಳ್ಳೆಯ ಪರಿಣಾಮಗಳು ಸತ್ಪಾತ್ರರಿಗೆ ಸಂಭವಿಸಿದರೆ ಮಾತ್ರ ನಾವು ಹೇಳುವ ಸತ್ಯವು 'ಮೌಲ್ಯ'ವನ್ನು ಪಡೆಯುತ್ತದೆ; ಇಲ್ಲದಿದ್ದರೆ ಪಡೆಯುವುದಿಲ್ಲ. ಇದನ್ನು ಒಪ್ಪುವುದಾದರೆ, ಸತ್ಯದಲ್ಲಿಯೇ 'ಆಂತರಿಕ' ಮೌಲ್ಯವೇನಿಲ್ಲ. ಮೌಲ್ಯವೆನ್ನುವುದು ಸಂದರ್ಭಾನುಸಾರ ಅದು ಪಡೆದುಕೊಳ್ಳಬಹುದಾದ ಒಂದು 'ಆಗಂತುಕ' ಗುಣವಷ್ಟೇ ಎಂದು ಪ್ರತಿಪಾದಿಸಿದಂತಾಗುತ್ತದೆ. ಈ ಅಭಿಪ್ರಾಯವನ್ನು ಪಾಶ್ಚಾತ್ಯ ತತ್ವಶಾಸ್ತ್ರಜ್ಞ ವಿಲಿಯಂ ಜೇಮ್ಸ್ (೧೮೪೨-೧೯೧೦) ವಿಶದವಾಗಿ ವ್ಯಕ್ತಪಡಿಸಿದ್ದಾನೆ.

ಇರುವುದನ್ನು ಇದ್ದಂತೆ ಹೇಳಿದರೆ ಅದು ಸತ್ಯ; ನಡೆದದ್ದನ್ನು ನಡೆದಂತೆ ಹೇಳಿದರೆ ಅದು ಸತ್ಯ. ಈ ಅರ್ಥದಲ್ಲಿ ಸತ್ಯವೆನ್ನುವುದು ಕೇವಲ ಒಂದು ಘಟನೆ ಅಥವಾ ವಿಷಯವನ್ನು ಕುರಿತ 'ಹೇಳಿಕೆ'ಯಷ್ಟೆ. ಆದರೆ ಈ 'ಹೇಳಿಕೆ'ಯು ವಾಸ್ತವಿಕ ಜೀವನದಲ್ಲಿ ನಿರೀಕ್ಷಿತ ನಿಸ್ವಾರ್ಥ ಶುಭ ಪರಿಣಾಮಗಳನ್ನು ಉಂಟುಮಾಡಿದರೆ ಮಾತ್ರ ಅದು 'ಮೌಲ್ಯ'ವೆನಿಸುತ್ತದೆ. ಈ ರೀತಿ 'ಸತ್ಯ' ಮತ್ತು 'ಅದರ ಮೌಲ್ಯ'ಗಳಿಗಿರುವ ವ್ಯತ್ಯಾಸವನ್ನು ಗ್ರಹಿಸಬೇಕಾಗುತ್ತದೆ. ಅಂದರೆ, ಸತ್ಯಕ್ಕಾಗಿ ಸತ್ಯವಲ್ಲ; ಮೌಲ್ಯಕ್ಕಾಗಿ ಸತ್ಯ; ಸ್ವಾರ್ಥರಹಿತ ಸಾಮಾಜಿಕ ಒಳಿತೇ ಮೌಲ್ಯ.

ಇದನ್ನು ಗಮನದಲ್ಲಿಟ್ಟುಕೊಂಡರೆ, ಕೆಲವು 'ಅಸಾಮಾನ್ಯ' ಸಂದರ್ಭಗಳಲ್ಲಿ ಯಾವುದೇ ವ್ಯಕ್ತಿಯು ಸ್ವಾರ್ಥಸುಖಾಪೇಕ್ಷೆಯಿಲ್ಲದೆ, ಮುಗ್ಧರ ಅಸಹಾಯಕ ಹಿತಕ್ಕಾಗಿ ಹೇಳುವ ಅಸತ್ಯಗಳನ್ನು, ಇಡೀ ರಾಷ್ಟ್ರದ ಬಹುಜನರ ಹಿತಕ್ಕಾಗಿ ಹೇಳುವ ಅಸತ್ಯಗಳನ್ನು, 'ಮೌಲ್ಯ' ಗಳನ್ನಾಗಿಯೇ ಪರಿಗಣಿಸಬೇಕಾಗುತ್ತದೆ; ಅವು ಕ್ಷಮಾರ್ಹವೂ ಹೌದು. ಆದರೆ ಕೇವಲ ಸ್ವಾರ್ಥ ಸಾಧನೆಗೆ ಯಾವುದೇ ವ್ಯಕ್ತಿಯು ನುಡಿಯುವ ಅಸತ್ಯವು ಅಕ್ಷಮ್ಯವೆನ್ನುವುದೂ ಅಷ್ಟೇ ಸರಿ.

ಜಿ. ಶ್ರೀನಿವಾಸನ್
೨೩೬೪, ೧೨ನೇ ಮೇನ್, 'ಎ' ಬ್ಲಾಕ್, ೨ನೇ ಹಂತ, ಸುಬ್ರಹ್ಮಣ್ಯನಗರ, ಬೆಂಗಳೂರು - ೫೬೦ ೦೧೦

## ಕಾಯುವ ಕಾಯಕ

ಶ್ರೀಕೃಷ್ಣನು ಗೋಪಾಲನಾಗಿದ್ದುದರಿಂದ ದನ ಕಾಯುವ ಕೆಲಸ ಮೊದಮೊದಲು ಕನಿಷ್ಠವೆಂದು ಯಾರಿಗೂ ಅನಿಸಿರಲಿಲ್ಲ. ಏಸು ಕ್ರಿಸ್ತನಿಂದಾಗಿ ಕುರಿ ಕಾಯುವುದೂ ಕನಿಷ್ಠವೆಂದೆನಿಸಿಕೊಂಡಿರಲಿಲ್ಲ. ಕಾಯುವುದು ಎಂದರೆ ಕಾಪಾಡುವುದು. ಕಾಯುವವನು ದೇವರಿಗೆ ಸಮಾನನಾಗಿದ್ದ. ಆದರೆ ಬರಬರುತ್ತಾ ಕಾಯುವವನು ಏನೂ ಕೆಲಸ ಮಾಡುವುದಿಲ್ಲ: ಅವನೊಬ್ಬ ಸೋಮಾರಿ, ಮರದ ಕೆಳಗೆ ಅವನು ಆರಾಮಾಗಿ ಕೂತಿರುತ್ತಾನೆ, ದನಗಳು – ಕುರಿಗಳು ಅವುಗಳ ಪಾಡಿಗೆ ಅವು ಮೇಯುತ್ತವೆ, ಬೆಳಿಗ್ಗೆ ಒಯ್ಯುವುದು ಸಂಜೆ ಹಿಂತಿರುಗಿಬಿಡುವುದು ಬಿಟ್ಟರೆ ಕಾಯುವವನಿಗೆ ಬೇರೇ ಕೆಲಸವಿಲ್ಲ. ಯಾವ ಕೆಲಸಕ್ಕೂ ಲಾಯಕ್ಕಿಲ್ಲದವನನ್ನು ದನ ಕಾಯಲು ಹಾಕು ಎನ್ನುವಂತಾಯ್ತು. ವಿದ್ಯಾವಂತ ವರ್ಗದಲ್ಲೂ ಯಾವ ಕೆಲಸಕ್ಕೂ ಲಾಯಕ್ಕಿಲ್ಲದವನು ಶಾಲಾ ಮಾಸ್ತರನಾಗಿಬಿಡುತ್ತಿದ್ದ. ಇಲ್ಲಿ ಕಾಯುವುದು ಎನ್ನುವುದಕ್ಕೆ ಕಾಪಾಡುವುದು ಎನ್ನುವ ಘನವಾದ ಪಟ್ಟವಿಲ್ಲ. 'ಮೇಲ್ಮೇಲೆ ನೋಡಿಕೊಳ್ಳುವುದು' ಎನ್ನುವ ವ್ಯಾವಹಾರಿಕ ತಾತ್ಸಾರವಿದೆ.

ಈ ಬಗೆಯ ಉಪೇಕ್ಷೆ ಸರಿಯಲ್ಲ ಎಂದು ತೋರಿಸಿಕೊಟ್ಟವನು ಆಂಗ್ಲ ಮಹಾಕವಿ ಮಿಲ್ಟನ್. ''ನಿಂತು ಕಾಯುವವರದೂ ಒಂದು ಸೇವೆಯೇ'' ಎಂದು ಅವನು ಸಮರ್ಥಿಸಿದ್ದಾನೆ. ನಿಜ, ರಣರಂಗದಲ್ಲಿ ಕಾದಾಡುವ ಸೈನಿಕನ ಸೇವೆಗಿಂತ ಕೋಟೆಯ ಬಾಗಿಲನ್ನು ಭದ್ರವಾಗಿ ಕಾಯುವ ಕಾವಲುಗಾರನ ಸೇವೆ ಅಲ್ಪವಲ್ಲ. ಕೋಣೆಯೊಳಗೆ ಕೂತ ಸಾಹೇಬರನ್ನು ನೋಡಬಯಸುವವರು ಒಂದೇ ಬಾರಿಗೆ ಬಂದು ಮುತ್ತಿಗೆ ಹಾಕಿ ಕೆಲಸ ಮಾಡಲಾಗದಂತಹ ಪರಿಸ್ಥಿತಿ ಬರಬಾರದೆಂದು ನಿಯಂತ್ರಿಸುವ ಸಲುವಾಗಿ ಬಾಗಿಲಿಗೆ ಅಡ್ಡ ನಿಲ್ಲುವ ಪ್ಯೂನಿನ ಸೇವೆಯೂ ಅಲ್ಪವಲ್ಲ. ಎಲ್ಲಾ ಬಗೆಯ ಕೆಲಸಗಾರರಿಗೂ ಸ್ವರ್ಗದಲ್ಲಿ ಜಾಗವಿದೆ ಎಂದು ಮಿಲ್ಟನ್ ಘೋಷಿಸಿದ.

ಹಾಯುವವರಿಗೆ ಕೊಬ್ಬಿದ್ದರೆ, ಕಾಯುವವರಿಗೇಕೆ ಕೊಬ್ಬಿರಬಾರದು ? ಕಾಯುವವರ ಕೊಬ್ಬು ಹೆಚ್ಚಾಗಿದ್ದರಿಂದಲೇ ''ದೇವರು ಕೊಟ್ಟರೂ ಪೂಜಾರಿ ಕೊಡ'' ಎಂಬ ಗಾದೆ ಹುಟ್ಟಿರಬೇಕು. ಯಾವುದೇ ಕೆಲಸವಾಗಲಿ ಅದಕ್ಕೊಂದು ಅಧಿಕಾರದ ಕೊಂಬು ಬಂದಾಗ ಎಂತೆಂಥವರೋ ಮಣಿಯಬೇಕಾಗುತ್ತದೆ. ಆಫೀಸಿನ ಒಬ್ಬ ಪೇದೆಯಿಂದ ದಬ್ಬಿಸಿಕೊಂಡು ಹೊರಬರಬೇಕಾದ ಪ್ರಸಂಗ ಎಷ್ಟೊಂದು ಅವಮಾನಕರ ಎಂದು ಊಹಿಸಿನೋಡಿ.

ಕಾಯುವ ಕೆಲಸ ಇಲ್ಲದವರಿಗೂ ಕಾಯುವುದು ತಪ್ಪಿದ್ದಲ್ಲ. ಬಸ್ಸಿಗಾಗಿ, ರೈಲಿಗಾಗಿ ಕಾಯುವುದು, ಸಮಾರಂಭಕ್ಕೆ ಮಂತ್ರಿಗಳಿಗಾಗಿ ಕಾಯುವುದು, ಸಕ್ಕರೆ, ಸೀಮೆಎಣ್ಣೆ, ಪೆಟ್ರೋಲ್, ಗ್ಯಾಸಿಗಾಗಿ ಕಾಯುವುದು, ವಿದ್ಯಾರ್ಥಿಗಳು ಪರೀಕ್ಷೆಯ ಫಲಿತಾಂಶಕ್ಕಾಗಿ ಕಾಯುವುದು, ಬಸುರಿ ಹೆಂಗಸರು ಹೆರಿಗೆಗಾಗಿ ಕಾಯುವುದು, ರೋಗಿಗಳು ಡಾಕ್ಟರಿಗಾಗಿ ಕಾಯುವುದು, ಚೌಕದಲ್ಲಿ ಸಿಗ್ನಲ್‌ಗಾಗಿ ಕಾಯುವುದು – ಒಂದೇ ಎರಡೇ. ಇದೆಲ್ಲಾ ನೋಡಿದರೆ ಬದುಕು ಇರುವುದೇ ಕಾಯುವುದಕ್ಕಾಗಿ ಎನಿಸಿಬಿಡುತ್ತದೆ. ನಾವು ಕೆಲಸ ಮಾಡುವ ವೇಳೆಗಿಂತ ಈ ಬಗೆಯಲ್ಲಿ ಹೆಜ್ಜೆ ಹೆಜ್ಜೆಗೆ ಕಾಯುವ ವೇಳೆಯೇ ಹೆಚ್ಚಿರಬಹುದು ಎಂದೆನಿಸುತ್ತದೆ. 'ತಾಳಿದವನು ಬಾಳಿಯಾನು' ಎಂಬ ಗಾದೆ ಕಾಯುವವನನ್ನು ನೋಡಿಯೇ ಕಟ್ಟಿರಬೇಕು.

ಕಾಯುವವನಿಗೆ ತಾಳ್ಮೆ ಇರಬೇಕು, ಸಹನೆ ಇರಬೇಕು. 'ಕಾಯು' ಎನ್ನುವ ಪದಕ್ಕೆ ಬಿಸಿಯಾಗು, ರೇಗು ಎಂಬ ಅರ್ಥವೂ ಇದೆ. ಇದು ಕಾಯುವವನ ಮನೋಸ್ಥಿತಿಯನ್ನು ಚಿತ್ರಿಸಬಹುದು. ಆದರೆ ಅದನ್ನು ತೋರ್ಪಡಿಸಿಕೊಂಡರೆ ಕಷ್ಟ ಕಟ್ಟಿಟ್ಟದ್ದು.

ಕಾಯುವುದನ್ನು ರೇಗದೆ ಅನುಭವಿಸಲು ನಾನು ಕಲಿತದ್ದು ಆಂಗ್ಲ ಲೇಖಕ ಚೆಸ್ಟರ್‌ಟನ್ನಿನಿಂದ. ''ಸರಿಯಾದ ದೃಷ್ಟಿಯಲ್ಲಿ ತೆಗೆದುಕೊಂಡರೆ ಅನಾನುಕೂಲವೆನ್ನುವುದು ಒಂದು ಸಾಹಸ'', ಎಂದ ಆ ಮಹಾನುಭಾವ. ಈಗ ನಾನು ಮನೆಗೆ ಬರುವಾಗ ದಾರಿಯಲ್ಲಿ ರೇಲ್ವೆ ಗೇಟು ಹಾಕಿದ್ದರೆ ಅಲ್ಲಿ ಬಂದು ಕಾಯುವವರ ವೇಷಭೂಷಣ, ಸಂತಾಪ ನೋಡುತ್ತಾ ನಿಲ್ಲುತ್ತೇನೆ. ನಮಗೆ ಬೇಕಿಲ್ಲದ್ದನ್ನು ನೋಡುವುದರಲ್ಲಿ ಒಂದು ಬಗೆಯ ಮನರಂಜನೆ ಇರುತ್ತದೆ ! ಅದೆಲ್ಲಾ ಕಾಯುವವನ ಮನೋಭಾವದಿಂದ ದಕ್ಕುವಂತಹದ್ದು. ಕಾಯುವುದು ಒಂದು ಕಾಯಕವೂ, ನೋಯಕವೂ ಹೌದು.

ಹಾಲಾಡಿ ಮಾರುತಿರಾವ್
೩/೪, ಮ್ಹಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ, ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦

HOSATHU Kannada Monthly / July 2001 Rs. 10
RNI Regn. No. KARKAN/1999/614 REGD. CPMG / KA / BG – 7 / 2001 Licenced to post without prepayment. Licence No. WPP(CO)-14



...rnataka Printers, No. 167 & 168, 10th Main, III Phase, Peenya Industrial Area, Bangalore-560 058 and Published
... Bangalore-560 001. Chief Editor : Dr. G. Ramakrishna